# ಶುಭಾಶಯಗಳೊಂದಿಗೆ




## ದಿ ನೆಹರೂನಗರ ಕೋ-ಆಪರೇಟಿವ್ ಬ್ಯಾಂಕ್ ಲಿಮಿಟೆಡ್

ನಂ. 172, 1ನೇ ಮುಖ್ಯರಸ್ತೆ, ಶೇಷಾದ್ರಿಪುರಂ, ಬೆಂಗಳೂರು - 560 020
ದೂರವಾಣಿ : 23364376/23562609

### ಬ್ಯಾಂಕಿನ ಆಡಳಿತ ಮಂಡಳಿ

ಅಧ್ಯಕ್ಷರು



ಶ್ರೀ ಕೆ. ಪಿ. ನರಸಿಂಹಮೂರ್ತಿ

ಉಪಾಧ್ಯಕ್ಷರು



ಶ್ರೀ ಬಿ. ಎಂ. ರುದ್ರಪ್ಪ

ನಿರ್ದೇಶಕರು



ಶ್ರೀ ಕೆ. ಎನ್. ಗೋಪಾಲ್



ಶ್ರೀ ಸೋಮಶೇಖರ್ ಎಂ.



ಶ್ರೀ ದೇವರಾಜು ಎಸ್. ಹೆಚ್.




ನಿರ್ದೇಶಕರು



ಶ್ರೀ ಸಿ. ವೇಣು



ಶ್ರೀ ಎಸ್. ಸುರೇಂದ್ರ



ಶ್ರೀ ಡಿ. ಎಚ್. ಗೌಡ



ಶ್ರೀಮತಿ ಹೆಚ್. ಜಿ. ಸುಮತಿ



ಶ್ರೀಮತಿ ಸರೋಜ ಕೆ. ಎಂ. ನಂಜಪ್ಪ

ಆಂತರಿಕ ಲೆಕ್ಕ ಪರಿಶೋಧಕರು



ಶ್ರೀ ಆರ್. ಶಶಿಧರ್

ಕಾರ್ಯದರ್ಶಿ



ಶ್ರೀ ಎಸ್. ಜಿ. ನಂದಕುಮಾರ್

**ದಿನಾಂಕ 31-3-2012ಕ್ಕೆ ಇರುವ ಬ್ಯಾಂಕಿನ ಆರ್ಥಿಕ ಸ್ಥಿತಿಯ ಪಕ್ಷಿನೋಟ**
(ರೂ. ಲಕ್ಷಗಳಲ್ಲಿ)

| | | | |
|---|---|---|---|
| ಷೇರು ಬಂಡವಾಳ | 192.69 | ಆಪದ್ಧನ ಮತ್ತು ಇತರೆ ನಿಧಿಗಳು | 674.92 |
| ಠೇವಣಿಗಳು | 4180.77 | ಸಾಲ ಮತ್ತು ಮುಂಗಡಗಳು | 3194.64 |
| ದುಡಿಯುವ ಬಂಡವಾಳ | 5283.30 | ನಿವ್ವಳ ಎನ್.ಪಿ.ಎ. ಶೇಕಡವಾರು | 2.41 |
| ಸಿ.ಆರ್.ಎ.ಆರ್. ಶೇಕಡವಾರು | 19.35 | ನಿವ್ವಳ ಲಾಭ | 55.03 |
| ಆಡಿಟ್ ವರ್ಗೀಕರಣ | "ಎ" | | |

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




**ಚಿತ್ರಗಳು :** ಕಮಲಂ ಅರಸು, ಪ್ರತೀಕ್, ರಾಂಚಂದ್ರ ಕೊಪ್ಪಲು, ಬಿ. ವಿ. ಎಚ್., ಗೋಪಿ, ಉಮೇಶ್ ಹಿರೇಮಠ್, ವಿ. ಗೋಪಾಲ್

**ಮುಖಚಿತ್ರ :** ಕೆ. ಎಲ್. ಗೋಪಾಲಕೃಷ್ಣ ರಾವ್

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ನವಕರ್ನಾಟಕ ಪ್ರಕಾಶನದ ಅನೇಕ ಪುಸ್ತಕಗಳ ಸಂಪಾದಕರು, 'ಹೊಸತು' ಪತ್ರಿಕೆಯ ಸಮಾಲೋಚಕರು-ಲೇಖಕರು-ಹಾದಿ ತೋರುವವರು, ಅದ್ಭುತ ಸಾಹಿತ್ಯ ಕೃಷಿ ಮಾಡಿದವರು, ಕನ್ನಡಕ್ಕೆ ವೈವಿಧ್ಯಮಯವಾದ ನೂರಾರು ಪುಸ್ತಕಗಳನ್ನು ಅನುವಾದಿಸಿರುವವರು, ವಿದ್ಯಾರ್ಥಿದೆಸೆಯಿಂದಲೂ ಕಮ್ಯುನಿಸ್ಟ್ ಕಾರ್ಯಕರ್ತರು-ಹೋರಾಟಗಾರರು, ಹೀಗೆ ಅನನ್ಯ ವ್ಯಕ್ತಿತ್ವದ ಆತ್ಮೀಯ ಹಿರಿಯ ಬಂಧು ಶ್ರೀ. ಕೆ. ಎಲ್. ಗೋಪಾಲಕೃಷ್ಣ ರಾವ್ ನಿಧನರಾಗಿದ್ದಾರೆ. ಅವರಿಗೆ 'ಹೊಸತು' ಬಳಗ ಮತ್ತು ನವಕರ್ನಾಟಕ ಸಂಸ್ಥೆ ಅತ್ಯಂತ ಗೌರವಪೂರ್ವಕ ವಿದಾಯ ಹೇಳುತ್ತವೆ, ಅತೀವ ಸಂತಾಪ ವ್ಯಕ್ತಪಡಿಸುತ್ತವೆ. 'ತುಂಬಲಾಗದ ನಷ್ಟ' ಎಂಬ ಮಾತು ಇಂಥವರ ವಿಷಯದಲ್ಲಿ ಕ್ಲೀಶೆ ಆಗುವುದಿಲ್ಲ. ಬಾಲ್ಯದಿಂದಲೂ ಅವರ ಒಡನಾಡಿ ಮತ್ತು ಸಹ-ಕಾರ್ಯಕರ್ತ ಶ್ರೀ. ಸಿ. ಆರ್. ಕೃಷ್ಣರಾವ್ ಮಾನ್ಯ ಗೋಪಾಲಕೃಷ್ಣ ರಾವ್ ಅವರ ಪರಿಚಯವನ್ನು ಈ ಸಂಚಿಕೆಯಲ್ಲಿ ಮಾಡಿಕೊಟ್ಟಿದ್ದಾರೆ. ಇಂಗ್ಲಿಷ್ ಬಿ.ಎ. (ಆನರ್ಸ್) ಪದವೀಧರ ಗೋಪಾಕೃಷ್ಣ ರಾಯರು ಕನ್ನಡದಲ್ಲಿ ವಿಜ್ಞಾನ ಕುರಿತ ಹತ್ತಾರು ಲೇಖನಗಳನ್ನು ಬರೆದಿದ್ದಾರೆ, ಗ್ರಂಥಗಳನ್ನು ಸಿದ್ಧಗೊಳಿಸಿದ್ದಾರೆ. ಇದರಲ್ಲಿ ಅವರೊಡನೆ ಕೆಲಸ ಮಾಡಿದ್ದ ಶ್ರೀಯುತರಾದ ಟಿ. ಆರ್. ಅನಂತರಾಮು, ಅಡ್ಡನಡ್ಕ ಕೃಷ್ಣ ಭಟ್ಟ ಮತ್ತು ಕೆ. ಪಿ. ಸ್ವಾಮಿ ಅವರು ಸಹ ಅವರ ಅನುಭವಗಳನ್ನು ಹಂಚಿಕೊಂಡಿದ್ದಾರೆ. ಮಾನ್ಯ ಡಾ|| ಯು. ಆರ್. ಅನಂತಮೂರ್ತಿ, ಶ್ರೀ. ಕೆ. ವಿ. ಸುಬ್ಬಣ್ಣ ಮುಂತಾದವರ ಸಹಪಾಠಿಯಾಗಿ ಗೋಪಾಲಕೃಷ್ಣ ರಾಯರು ಮೈಸೂರು ಮಹಾರಾಜ ಕಾಲೇಜಿನಲ್ಲಿ ವ್ಯಾಸಂಗ ಮಾಡಿದರು, ಕಮ್ಯುನಿಸ್ಟ್ ಕಾರ್ಯಕರ್ತರಾಗಿ ಜೈಲಿಗೆ ಹೋಗಿದ್ದರು. ಅತ್ಯಂತ ಸರಳವಾದ ಅವರು ದಿಟ್ಟ ಹೋರಾಟಗಾರರಿದ್ದಂತೆ ಬಹಳ ಸಂಕೋಚ ಸ್ವಭಾವದವರು, ಮೃದುಭಾಷಿಗಳು, ಸೈದ್ಧಾಂತಿಕವಾಗಿ ಗಟ್ಟಿಯಾದವರು ಮತ್ತು ಸ್ನೇಹಪರರು – ಅವರಿಗೆ ಮತ್ತೊಮ್ಮೆ ನಮನ ಸಲ್ಲಿಸುತ್ತೇವೆ.

* * *

ಬಿಹಾರದ ರಣವೀರ ಸೇನೆ ಎಂಬ ಹಿಂಸಾತ್ಮಕ ಬಣದ 'ಮುಖಿಯ' ಬ್ರಹ್ಮೇಶ್ವರನಾಥ ಸಿಂಗ್ ಆರಾದಲ್ಲಿ ಕೊಲೆಯಾಗಿ ಎರಡು ತಿಂಗಳು ಕಳೆದಿವೆ. ಆತನ ಸೇನೆಯು ಆರಾ, ಭೋಜಪುರ, ಜಹಾನಾಬಾದ್ ಮುಂತಾದ ಜಿಲ್ಲೆಗಳ ಭಾರಿ ಭೂಮಾಲಿಕರ ರಕ್ಷಣಾಪಡೆ ಎಂಬ ಹೆಸರು ಹೊಂದಿತ್ತು. ಆದರೆ ನಿಜಕ್ಕೂ ಅದು ಮೇಲ್ಜಾತಿಗಳ 'ಭೂಮಿಹಾರ್'ಗಳ ಸೇನಾಪಡೆ. ''ಭೂಮಿಯನ್ನು ಅಪಹರಿಸಿರುವವರು ಭೂಮಿಹಾರರು'' ಎಂಬ ವ್ಯುತ್ಪತ್ತಿ ಅವರಿಗೆ ಅನ್ವರ್ಥವಾಗಿದೆ. ಬ್ರಹ್ಮೇಶ್ವರನ ಕೊಲೆಯ ನಂತರ ಮಾಧ್ಯಮಗಳ ಪ್ರತಿಕ್ರಿಯೆ ಮಿಶ್ರರೂಪದಲ್ಲಿತ್ತು. ಆತನ ಬೆಂಬಲಿಗರು ಮೂರು ಜಿಲ್ಲೆಗಳಲ್ಲಿ ರಂಪ ಮಾಡಿ ಬೇಕಾದಷ್ಟು ಆಸ್ತಿಗೆ ಹಾನಿ ಮಾಡಿದರು, ಕೆಳಜಾತಿಗಳ ಸಾಮಾನ್ಯ ರೈತರ ಮೇಲೆ ಹಲ್ಲೆ ನಡೆಸಿದರು. ಆದರೆ ''ಆದರಣೀಯ'' ನಿತೀಶ್ ಕುಮಾರ್ ಸರ್ಕಾರ ಯಾರನ್ನೂ ಬಂಧಿಸಲಿಲ್ಲ, ಹಲ್ಲೆಗೊಳಗಾದ ಯಾರ ರಕ್ಷಣೆಗೂ ಬರಲಿಲ್ಲ. ಕೆಲವು ಪತ್ರಿಕೆಗಳು ದೊಡ್ಡ ನೈತಿಕ ವಾಹಕಗಳಾಗಿ ಅವನ ಕೊಲೆಯನ್ನು ಖಂಡಿಸಿದುವು, ನ್ಯಾಯಾಲಯವಲ್ಲದೆ ಬೇರಾರೂ ಅವನಿಗೆ ಶಿಕ್ಷೆ ನೀಡಬಾರದಿತ್ತು, ಮುಂತಾಗಿ ಹೇಳಿದವು; ಆದರೆ ರಣವೀರ ಸೇನೆಯ ಹಿಂದಿನ ಮತ್ತು ಇಂದಿನ ಪಾತಕಗಳ ಬಗ್ಗೆ ಅಷ್ಟೇನೂ ಗಮನ ಹರಿಸಲಿಲ್ಲ. ಇನ್ನೊಂದು ಪ್ರತಿಕ್ರಿಯೆ ''ಅಂತಹ ಹಂತಕನನ್ನು ಕೊಂದಿದ್ದಕ್ಕೆ ಕಣ್ಣೀರೇಕೆ ?'' ಎಂಬರ್ಥ ಬರುವ ಮಾತುಗಳ ರೂಪದಲ್ಲಿ ಬಂದಿತು. ನಮ್ಮ ದೇಶದಲ್ಲಿ ವರ್ಗ ಹೋರಾಟ ಅಗತ್ಯವೇ ಎಂಬುದಕ್ಕೆ ಬ್ರಹ್ಮೇಶ್ವರ ಸ್ಪಷ್ಟ ಉತ್ತರ ನೀಡಿದ್ದಾನೆ. ಅವನ ಹೆಣದ ಬಳಿಗೆ ಅಭಯಾನಂದ್ ಎಂಬ ಪೊಲೀಸ್ ಡೈರೆಕ್ಟರ್ ಜನರಲ್ ಸಹ ಸುಳಿಯಲು ಬಿಡಲಿಲ್ಲ ಅವನ ರಣವೀರ ಸೇನೆ. ತನ್ನ ಜೀವಿತಾವಧಿಯಲ್ಲಿ ಬಿಹಾರದ ನೂರಾರು ದಲಿತರ ಹಟ್ಟಿಗಳಿಗೆ ಅವನು ಬೆಂಕಿಯಿಟ್ಟಿದ್ದ, ಹತ್ತಾರು ಮುಸಲ್ಮಾನ ಕಾಲನಿಗಳನ್ನು ಧ್ವಂಸಮಾಡಿದ್ದ, ಲೆಕ್ಕವಿಲ್ಲದಷ್ಟು ಬಡ ಕೃಷಿ ಕಾರ್ಮಿಕರನ್ನು ಕೊಂದಿದ್ದ. ಅವನ ಕೊಲೆಗೆ ಸ್ವಲ್ಪ ಮುಂಚೆಯಷ್ಟೇ ನ್ಯಾಯಾಲಯವು ಅವನನ್ನು ಮತ್ತು ಅವನ ಪರಿವಾರವನ್ನು 'ನಿರಪರಾಧಿಗಳು' ಎಂಬ ತೀರ್ಪನ್ನಿತ್ತು ಕಾರಾಗೃಹದಿಂದ ಬಿಡುಗಡೆ ಗೊಳಿಸಿತ್ತು. ಅವನು ಜೈಲಿಗೆ ಹೋಗಿ ಸದಾ ಅಲ್ಲೇ ಇರಲು ಸಂಪೂರ್ಣ ಅರ್ಹತೆ

(ಆನೇ ಪುಟಕ್ಕೆ)




ಸಂಪುಟ-೧೪ ಸಂಚಿಕೆ-೧ ಆಗಸ್ಟ್ ೨೦೧೨

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೯೬

**ಹೊಸತು ಕಚೇರಿಯ ವಿಳಾಸ**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೪
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com
hosathu.nkp@gmail.com
URL : www.navakarnataka.com
http : //navakarnataka.blogspot.in
http : //hosathumonthly.blogspot.in




# ನೀತಿ ನಿರಾಕರಣೆಗೆ, ಅನೀತಿ ಅನುಕರಣೆಗೆ

ಕರ್ನಾಟಕಕ್ಕೆ ಹೊಸ ಸರಕಾರ ಬಂತು. ಹಾಗಂತ ಮಾಧ್ಯಮಗಳೂ ಬರೆದವು, ಜನರೂ ನಂಬಿದರು. ಚುನಾವಣೆ ಸಂದರ್ಭದಲ್ಲಿ ಆಯ್ಕೆ ಆಗಿ ಸರಕಾರ ರಚನೆ ಮಾಡಿದ ಪಕ್ಷ ಅಧಿಕಾರ ನಡೆಸುವ ಸಂದರ್ಭದಲ್ಲಿ ಸರಕಾರದ ಮುಖ್ಯಸ್ಥರನ್ನು ಬದಲಿಸುವುದು ಹೊಸದೇನೂ ಅಲ್ಲ. ಒಂದೇ ಪಕ್ಷ, ಆದರೆ ಮುಖ್ಯಸ್ಥರು ಮಾತ್ರ ಬದಲಾವಣೆಯಾದ ಉದಾಹರಣೆಗಳು ಸಾಕಷ್ಟಿವೆ. ಮುಖ್ಯಮಂತ್ರಿಯ ಸಾವಿನಿಂದಲೋ ವಿವಿಧ ಕಾರಣಗಳಿಂದಾಗಿ ರಾಜೀನಾಮೆಯಿಂದಲೋ, ಹೈಕಮಾಂಡ್‌ನ ತೀರ್ಮಾನ ಗಳಿಂದಲೋ, ಆಂತರಿಕ ಭಿನ್ನಾಭಿಪ್ರಾಯಗಳ ಫಲವಾಗಿಯೋ ಯಾರೋ ಅಧಿಕಾರ ಬಿಟ್ಟು ಇನ್ಯಾರೋ ಅಧಿಕಾರ ಹಿಡಿಯುತ್ತಾರೆ. ಅದಕ್ಕೆ ತಾರ್ಕಿಕ ಕಾರಣಗಳು ಇರಬಹುದು, ಇಲ್ಲದಿರಬಹುದು. ಆದರೆ ಒಂದೇ ಪಕ್ಷದ ಬೇರೆ ಬೇರೆ ವ್ಯಕ್ತಿಗಳು ಅಧಿಕಾರಕ್ಕೆ ಬಂದಾಗ ಅದನ್ನೊಂದು ಅಭೂತಪೂರ್ವ ಬದಲಾವಣೆ ಎಂಬಂತೆ ಮಾಧ್ಯಮಗಳು ತುತ್ತೂರಿ ಊದುತ್ತವೆ. ನಮ್ಮ ರಾಜ್ಯದ ಸರಕಾರಗಳಲ್ಲಾದ ಬೆಳವಣಿಗೆಯನ್ನೇ ಗಮನಿಸಿ. ಇಲ್ಲಿ ಮೂರು ಜನ ಮುಖ್ಯಮಂತ್ರಿಗಳು ನಾಲ್ಕು ವರ್ಷದ ಅವಧಿಯಲ್ಲಿ ಬದಲಾಗಿದ್ದಾರೆ. ಹಿಂದೆ ಕಾಂಗ್ರೆಸ್ ಪಕ್ಷದ ಆಡಳಿತದಲ್ಲಿಯೂ ಇಷ್ಟೇ ಸಂಖ್ಯೆಯ ಮುಖ್ಯಮಂತ್ರಿಗಳು ಆಗಿಹೋದರು. ಆದರೆ ಈ ಬಾರಿ ಮುಖ್ಯಮಂತ್ರಿಯ ಬದಲಾವಣೆಗಾಗಿ ನಡೆದ ಬೆಳವಣಿಗೆಗಳು ಕರ್ನಾಟಕದ ಜನತೆಯನ್ನು ತಲೆ ತಗ್ಗಿಸುವಂತೆ ಮಾಡಿವೆ. ಸದ್ಯದ ಮುಖ್ಯಮಂತ್ರಿ ಜಗದೀಶ ಶೆಟ್ಟರ ಬಗ್ಗೆ ಮಾಧ್ಯಮಗಳು ಏನೇ ಬರೆದರೂ ಅದು ದೈಹಿಕ ಮತ್ತು ಕೌಟುಂಬಿಕ ಮಾಹಿತಿಗಳ ಭಿನ್ನತೆಯೇ ಹೊರತು ಅವರ ಚಿಂತನೆ, ರಾಜಕಾರಣ, ಧೋರಣೆಗಳ ಕುರಿತು ಯಾವುದೇ ಭಿನ್ನತೆಯಲ್ಲ. ಮಾಜಿ ಮುಖ್ಯಮಂತ್ರಿಗಳಾದ ಯಡಿಯೂರಪ್ಪ, ಸದಾನಂದ ಗೌಡ ಮತ್ತು ಹಾಲಿ ಮುಖ್ಯಮಂತ್ರಿ ಜಗದೀಶ ಶೆಟ್ಟರ ಅವರು ಒಂದೇ ಮಣ್ಣಿನಲ್ಲಿ ಮಾಡಿದ ಮೂರು ಮೂರ್ತಿಗಳು. ಮೂರೂ ಜನ ಚಡ್ಡಿಯುಟ್ಟು ಲಾಠಿ ಹಿಡಿದೇ ಬೆಳೆದವರು. ಸದ್ಯದ ವಿದ್ಯಮಾನಗಳನ್ನು ನೋಡಿದರೆ ಈ ಸರಕಾರಕ್ಕೆ ಇನ್ನುಳಿದ ಒಂದು ವರ್ಷದ ಅವಧಿಗೆ ಜಗದೀಶ ಶೆಟ್ಟರ ಮುಂದುವರಿಯುತ್ತಾರೆಂಬ ನಂಬಿಕೆ ಇಲ್ಲ. ಶೆಟ್ಟರ ಸಚಿವ ಸಂಪುಟದಲ್ಲಿ ಸ್ಥಾನ ಪಡೆದವರು ಖಾತೆಗಳಿಗಾಗಿ ಕ್ಯಾತೆ ತೆಗೆದರೆ, ಸಚಿವ ಸ್ಥಾನಗಳಿಗಿಂತಲೂ ಹೆಚ್ಚಿನ ಸಂಖ್ಯೆಯ ಶಾಸಕರು ಸಚಿವ ಸ್ಥಾನ ಸಿಗದೇ ಭಿನ್ನಮತೀಯರಾಗಿ ಗಡ್ಕರಿಗೆ ಗಡುವು ಕೊಟ್ಟಿದ್ದಾರೆ. ಮೂಡಿಗೆರೆಯ ಬಿ.ಜೆ.ಪಿ.ಯ ಶಾಸಕ ಕುಮಾರ ಸ್ವಾಮಿ ಪ್ರಾಮಾಣಿಕವಾಗಿ ತಮ್ಮ ಅಭಿಪ್ರಾಯವನ್ನು ಮಾಧ್ಯಮಗಳಿಗೆ ಹೇಳಿದ್ದಾರೆ. ಟಿ.ವಿ. ಪ್ರತಿನಿಧಿಯೊಬ್ಬ ಸಚಿವ ಸ್ಥಾನಬೇಕು ಎಂದು ರಚ್ಚೆ ಹಿಡಿದಿದ್ದ ಅತೃಪ್ತ ಶಾಸಕ ಕುಮಾರ ಸ್ವಾಮಿಯವರನ್ನುದ್ದೇಶಿಸಿ, ಎಲ್ಲ ಸಚಿವ ಸ್ಥಾನಗಳನ್ನು ಹಂಚಿಯಾಗಿದೆ, ಈಗ ನೀವು ಗಲಾಟೆ ಮಾಡಿದರೆ ಏನು ಪ್ರಯೋಜನ ಎಂದು ಕೇಳಿದರೆ ''ಮುಂದೆಯೂ ಜೈಲಿಗೆ ಹೋಗುತ್ತಾರಲ್ಲ ಆಗ ಸಚಿವ ಸ್ಥಾನ ಖಾಲಿಯಾಗುತ್ತವೆ. ಆ ಸ್ಥಾನ ನನಗೆ ಬೇಕು'' ಎಂದು ಹೇಳಿದರು. ಇದು ಈ ಸರಕಾರದ ಕುರಿತು ಆಳುವ ಪಕ್ಷದ ಶಾಸಕರ ಅಭಿಪ್ರಾಯ. ಹಿಂದೂರಾಷ್ಟ್ರ ಕಟ್ಟಲು ಆರ್.ಎಸ್.ಎಸ್. ಹಾಗೂ ಬಿ.ಜೆ.ಪಿ. ತಯಾರಿಸಿದ ರಾಜಕೀಯ ಸೇನಾನಿಗಳ ಗುಣಮಟ್ಟ ಹೀಗಿದೆ.

ಇಂದು ರಾಜ್ಯದ ಆಡಳಿತ ಪಕ್ಷದಲ್ಲಿನ ಭಿನ್ನಮತಗಳನ್ನು ಗಮನಿಸಿದರೆ, ಎಲ್ಲ ಗುಂಪುಗಳಿಗಿರುವುದು ಒಂದೇ ಗುರಿ, ಅದು ಅಧಿಕಾರ ದಾಹ. ಇನ್ನುಳಿದ ದಿನಗಳಲ್ಲಿ ಸಾಧ್ಯವಾದಷ್ಟು ದುಡ್ಡು ಮಾಡುವುದು ಅವರ ಗುರಿ. ಒಂದು ರಾಷ್ಟ್ರಮಟ್ಟದ ರಾಜಕೀಯ ಪಕ್ಷದೊಳಗೆ ವ್ಯಕ್ತಿ, ಜಾತಿ, ಬಣ, ಹಣ ಪ್ರಮುಖವಾಗುತ್ತಿದೆಯೇ ಹೊರತು ಅವರೇ ಘೋಷಿಸಿದ ಕಾರ್ಯಕ್ರಮ, ನೀತಿಗಳಲ್ಲ. ಆ ಪಕ್ಷದ ಹೈಕಮಾಂಡ್ ಒಂದು ರಾಜ್ಯದ ಒಂದು ಜಾತಿಯ ಒಬ್ಬ ವ್ಯಕ್ತಿಯ ಹಿತಾಸಕ್ತಿಗೆ ಕೈಕಟ್ಟಿ, ತಲೆಬಾಗಿ ನಿಲ್ಲುತ್ತದೆಂದರೆ ರಾಜಕಾರಣ ತಲುಪಿದ ಸ್ಥಿತಿ ಅರ್ಥವಾಗುತ್ತದೆ. ಈ ಎಲ್ಲ ಬೆಳವಣಿಗೆಗಳು ಎಂಥ ಸಂದರ್ಭದಲ್ಲಿ ನಡೆದವು ಎಂಬುದನ್ನು ನಾವೆಲ್ಲ ಗಮನಿಸಬೇಕಾಗಿದೆ. ಕಳೆದ ಬಾರಿಯೇ ನಮ್ಮ ರಾಜ್ಯ ಬರಗಾಲಕ್ಕೆ ಬಲಿಯಾಗಿ ೧೨೩ ತಾಲೂಕುಗಳಲ್ಲಿ ಜನತೆಯ ಬದುಕು, ರೈತರ ಸ್ಥಿತಿ ಗಂಭೀರವಾಗಿತ್ತು. ರಾಜ್ಯದ ಉತ್ತರ ಭಾಗದಲ್ಲಿ ರೈತರು ಬಿತ್ತನೆಯನ್ನು ಮಾಡದೆ ಆಕಾಶ ನೋಡುತ್ತ ಆತಂಕದಲ್ಲಿದ್ದರು. ರಾಜ್ಯ, ಕೇಂದ್ರ ಸರಕಾರಗಳು ಬರ ಪರಿಹಾರದ ಮಾತನಾಡುತ್ತ ಟೀಕೆ, ಪ್ರತಿಟೀಕೆಯಲ್ಲಿ ದಿನ ಕಳೆದವು. ಈ ವರ್ಷವೂ ಜೂನ್ ತಿಂಗಳಲ್ಲಿ ಬರಬೇಕಾದ ಮುಂಗಾರು ಮಳೆ ಕೈಕೊಟ್ಟಿತು. ಸಾವಿರಕ್ಕೂ ಹೆಚ್ಚು ಹಳ್ಳಿಗಳಲ್ಲಿ ಕುಡಿವ ನೀರಿಲ್ಲ, ೧೫೦ ತಾಲ್ಲೂಕುಗಳಲ್ಲಿ ಬರ. ಸರಕಾರದ ಇಲಾಖೆಗಳೇ ಜೂನ್ ತಿಂಗಳಲ್ಲಿ ಒಂಭತ್ತು ಜಿಲ್ಲೆಗಳ ೭೦೧ ಗ್ರಾಮಗಳಿಗೆ ಕುಡಿವ ನೀರನ್ನು ಟ್ಯಾಂಕರ್‌ಗಳ ಮೂಲಕ ಸರಬರಾಜು ಮಾಡಿದ್ದೇವೆಂದು ಹೇಳಿದ್ದಾರೆ. ಇಲ್ಲಿ ಬರ ಎಂದರೆ ಗಮನಿಸಬೇಕಾದದ್ದು ಸರಕಾರ ಕೊಡುವ ಅಂಕಿ ಸಂಖ್ಯೆಗಳಲ್ಲ, ಜನರ ವಾಸ್ತವ ಪರಿಸ್ಥಿತಿ. ಉತ್ತರ ಭಾಗದ ನದಿಗಳಾದ ಕೃಷ್ಣಾ, ಮಲಪ್ರಭಾ, ಘಟಪ್ರಭಾ, ಭೀಮಾ ನದಿಗಳಲ್ಲಿ ಹನಿ ನೀರೂ ಇರಲಿಲ್ಲ. ಘಟಪ್ರಭಾ, ಮಲಪ್ರಭಾ ನದೀ ದಡದ ಜನ ನದಿ ಮಧ್ಯೆ ಗುಂಡಿ ತೋಡಿ ಬಸಿದು ಬರುವ ನೀರನ್ನು ತೆಗೆದು ಕುಡಿಯಲು ಪರದಾಡುತ್ತಿರುವ ದೃಶ್ಯ ಭಯಾನಕವಾಗಿತ್ತು. ಕೆ.ಆರ್.ಎಸ್. ಸೇರಿದಂತೆ ರಾಜ್ಯದ ಎಲ್ಲ ಜಲಾಶಯಗಳೂ ಬರಿದಾಗಿದ್ದವು. ಜೂನ್-ಜುಲೈ ತಿಂಗಳಲ್ಲಿ ಬಿತ್ತನೆಗೆ ಬೇಕಾದ ಬಹುತೇಕ ಮಳೆ ಬೀಳಬೇಕಿತ್ತು. ಬಿತ್ತನೆಗೆ ಹೋಗಲಿ, ಜನ, ಜಾನುವಾರು, ಪಶು, ಪಕ್ಷಿಗಳಿಗೆ ಕುಡಿಯುವ ನೀರಿಲ್ಲದಾಗ ಸದಾನಂದ ಗೌಡ ಇಳಿಯುತ್ತಾರಾ, ಜಗದೀಶ ಶೆಟ್ಟರ ಮುಖ್ಯಮಂತ್ರಿಯಾಗುತ್ತಾರಾ, ಯಡಿಯೂರಪ್ಪನವರ ಸ್ಥಾನವೇನು, ಯಾರ್‍ಯಾರು ಮಂತ್ರಿಗಳಾಗುತ್ತಾರೆ, ಯಾವ ಗುಂಪು ಪ್ರಬಲ, ಯಾರು ವೀಕು, ಯಾವ ಮಂತ್ರಿಗೆ ಯಾವ ಖಾತೆ, ಇದರಲ್ಲೇ ಆಳುವ ಪಕ್ಷದ ಸದಸ್ಯರಿಂದ ಮುಖ್ಯಮಂತ್ರಿವರೆಗೆ ಎಲ್ಲರೂ ಹಗಲು ರಾತ್ರಿ ಕಳೆದರು. ಮಾಧ್ಯಮಗಳದ್ದೂ ಇದೇ ಜಪ. ಇವರನ್ನು ಕ್ಷಮಿಸಲು ಸಾಧ್ಯವೇ, ಇಲ್ಲಿ ರಾಜಕಾರಣ ಅನ್ನುವುದೇನಾದರೂ ಇದೆಯೆ ಎಂಬ ಪ್ರಶ್ನೆಯನ್ನು ಇಂದು ರಾಜ್ಯದ ಜನತೆಗೆ ಕೇಳಬೇಕು. ಹೋಗಲಿ ವಿರೋಧ ಪಕ್ಷಗಳಾದ ಕಾಂಗ್ರೆಸ್, ಜನತಾದಳ ಪಕ್ಷಗಳಾದರೂ ಮಾಡಿದ್ದೇನು ಎಂದರೆ ಅವರು ಕ್ರಿಕೆಟ್ ಆಟ ನೋಡುವವರಂತೆ ಬಿ.ಜೆ.ಪಿ.ಯ ಮದದಾಟ ನೋಡುತ್ತಾ ಆಗೊಮ್ಮೆ ಈಗೊಮ್ಮೆ 'ಬರ, ಬರ' ಎಂಬ ಹೇಳಿಕೆಗಳನ್ನು ಕೊಡುತ್ತಿದ್ದರು. ಜೆ.ಡಿ.ಎಸ್.ನ ಅಧ್ಯಕ್ಷ

ಕುಮಾರಸ್ವಾಮಿಯವರಂತೂ ಬಿ.ಜೆ.ಪಿ.ಯ ಅತೃಪ್ತ ಶಾಸಕರು ನನ್ನ ಸಂಪರ್ಕದಲ್ಲಿದ್ದಾರೆ ಎಂದು ಹೇಳಿದರು. ಇಲ್ಲಿ ಕಾಂಗ್ರೆಸ್ ವಿರೋಧ ಪಕ್ಷವಾದರೂ ಕೇಂದ್ರದಲ್ಲಿ ಆಡಳಿತದಲ್ಲಿದೆ. ರಾಜ್ಯದ ಜನತೆ ಸಂಕಷ್ಟದಲ್ಲಿದ್ದ ವಿಷಯ ಕೇಂದ್ರ ಸರಕಾರಕ್ಕೆ ತಿಳಿಯುವುದಿಲ್ಲವೇ ? ರಾಜ್ಯದಿಂದ ರಾಜಕೀಯ ಪಕ್ಷಗಳ ನಿಯೋಗವೇ ಹೋಗಬೇಕೇ ? ರಾಜ್ಯ ಸರಕಾರದ ಕೋರಿಕೆ ಬರುವವರೆಗೆ ಕೇಂದ್ರಕ್ಕೆ ಏನೂ ಜವಾಬ್ದಾರಿ ಇಲ್ಲವೆ ? ರಾಜ್ಯದ ಕಾಂಗ್ರೆಸ್ ಪಕ್ಷದಲ್ಲಿಯೂ ಆಂತರಿಕ ಕಿತ್ತಾಟ ಆರಂಭವಾಗಿದೆ. ಈಗೇನೋ ಕಾಂಗ್ರೆಸ್‌ನವರು ಬಿ.ಜೆ.ಪಿ.ಯ ಇಂದಿನ ಸ್ಥಿತಿಗತಿಗಳನ್ನು ನೋಡಿ ಮುಂದಿನ ಬಾರಿ ತಾವೇ ಅಧಿಕಾರಕ್ಕೆ ಬರುತ್ತೇವೆಂದು ಮೌನವಾಗಿದ್ದಾರೆ. ಆದರೆ ಇಂದು ಬಹುತೇಕ ರಾಜಕೀಯ ಪಕ್ಷಗಳು ಕೆಳಹಂತದಲ್ಲಿ ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡು, ಜಾತಿ, ವ್ಯಕ್ತಿ, ಹಣಬಲವನ್ನೇ ನಂಬಿಕೊಂಡಿವೆ. ಎಡಪಕ್ಷಗಳನ್ನು ಹೊರತುಪಡಿಸಿ ಬೇರೆ ಪಕ್ಷಗಳಿಗೆ ತತ್ವ, ನೀತಿ, ಸಿದ್ಧಾಂತ ಯಾವುದೂ ಇಲ್ಲ. ಅಧಿಕಾರವೇ ಅವರ ಗುರಿ, ಅದಕ್ಕಾಗಿ ಅನೀತಿಯೂ ಅವರಿಗೆ ಮೌಲ್ಯವಾಗಿಯೇ ಕಾಣುತ್ತದೆ. ಇಂಥ ಸಂದರ್ಭದಲ್ಲಿ ರಾಜಕಾರಣಕ್ಕೊಂದು ನೀತಿ ಇರುವುದಿಲ್ಲ. ಭ್ರಷ್ಟತೆ ಸಾಧನೆಯ ಸಂಕೇತವಾಗುತ್ತದೆ. ಅದಕ್ಕೇ ಜನಾರ್ದನರೆಡ್ಡಿ ಜೈಲು ಸೇರಿ ಇಷ್ಟು ದಿನಗಳಾದರೂ ಅವರನ್ನು ಸದಸ್ಯತ್ವದಿಂದ ಕಿತ್ತುಹಾಕುವ ಧೈರ್ಯ ಬಿ.ಜೆ.ಪಿ. ನಾಯಕರಿಗಿಲ್ಲ. ಬಿ.ಜೆ.ಪಿ.ಯಲ್ಲಿ ಭ್ರಷ್ಟಾಚಾರದಲ್ಲಿ ಮುಳುಗೆದ್ದು, ವ್ಯಕ್ತಿಗತ ಕಾರಣಕ್ಕೆ ಭಿನ್ನಮತದಿಂದ ಹೊರಬರುವ ಶಾಸಕರನ್ನು ಬರಮಾಡಿಕೊಳ್ಳಲು ಜೆ.ಡಿ.ಎಸ್. ತನ್ನ ಮನೆಬಾಗಿಲು ತೆರೆದು ಕುಳಿತಿದೆ. ಅಂದರೆ ಬಿಜೆಪಿಯಲ್ಲಿದ್ದಾಗ ಭ್ರಷ್ಟರಾಗಿದ್ದವರು ಇವರ ಪಕ್ಷಕ್ಕೆ ಬಂದೊಡನೆ ಪುನೀತರು, ಪ್ರಾಮಾಣಿಕರು, ಜಾತ್ಯತೀತರು ಆಗಿಬಿಡುತ್ತಾರೆ. ಒಟ್ಟಿನಲ್ಲಿ ಅಧಿಕಾರ ಬೇಕು, ಅಧಿಕಾರದಿಂದ ಅನೈತಿಕ ಸಂಪತ್ತು ಸಂಗ್ರಹಿಸಬೇಕು. ಇದಕ್ಕಾಗಿ ರಾಜಕಾರಣ ಬೇಕು. ಇಂಥ ಸಂದರ್ಭಕ್ಕಾಗಿಯೇ ಬಹುರಾಷ್ಟ್ರೀಯ ಕಂಪನಿಗಳು, ದೇಶದ ಗುತ್ತೇದಾರಿ ಕಂಪನಿಗಳು ಕಾಯುತ್ತಿವೆ. ನಮ್ಮ ರಾಜಕಾರಣಿಗಳು ಭ್ರಷ್ಟರಾದಷ್ಟೂ ಅವರಿಗೆ ಅನುಕೂಲ. ಬರುವ ದಿನಗಳಲ್ಲಿ ನಮ್ಮ ರಾಜಕಾರಣಿಗಳು ಒಂದೊಂದು ಕಂಪನಿಯ ಪ್ರತಿನಿಧಿಗಳಾಗಿ, ಶಾಸಕರಾಗಿ, ಸಂಸದರಾಗಿ ಆಯ್ಕೆಯಾದರೂ ಆಶ್ಚರ್ಯವಿಲ್ಲ. ಇದಕ್ಕಾಗಿ ಜನರನ್ನೂ ಭ್ರಷ್ಟರನ್ನಾಗಿಸಿ ದುಡ್ಡು ಕೊಟ್ಟು ಮತ ಪಡೆದರೆ ಇವರ ದಾರಿ ಇನ್ನೂ ಸುಗಮ. ತಮ್ಮ ಮತವನ್ನು ಮಾರಿಕೊಂಡ ಪ್ರಜೆಗಳು ಮತ ಪಡೆದವರನ್ನು ಪ್ರಶ್ನಿಸುವ ನೈತಿಕ ಹಕ್ಕನ್ನೇ ಕಳೆದುಕೊಳ್ಳುತ್ತಾರೆ. ಇದು ನಮ್ಮ ರಾಜಕಾರಣಿಗಳಿಗೆ ಪ್ರಜೆಗಳ ಬಗ್ಗೆ ಇರುವ ಭಯ ಇಲ್ಲವಾಗಿಸುತ್ತದೆ. ಅದಕ್ಕೇ ಜನ ಎಂಥ ಸ್ಥಿತಿಯಲ್ಲಿದ್ದರೂ ಇವರು ಯಾವ ಸಂಕೋಚವಿಲ್ಲದೆ ನೀತಿರಹಿತ ರಾಜಕಾರಣವನ್ನು ಮುಂದುವರೆಸಿದ್ದಾರೆ. ಇವರೆಲ್ಲ ಮುಂದಿನ ಪೀಳಿಗೆಗೆ 'ನೀತಿ ನಿರಾಕರಣೆಗೆ, ಅನೀತಿ ಅನುಕರಣೆಗೆ' ಎಂಬ ಸಿದ್ಧಾಂತವನ್ನು ಕಂಠಪಾಠ ಮಾಡಿಸುತ್ತಿದ್ದಾರೆ.

ಹೊಸದಾಗಿ ಮುಜರಾಯಿ ಸಚಿವರಾದ ಕೋಟಾ ಶ್ರೀನಿವಾಸ ಪೂಜಾರಿಯವರು ಸಮೃದ್ಧ ಮಳೆ-ಬೆಳೆಗಾಗಿ ವಿಶೇಷ ಪೂಜೆ, ಹೋಮ, ಹವನ ಮಾಡಲು ರಾಜ್ಯದ ಮುಜರಾಯಿ ವ್ಯಾಪ್ತಿಯ ದೇವಾಲಯಗಳಿಗೆ ಆದೇಶ ನೀಡಿದ್ದಾರೆ. ಈಗಾಗಲೇ ಅಲ್ಲಿ ಪೂಜೆ, ಪುನಸ್ಕಾರಗಳು ನಡೆಯುತ್ತಿದ್ದರೂ ಆ ದೇವರುಗಳು ಪ್ರಸನ್ನರಾಗಿಲ್ಲ, ಅದರಿಂದ ಬರಗಾಲ ಬಂದಿದೆ. ಆ ದೇವರುಗಳಿಗೂ ಮುಜರಾಯಿ ಇಲಾಖೆಯ ದುಡ್ಡೇ ಬೇಕಾಗಿದೆ. ವಿಜ್ಞಾನಿಗಳು ಸೃಷ್ಟಿಯ ಮೂಲ ಹುಡುಕುವ ಪ್ರಯತ್ನದಲ್ಲಿರುವಾಗ, ನಮ್ಮ ಬಿ.ಜೆ.ಪಿ. ಸರಕಾರದ ಸಚಿವ ಪೂಜಾರಿಯವರು 'ಬರ ಪರಿಹಾರ'ಕ್ಕೆ 'ಸೂಕ್ತ' ಮಾರ್ಗವನ್ನು ಕಂಡುಹಿಡಿದಿದ್ದಾರೆ. ಇವರ ವಿಶೇಷ ಪೂಜೆಗೆ ೧೮ ಕೋಟಿ ಖರ್ಚಾಗಲಿದೆ ಎಂದು ಅಂದಾಜಿಸಲಾಗಿದೆ. ಇಷ್ಟು ಹಣ ಹಾಕಿ ಪೂಜೆ ನಡೆಸಿದರೆ ಮಳೆ ಬರುತ್ತದೆಂಬುದು ಪೂಜಾರಿಯವರ ಲೆಕ್ಕಾಚಾರ. ಪುರೋಹಿತಶಾಹಿ ಪಕ್ಷಕ್ಕೆ ಸರಿಯಾದ ಪೂಜಾರಿ ಸಿಕ್ಕಿದ್ದಾರೆ. ಪೂಜೆಯಲ್ಲೂ ಪಾಲು ಸಿಗಬಹುದು. ಇಲ್ಲಿ ಭ್ರಷ್ಟರೂ ಪೂಜ್ಯರೇ.

ಸಿದ್ಧನಗೌಡ ಪಾಟೀಲ

## ರಾಷ್ಟ್ರಾಧ್ಯಕ್ಷತೆಗೆ ಓಂಕಾರಪ್ಪ

''ಪ್ರಣವ'' ಎಂಬುದು ಓಂಕಾರಕ್ಕೆ ಇನ್ನೊಂದು ಹೆಸರು. ಅದು ಈಶ್ವರವಾಚಕ ಎಂದು ಯೋಗಸೂತ್ರದಲ್ಲಿ ಹೇಳಲಾಗಿದೆ. ಈಗ ಪ್ರಣವ ಮುಖರ್ಜಿ ರಾಷ್ಟ್ರಾಧ್ಯಕ್ಷರಾಗಿ ಓನಾಮ ತಿದ್ದಿ ಗದ್ದುಗೆ ಏರಿದ್ದಾರೆ. ಅದು ಬಯಸಿ ಬಂದದ್ದೋ ಅಥವಾ ಬಂದದ್ದನ್ನು ಬಯಸಿದ್ದೋ ಎಂಬುದು ನಮಗೆ ತಿಳಿಯುವುದಿಲ್ಲ ಮತ್ತು ಪ್ರಣವ್ ಮುಖರ್ಜಿ ಅದನ್ನು ಹೇಳುವುದಿಲ್ಲ, ಅವರು ಹೇಳದೆ ಉಳಿದಿರುವುದು ಬೆಟ್ಟದಷ್ಟಿದೆ, ಆ ಪೈಕಿ ಇದೂ ಒಂದು. ಅವರ ವೈಶಿಷ್ಟ್ಯಗಳಲ್ಲಿ ಮುಖ್ಯವಾದ್ದು ಅವರೆಂದೂ ಸವಾಲುಗಳನ್ನು ಸ್ವೀಕರಿಸಿ ಮುಂದಾಗುವುದಿಲ್ಲ ಎಂಬುದು. ಅರ್ಧ ಶತಮಾನದ ಅವರ ರಾಜಕೀಯ ಜೀವನದಲ್ಲಿ ಒಂದೊಂದು ಮೆಟ್ಟಿಲಲ್ಲೂ ಅದನ್ನು ಮಾಡುತ್ತಲೇ ಮೇಲೇರಿ ಬಂದ ಯಶಸ್ಸು ಅವರದು. ಅದಕ್ಕಾಗಿ ಅವರು ಪಕ್ಷದಲ್ಲಿ ಮತ್ತು ಸರ್ಕಾರದ ಮಂತ್ರಿಯಾಗಿ 'ಹಿರಿಯ'ರನ್ನೆಲ್ಲಾ ಸದಾ ಮೆಚ್ಚಿಸುವುದರಲ್ಲಿ ಪರಿಣತಿ ಪಡೆದರು. ಇತ್ತೀಚಿನ ಲೋಕಸಭೆಯ ಚುನಾವಣೆಯಲ್ಲಿ ಸ್ಪರ್ಧಿಸಿದ್ದನ್ನು ಬಿಟ್ಟರೆ ಅವರು ಯಾವಾಗಲೂ ರಾಜ್ಯಸಭೆಗೆ ಮಾತ್ರವೇ ಆಯ್ಕೆಯಾಗುತ್ತಾ ಬಂದವರು. ಆ ಬಾಬ್ತಿನಲ್ಲಿ ಅವರಿಗೂ ಪ್ರಧಾನಿ ಮನಮೋಹನ ಸಿಂಗರಿಗೂ ಸಾಮ್ಯವಿದೆ.

ಶ್ರೀಮತಿ. ಇಂದಿರಾ ಗಾಂಧಿಯವರ ಹತ್ಯೆಯ ತರುವಾಯದಲ್ಲಿ ತಾವು ಪ್ರಧಾನಿಯಾಗಬೇಕೆಂಬ ಹಂಬಲವನ್ನು ಸಹ ಅವರು ಗಟ್ಟಿಯಾಗಿ ಪ್ರಕಟಿಸದೆ ಶ್ರೀ. ರಾಜೀವ ಗಾಂಧಿ ಎಲ್ಲಿಂದಲೋ ದಿಢೀರನೆ ಬಂದು ನಾಯಕತ್ವ ಪಡೆಯಲು ಶ್ರೀ. ಪ್ರಣವ ಮುಖರ್ಜಿ ಸಹಕರಿಸಿದರು. ಅದಾದನಂತರ ಕೆಲಕಾಲ ಇನ್ನೇನು ವಾನಪ್ರಸ್ಥಾಶ್ರಮಕ್ಕೆ ತೆರಳುತ್ತಾರೇನೋ ಎಂಬಷ್ಟುಮಟ್ಟಿಗೆ ತೆರೆಮರೆಗೆ ಸರಿದು ತಮ್ಮ ಮುನಿಸನ್ನು ಕೆಲವು ಆಪ್ತರಲ್ಲಿ ಮಾತ್ರ ತೋಡಿಕೊಂಡರು. ಆಮೇಲೆ ಅಂಥದೇನೂ ಪ್ರಸಂಗ ಇರಲೇ ಇಲ್ಲವೆಂಬಂತೆ ಮಂತ್ರಿಮಂಡಲಕ್ಕೆ ಹಿಂದಿರುಗಿ ಪಕ್ಷದಲ್ಲಿ ಇತರರಿಗಿಂತಲೂ ಹೆಚ್ಚು ನಿಷ್ಠಾವಂತರಾಗಿ ಕೆಲಸ ಮಾಡಿದರು, ಮಾಡಿದ್ದನ್ನು ಸಾಕಷ್ಟು ಅಚ್ಚುಕಟ್ಟಾಗಿಯೇ ಮಾಡುವ ಪದ್ಧತಿ ಬೆಳೆಸಿಕೊಂಡರು. ಅವರ ಪಕ್ಷದಲ್ಲಿ ಹಾಗೆ ಮಾಡುತ್ತಿದ್ದವರು ಆಗ ವಿರಳ, ಈಗ ಇಲ್ಲವೇ ಇಲ್ಲ ಎಂಬಂತಾಗಿದೆ. ಈಚಿನ ವರ್ಷಗಳಲ್ಲಿ ಕಮಲನಾಥ್,

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಆನಂದ ಶರ್ಮ, ಮತ್ತು ಸಚಿವ ಸಂಪುಟದಲ್ಲಿಲ್ಲದೆಯೇ ಅಗಾಧ ಅಧಿಕಾರವುಳ್ಳ ಅಹ್ಲುವಾಲಿಯ ಅಂಥವರು ಕಾಂಗ್ರೆಸ್ ವರಿಷ್ಠರು. ಚಿದಂಬರಂ, ಶಶಿ ತರೂರ್, ಗುಲಾಂ ನಬೀ ಆಜ್ಞಾದ್, ಮುಂತಾದ ಮುದ್ದುಮಕ್ಕಳೂ ಇದ್ದಾರೆ. ಮಾನ್ಯ ಎ. ಕೆ. ಆಂಟೋನಿಯಂತಹವರು ಇಂದಿನ ಕಾಂಗ್ರೆಸ್‌ಗೆ ಹೊಂದಿಕೊಳ್ಳದೆಯೂ ಅಂಟಿಕೊಂಡು ಮುಂದುವರಿದಿದ್ದಾರೆ.

ಅಂದಿನ ಪ್ರಧಾನಿ ಪಿ. ವಿ. ನರಸಿಂಹರಾವ್ ಮತ್ತು ಹಣಕಾಸು (ಅನರ್ಥ) ಸಚಿವ ಮನಮೋಹನ ಸಿಂಗ್ ೧೯೯೦ರ ದಶಕದಲ್ಲಿ ಜಾಗತೀಕರಣದ ಮಂತ್ರದಂಡ ತಂದು ದೇಶವನ್ನು ತಥಾಕಥಿತ ಅಭಿವೃದ್ಧಿ ಮಾರ್ಗದಲ್ಲಿ ಎಡವಿಸಿದಾಗ ಶ್ರೀ. ಪ್ರಣವ ಮುಖರ್ಜಿ ಎಲ್ಲೆಲ್ಲಿ ಸಹಿ ಹಾಕಬೇಕೆಂದು ಹೇಳಲಾಯಿತೋ ಅಲ್ಲೆಲ್ಲಾ ಮೂಗು ಮುಚ್ಚಿಕೊಂಡು ಸಹಿ ಹಾಕಿದರು ಮತ್ತು ಆ ಪ್ರಕ್ರಿಯೆಗೆ ಸುಲಭವಾಗಿ ಹೊಂದಿಕೊಂಡರು. ಕಾಂಗ್ರೆಸ್‌ನಲ್ಲಿರುವ ವಿದ್ಯಾವಂತರಲ್ಲಿ, ವಿನಯವಂತರಲ್ಲಿ, ಇವರಿಗೆ ಅಗ್ರಸ್ಥಾನವಿರುವುದರಿಂದ ಸರ್ಕಾರಕ್ಕೆ ಮುಗ್ಗಟ್ಟು ಉಂಟಾದಾಗಲೆಲ್ಲ ಇವರನ್ನು ಪಕ್ಷವು ಗುರಾಣಿ ಕೆಲಸ ಮಾಡಲು ಬಳಸಿಕೊಂಡು ಅವರ ಶ್ರೇಯಸ್ಸು ಲೋಕಕ್ಕೆಲ್ಲಾ ತಿಳಿಯುವಂತಾಯಿತು. ಈಗ ಅವರನ್ನು ಮಂತ್ರಿಮಂಡಲ ದಿಂದ ನಯವಾಗಿ ಹೊರಹಾಕಿ ರಾಷ್ಟ್ರಪತಿ ಭವನದಲ್ಲಿ ಕೂರಿಸಿದ್ದಾರೆ. ಎಷ್ಟೋ ಮಂದಿಗೆ ಹೋಲಿಸಿದರೆ ರಾಷ್ಟ್ರಪತಿಯಾಗಲು ಇವರ ಅರ್ಹತೆ ಪ್ರಶ್ನಾರ್ಹವೇ ಅಲ್ಲ. ಮಹಾರಾಷ್ಟ್ರದ ಕೋ-ಆಪರೇಟಿವ್ ಸೊಸೈಟಿಗಳ ಕೆಲವು ಹಗರಣಗಳಲ್ಲಿ ಪಾತ್ರಧಾರಿಯಾಗಿದ್ದರೆನ್ನಲಾದ ವರಂತೆ ಪ್ರಣವ ಮುಖರ್ಜಿಯವರಿಗೆ ಕಪ್ಪುಚಿಹ್ನೆಗಳು ಯಾವುವೂ ಬಹಿರಂಗವಾಗಿಲ್ಲ.

ಮಾನ್ಯ ಮುಖರ್ಜಿಯವರನ್ನು ರಾಷ್ಟ್ರಾಧ್ಯಕ್ಷರನ್ನಾಗಿ ಚುನಾಯಿಸಲು ಅವರ ಹಿನ್ನೆಲೆಯಷ್ಟೇ ಬೇರೆ ಕೆಲವರ ಮುನ್ನೆಲೆಯ ಆಶಯಗಳೂ ಕಾರಣವಿರುವಂತೆ ತೋರುತ್ತದೆ. ಆ ದೃಷ್ಟಿಯಿಂದ ನೋಡಿದರೆ ಮುಂದೆ ಪ್ರಧಾನಿಯಾಗಬಹುದಾಗಿದ್ದವರನ್ನು ತುರ್ತಾಗಿ ಈಗಲೇ ರಾಷ್ಟ್ರಾಧ್ಯಕ್ಷರ ಸ್ಥಾನಕ್ಕೆ ಕಳಿಸಿಬಿಟ್ಟರೋ ಎಂಬ ಸಂಶಯ ಮೂಡುತ್ತದೆ. ರಾಜೀವ ಗಾಂಧಿ ಪ್ರಧಾನಿಯಾದಾಗ ಮೌನಿಯಾದಂತೆ, ರಾಹುಲ್ ಗಾಂಧಿ ಪ್ರಧಾನಿ ಪಟ್ಟ ಬಯಸಿದರೆ ಪ್ರಣಬ್ ಅವರು ಮೌನಿಯಾಗಿ ಉಳಿಯಲಾರರೇನೋ ಎಂಬ ಆತಂಕದ ನಿವಾರಣೆ ಮಾಡಿಕೊಳ್ಳಲು ಈಗಲೇ ಕಾಂಗ್ರೆಸ್ ಪಕ್ಷವು ಔನ್ನತ್ಯದ ಗೌರವ ನೀಡಿ, ಅವರನ್ನು ಹಾದಿಯಿಂದ ದೂರ ಸರಿಸಿ, ರಾಜಕುಮಾರನ ಪಥವನ್ನು ಸುಗಮಗೊಳಿಸಿದೆ ಎಂಬ ಮಾತು ತೀರಾ ನಿರಾಧಾರವಾದುದಲ್ಲ. ಒಂದೇ ಕಲ್ಲಿನಿಂದ ಎರಡು ಪಕ್ಷಿಗಳನ್ನು ಹೊಡೆಯುವ ತಂತ್ರದಲ್ಲಿ ಕಾಂಗ್ರೆಸ್ ಬೇರೆ ದೊಡ್ಡ ಪಕ್ಷಗಳಿಗಿಂತಲೂ ಕಡಿಮೆಯೇನಲ್ಲ. ಆದರೆ ಆ ಪದಗುಚ್ಛದಲ್ಲಿ ಹಿಂಸೆಯ ಸೂಚನೆ ಇದೆ: ''ಪಕ್ಷಿಗಳನ್ನು ಹೊಡೆಯುವುದು'' ಎಂದು. ಇಲ್ಲೂ ಅಷ್ಟೆ, ಪ್ರಣವ ಮುಖರ್ಜಿಯವರಂತಹ ರಾಜಕಾರಣಿಯ ಮೇಲೆ ನವಿರಾಗಿ ಹಿಂಸೆಯನ್ನು ಹರಿಬಿಡಲಾಗಿದೆ. ''ಒದ್ದು ಮಹಡಿಯ ಮೇಲಕ್ಕೇರಿಸುವುದು'' ಎಂಬ ಸುಭಗವಲ್ಲದ ಪದಗುಚ್ಛವನ್ನು ಇಲ್ಲಿ ಬಳಸಬಾರದೇನೋ, ಆದರೆ ಒಂದು ಥರಾ ಅದು ಮಗುಮ್ಮಾಗಿ ನಡೆದಿದೆ.

ಪ್ರಣವ ಮುಖರ್ಜಿಯವರ ಕಳೆದ (ಮತ್ತು ಕಡೆಯ) ಬಜೆಟ್ ಬಗ್ಗೆ ಏನೇ ಟೀಕೆ ಇರಲಿ, ಅವರು ವೋಡಾಫೋನ್ ಕಂಪನಿಯ ಜುಟ್ಟು ಹಿಡಿದು ಅಲ್ಲಾಡಿಸಿದ್ದು ಶ್ಲಾಘನೀಯ. ಉದಾರೀಕರಣದ ಹುಚ್ಚು ಅಮಲಿನ ನಡುವೆ ಅದೊಂದು ಜನಪರವಾದ ತಂಗಾಳಿಯಂತೆ ಇದೆ. ಅವರಿಗೆ ಕೂಡಲೆ ಉನ್ನತ ಪದವಿ ಕೊಡಲು ಅದೂ ಒಂದು ಕಾರಣ. ಹಿಲರಿ ಕ್ಲಿಂಟನ್‌ಗೆ ಹಿಡಿಸದವರು ಭಾರತದ ಹಣಕಾಸು ಸಚಿವರಾಗಿರಲು ಮಾನ್ಯ ಮನಮೋಹನ ಸಿಂಗರ ಮನಸ್ಸು ಒಪ್ಪಲಾರದು. ಅಮೆರಿಕಾದ ಅಧ್ಯಕ್ಷರೇ ಈಗ ಹೇಳಿಬಿಟ್ಟರಲ್ಲ, ವಿದೇಶಿ ಬಂಡವಾಳ ಹರಿದುಬರಬೇಕಾದರೆ ಭಾರತವು ತನ್ನ ಬಾಗಿಲು ಗಳನ್ನು ಇನ್ನೂ ಚೆನ್ನಾಗಿ, ಪೂರ್ತಿಯಾಗಿ, ತೆರೆದಿಡಬೇಕು, ಎಂದು. ವೋಡಾಫೋನ್‌ನಂತೆ ಪ್ರತಿಯೊಂದು ವಿದೇಶಿ ಕಂಪನಿಯೂ ತಲಾ ಹನ್ನೊಂದು ಸಾವಿರ ಕೋಟಿ ರೂಪಾಯಿಗಳನ್ನು ನಮ್ಮಿಂದ ಕದ್ದು ನುಂಗಲು ಬಿಟ್ಟರೆ ಮಾತ್ರ ನಮ್ಮ ದೇಶದ 'ಅಭಿವೃದ್ಧಿ' ಸಾಧ್ಯ ಎಂಬುದು ಒಬಾಮಾ ಸೂತ್ರದ ನಿಜಾರ್ಥ. ನಮ್ಮ ದೇಶದ ಅನೇಕ ಮಾಧ್ಯಮ ವೀರರು, ಖೋಟಾ ಅರ್ಥಶಾಸ್ತ್ರಜ್ಞರು, ಎಲ್ಲಕ್ಕಿಂತ ಹೆಚ್ಚಾಗಿ ಮನಮೋಹನ ಸಿಂಗರ ಆಪ್ತ ಸಲಹೆಗಾರ ಮೋಂಟೆಕ್ ಸಿಂಗ್ ಅಹ್ಲುವಾಲಿಯ, ಈ ಸೂತ್ರವನ್ನು ಅದರ ಗಾಳದ ಸಮೇತ ನುಂಗಿದ್ದಾರೆ. ಅದೇ ನಮ್ಮ ದೇಶದ ದುರಂತ.

ಪ್ರಣವ ಮುಖರ್ಜಿ ಮಂಡಿಸಿದ್ದ ಬಜೆಟ್ಟನ್ನು ಅದರ ಮಂಡನೆಗೆ ಮೊದಲೇ ಮನಮೋಹನ ಸಿಂಗ್ ಓದಿದ್ದರು. ಪಾರ್ಲಿಮೆಂಟ್ ಅದಕ್ಕೆ ಅಂಗೀಕಾರ ನೀಡಿದೆ. ಆದರೆ ಹಿಲರಿ ಬಂದು ಪ್ರಧಾನಿಯ ಕೈ ತಿರುಚಿ ಕಿವಿಗೆ ಊದಿದ್ದರಿಂದಲೋ ಏನೋ, ಜುಲೈ ಆದಿಭಾಗದಲ್ಲಿ ವಿದೇಶದಿಂದ ಹಿಂದಿರುಗುವಾಗ ಪ್ರಧಾನಿ ಹಾಗೂ ಅರ್ಥಸಚಿವ ಶ್ರೀ. ಸಿಂಗ್ ಅವರು ಒಂದು ಬಾಂಬ್ ಹಾಕಿದರು: ಅಂಗೀಕೃತವಾಗಿರುವ ಬಜೆಟ್ಟಿನ ಕೆಲವು ಭಾಗಗಳಿಗೆ ವಿಶದೀಕರಣ ಅಥವಾ ವಿವರಣೆ ನೀಡುವ ಉದ್ದೇಶವಿದೆ, ಎಂದು. ಪಾರ್ಲಿಮೆಂಟಿಗೆ ನೀಡದಿದ್ದ ಎಂಥದೋ ವಿಶದೀಕರಣ ಈಗೇಕೆ? ವೋಡಾಫೋನ್ ಮತ್ತು ಅಂತಹ ಕಂಪನಿಗಳು ಹಾಗೂ ಹಿಲರಿ ಕ್ಲಿಂಟನ್ ಸ್ವಲ್ಪ ಸಂತೃಪ್ತರಾಗಲಿ ಎಂದೆ? ಆದಾಯ ತೆರಿಗೆ ಇಲಾಖೆಗೆ ಹೊಸ ಸೂಚನೆ ಕೊಡುವುದೇನಾದರೂ ಇದೆಯೆ? ಅಥವಾ, ವೋಡಾಫೋನ್ ನ್ಯಾಯಾಲಯಕ್ಕೆ ಹೋಗಿ ಪರಿಹಾರ ಪಡೆದುಕೊಳ್ಳಲಿ ಎಂಬ ಅಘೋಷಿತ ಇಂಗಿತವೇನಾದರೂ ಇದ್ದೀತೋ? ಇಂತಹ ಪ್ರಮಾದವಾಗದಿರುವಂತೆ ಜನತೆ ಎಚ್ಚರದಿಂದಿರಬೇಕು ಮತ್ತು ತಾವು ಮಂಡಿಸಿದ್ದ ಬಜೆಟ್ಟನ್ನು ಈಗ ರಾಷ್ಟ್ರಾಧ್ಯಕ್ಷರಾಗಿರುವ ಶ್ರೀ. ಪ್ರಣವ ಮುಖರ್ಜಿ ಸಮರ್ಥಿಸಿಕೊಳ್ಳಲು ಕ್ರಮ ಕೈಗೊಳ್ಳಬೇಕು. ಪ್ರಧಾನಿ ಎಳೆದ ಗೆರೆಯ ಮೇಲೆ ಸಹಿ ಹಾಕಲು ಅವರು ಅಧ್ಯಕ್ಷರಾಗಿಲ್ಲವೆಂದು ನಂಬೋಣ.

ಶ್ರೀ. ಮುಖರ್ಜಿ ಅಧ್ಯಕ್ಷರಾಗುವಾಗ ಶ್ರೀಮತಿ. ಮಮತಾ ಬ್ಯಾನರ್ಜಿಯವರ ಕಿರಿಕಿರಿಯನ್ನು ಸಾಕಷ್ಟು ಕಾಲ ತಡೆದುಕೊಂಡರು. ಯಾರಿಗೆ ತಮ್ಮ ಪಕ್ಷ ಬೆಂಬಲ ನೀಡಬೇಕೆಂಬುದನ್ನು ತೀರ್ಮಾನಿಸುವ ಸ್ವಾತಂತ್ರ್ಯ ಮಮತಾ ಅವರಿಗಿದೆ. ಅಂತೆಯೇ ಬೇರೆ ಪಕ್ಷಗಳಿಗೂ ಸಹ. ಯಾವುದೇ ಪಕ್ಷವೂ ಮಮತಾ ಏನು ಮಾಡುತ್ತಾರೋ ಅದಕ್ಕೆ ವಿರುದ್ಧವಾಗಿ ನಡೆಯಬೇಕೆಂಬ ನೀತಿಯನ್ನು ಘೋಷಿಸುವುದು ಅಪಕ್ವ ರಾಜಕಾರಣ. ಮನಮೋಹನ ಸಿಂಗ್ ಸರ್ಕಾರದ ಜೊತೆ ಮತ ಚಲಾಯಿಸುವುದು ಸರಿಯೋ ಅಲ್ಲವೋ ಎಂಬುದಷ್ಟೇ ವಿವೇಚನೆಗೆ ಸಾಮಗ್ರಿ. ಆಕೆ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಗೆ ಬೆಂಬಲ ಕೊಟ್ಟರೆ ಬೇರೆಯವರು ಕೊಡಬಾರದೆಂದೇನೂ ಇಲ್ಲ, ಏಕೆಂದರೆ ಮತ ಚಲಾಯಿಸುವುದು ಪ್ರಣವ ಮುಖರ್ಜಿಯವರಿಗೇ ವಿನಾ ಮಮತಾ ಅವರಿಗಲ್ಲ. ಮಾನ್ಯ ಮನಮೋಹನ ಸಿಂಗ್ ಮತ್ತು ಶ್ರೀ. ಪ್ರಣವ ಮುಖರ್ಜಿ ಇಬ್ಬರೂ ಒಟ್ಟಾಗಿಯೇ, ಒಪ್ಪಿಕೊಂಡೇ, ನಮ್ಮ ದೇಶದ ಆರ್ಥಿಕ ಅನೀತಿಯನ್ನು ರೂಪಿಸಿದ್ದಾರೆ. ಅದು ಯಾರಿಗೆ ಮಾನ್ಯವಲ್ಲವೋ ಅವರು ಮುಖರ್ಜಿಯನ್ನು ಬೆಂಬಲಿಸಬಾರದು, ಕೆಲವು ಪಕ್ಷಗಳು ಹಾಗೆ ಮಾಡಿವೆ. ಆ ಪಕ್ಷಗಳಿಗೆ ಇದ್ದ ಇನ್ನೊಂದು ಆಯ್ಕೆ ನಿತಿನ್ ಗಡ್ಕರಿ ಪಕ್ಷದೊಡನೆ ಕೈಜೋಡಿಸಿ ಸಂಗ್ಮಾ ಅವರಿಗೆ ಬೆಂಬಲ ನೀಡುವುದು. ಎರಡು ದೆವ್ವಗಳ ಸಹವಾಸವೂ ಬೇಡ ಎಂದು ತೀರ್ಮಾನಿಸಿದವರು ಮತ ಚಲಾಯಿಸದೆ ಉಳಿದರು. ಇದು ಪ್ರಣವ ಮುಖರ್ಜಿ ವೈಯ್ಯಕ್ತಿಕವಾಗಿ ಎಂಥವರು, ಯಾವ ರಾಜ್ಯದ ನಾಯಕತ್ವ ಎಂತಹ ಕೇಡುಹಾದಿ ಹಿಡಿದಿದೆ, ಎಂಬುದರಿಂದ ತೀರ್ಮಾನವಾಗಬಹುದಿದ್ದ ವಿಷಯವಲ್ಲ. ಈಗಿನ ಕೇಂದ್ರ ಸರ್ಕಾರದ ಅನೀತಿ ಯಾರಿಗೆ ಒಪ್ಪಿಗೆಯಲ್ಲವೋ ಅವರು ಶ್ರೀ. ಮುಖರ್ಜಿಯವರಿಗೆ ಮತ ಚಲಾಯಿಸಲು ಸಾಧ್ಯವಿರಲಿಲ್ಲ. ಸ್ವತಃ ಪ್ರಣವ ಮುಖರ್ಜಿ ಸಹ ಆ ನಿಲುವನ್ನು ಸಮರ್ಥಿಸಿಯಾರು.

## ಸ್ವಾತಂತ್ರ್ಯ ಹರಣೋತ್ಸವ

ಬ್ರಿಟಿಷ್ ಸಾಮ್ರಾಜ್ಯಶಾಹಿಗಳಿಂದ ವಿಮೋಚನೆ ಪಡೆದು ಸ್ವಾತಂತ್ರ್ಯ ಗಳಿಸಿದ್ದು ಈ ದೇಶದ ಹೆಗ್ಗಳಿಕೆಯೆ ಸರಿ. ಸ್ವಾತಂತ್ರ್ಯದ ಕನಸು ಹೊತ್ತು ಅದರ ಸಾಕಾರಕ್ಕಾಗಿ ಜೀವತೆತ್ತ ಜನರೆಷ್ಟೋ ಲೆಕ್ಕವಿಲ್ಲ. ಅವರೆಲ್ಲ ನಮ್ಮ ನೆನಪಿನಿಂದ ಎಂದೋ ಮಾಸಿಹೋಗಿಬಿಟ್ಟಿದ್ದಾರೆ. ಹಾಗೆಯೇ ಅವರ ಮನದಲ್ಲಿ ಹುದುಗಿದ್ದ ಸ್ವತಂತ್ರ ಭಾರತದ ಕಲ್ಪನೆ ಕೂಡ ಚಿಗುರೊಡೆಯದೆ ಬತ್ತಿ ಹೋಗಿಬಿಟ್ಟಿದೆ.

*ಇರುವೆಲ್ಲವನು ಎಲ್ಲ ಜನಕೆ ತೆರವಾಗಿಸುವ*
*ಸಮ ಬಗೆಯ ಸಮ ಸುಖದ ಸಮ ದುಃಖದ*
*ಸಾಮರಸ್ಯದ ಸಾಮಗಾನ ಲಹರಿಯ ಮೇಲೆ*
*ತೇಲಿ ಬರಲಿದೆ ನೋಡು ನಮ್ಮ ನಾಡು.*

ಗೋಪಾಲ ಕೃಷ್ಣ ಅಡಿಗರ 'ಕಟ್ಟುವೆವು ನಾವು' ಕವಿತೆಯ ಈ ಸಾಲುಗಳು ಸ್ವತಂತ್ರ ದೇಶದ ಆದರ್ಶ ಸಮಾಜ ನಿರ್ಮಾಣದ ಪರಿಕಲ್ಪನೆ ಮಾತ್ರವಲ್ಲದೆ ಜನಮನದ ಮೌನ ನಿರೀಕ್ಷೆ ಕೂಡ ಆಗಿತ್ತು. ಭಗ್ನಗೊಂಡ ಕನಸು, ಹುಸಿಯಾದ ನಿರೀಕ್ಷೆ ಯಾರಿಗೆ ಬಂತು ಸ್ವಾತಂತ್ರ್ಯ ಎಂಬ ಅನುಮಾನವನ್ನು ಎಂದೋ ಪರಿಹರಿಸಿ ಬಿಟ್ಟಿತ್ತು. ಭಾರತದ ಸಂವಿಧಾನ ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ವಾತಂತ್ರ್ಯದ ಬಗ್ಗೆ ಉಲ್ಲೇಖಿಸಿದ್ದರೂ, ಸಾಮಾನ್ಯ ಜನರಿಗೆ ಅದು ಕನ್ನಡಿಯ ಗಂಟು. ಈಗ ಭಾರತದಲ್ಲಿ ಲಭ್ಯವಿರುವುದು ಕೇವಲ 'ಉಳ್ಳವರ ಸ್ವಾತಂತ್ರ್ಯ' ಅಥವಾ 'ಸ್ವಾರ್ಥ ನಿಷ್ಠ ಸ್ವಾತಂತ್ರ್ಯ.'

ಪ್ರತಿಯೊಬ್ಬ ಪ್ರಜೆಯೂ ಚುನಾವಣೆಯಲ್ಲಿ ಸ್ಪರ್ಧಿಸಬಹುದೆಂಬುದು ಒಂದು

ಶಾಸನಬದ್ಧ ಹಕ್ಕೆಂದು ಘೋಷಿಸಲ್ಪಟ್ಟಿದ್ದರೂ ಈ ಹಕ್ಕು ಚಲಾಯಿಸಲು ಉಳ್ಳವರಿಗೆ ಸ್ವಾತಂತ್ರ್ಯ ಉಂಟೇ ಹೊರತು ಸಾಮಾನ್ಯ ಪ್ರಜೆಗಿಲ್ಲ. ಖೋಟಾ ನೋಟಿನ ತರಹ ಖೋಟಾ ಸ್ವಾತಂತ್ರ್ಯ ಚುನಾವಣೆಗಳಲ್ಲಿ ಹಣ-ಹೆಂಡಗಳ ಹೊಳೆ ಹರಿಸುವ ಜನರೇ ಇಂದಿನ ಬಹುತೇಕ ಶಾಸಕರು. ನ್ಯಾಯಾಲಯಗಳಿಂದ ಜಾಮೀನು ಅಥವಾ ಅವರ ಪರ ತೀರ್ಪು ಕೊಂಡುಕೊಳ್ಳುವಷ್ಟು ಶಕ್ತರು - ಸ್ವತಂತ್ರರು ಈ ಉಳ್ಳವರು. ನಮ್ಮ ಸಂವಿಧಾನ ವಾಕ್ ಸ್ವಾತಂತ್ರ್ಯವನ್ನು ಒಂದು ಮೂಲಭೂತ ಹಕ್ಕೆಂದು ಪರಿಗಣಿಸಿದೆ. ಇದಕ್ಕೆ ಪೂರಕವಾಗಿ ಸರ್ವೋಚ್ಚ ನ್ಯಾಯಾಲಯ ಅನೇಕ ಉತ್ಕೃಷ್ಟ ತೀರ್ಪುಗಳನ್ನು ನೀಡಿದೆ. ಹೀಗಿದ್ದೂ ಅಭಿವ್ಯಕ್ತಿ ಸ್ವಾತಂತ್ರ್ಯ ಪದೇ ಪದೇ ದಾಳಿಗೊಳಗಾಗುತ್ತದೆ. ಎಂ. ಎಫ್. ಹುಸೇನ್, ರಾಮಾನುಜಂ, ತಸ್ಲೀಮ, ಹೀಗೆ ಹಲವಾರು ಕಲಾವಿದರ ಮತ್ತು ಸಾಹಿತಿಗಳ ಕೃತಿಗಳ ಬಗ್ಗೆ ಕೋಮುವಾದಿಗಳು ನಡೆಸಿದ ಹಲ್ಲೆಗಳು ಆತಂಕ ಹುಟ್ಟಿಸಿವೆ. ಹೆಣ್ಣುಮಕ್ಕಳು ಯಾವ ವೇಷಭೂಷಣ ಧರಿಸಬಾರದು, ಯಾರ ಜೊತೆ ಮಾತನಾಡಬಾರದು ಎಂಬುದನ್ನು ಸಂಘ ಪರಿವಾರದ ರಾಮಸೇನೆಯವರು ನಿರ್ಧರಿಸುತ್ತಾರೆ. ಸ್ತ್ರೀಯರು ಸ್ವಾತಂತ್ರ್ಯಕ್ಕೆ ಅರ್ಹರಲ್ಲ ಎಂಬುದೇ ಇವರ ಸಿದ್ಧಾಂತ. ಇನ್ನು ದಲಿತರನ್ನು ಕೋವಿಯಿಂದ ಸುಡುವುದು ತಮ್ಮ ದೈವದತ್ತ ಸ್ವಾತಂತ್ರ್ಯವೆಂದು ರಣವೀರ ಸೇನೆಯವರ ನಂಬಿಕೆ. ಈ ಸೇನೆಗಳೇ ಈಗ ಸ್ವಾತಂತ್ರ್ಯವನ್ನು ಸೆರೆಹಿಡಿದಿರುವುದು. ಮನಸ್ಸುಗಳನ್ನು ಸಂಕುಚಿತಗೊಳಿಸುವ ಇವರ ಹೀನಕೃತ್ಯಗಳು ಬರ್ಬರ ಸಮಾಜದ ಸೃಷ್ಟಿಯ ಸಂಕೇತಗಳು.

ಪಶ್ಚಿಮ ಬಂಗಾಳದ ಮುಖ್ಯಮಂತ್ರಿ ಮಮತಾ ದೀದಿಯಂತೂ ದಿನಕ್ಕೊಂದು ಫತ್ವ ಹೊರಡಿಸುತ್ತಾರೆ. ಅವರ ಅನುಯಾಯಿಗಳ್ಯಾರೂ ಎಡಪಕ್ಷಗಳ ಸದಸ್ಯರೊಂದಿಗೆ ಸಾಮಾಜಿಕ ಸಂಬಂಧ ಹಾಗೂ ಸ್ನೇಹ ಹೊಂದಿರಕೂಡದು, ಕಾರ್ಲ್ ಮಾರ್ಕ್ಸ್‌ನನ್ನು ಪಠ್ಯಪುಸ್ತಕಗಳಿಂದ ಉಚ್ಚಾಟಿಸಬೇಕು, ವ್ಯಂಗ್ಯಚಿತ್ರಕಾರರನ್ನು ಶಿಕ್ಷಿಸಬೇಕು ಇತ್ಯಾದಿ. ಈಗ ಎಲ್ಲ ಪಠ್ಯಪುಸ್ತಕಗಳಿಂದ ವ್ಯಂಗ್ಯಚಿತ್ರಗಳು ಮಾಯ. ಇವು ಅಭಿವ್ಯಕ್ತಿ ಸ್ವಾತಂತ್ರ್ಯದ ಅವನತಿಗೆ ಸರ್ಕಾರಗಳ ಕೊಡುಗೆ. ''ನಗುವು ಸಹಜದ ಧರ್ಮ, ನಗಿಸುವುದು ಪರಧರ್ಮ, ನಗುವ ಕೇಳಿ ನಗುವುದು ಅತಿಶಯದ ಧರ್ಮ'' ಎಂದು ಜೀವನದರ್ಶನವಿತ್ತ ಡಿ.ವಿ.ಜಿ.ಯವರು ಹಾಸ್ಯಪ್ರಜ್ಞೆಗೆ ಬಂದ ದುರ್ಗತಿಗೆ ಅದೆಷ್ಟು ಮರುಗುತ್ತಿದ್ದರೊ ಏನೋ.

ಈ ದೇಶದಲ್ಲಿ ಉಳ್ಳವರ ಸ್ವಾತಂತ್ರ್ಯ ರೈತರನ್ನು ಭೂಹೀನರನ್ನಾಗಿಸುತ್ತಿದೆ. ಅವರನ್ನು ಆತ್ಮಹತ್ಯೆಯ ಹಂತಕ್ಕೆ ತಳ್ಳಿದೆ. ಕಾರ್ಮಿಕರ ಬದುಕನ್ನು ಅಸ್ಥಿರಗೊಳಿಸಿದೆ. ಖನಿಜಸಂಪತ್ತನ್ನು ಲೂಟಿ ಮಾಡುತ್ತಿದೆ. ಕೋಮು ಜ್ವಾಲೆಯನ್ನು ಎಲ್ಲೆಡೆ ಹರಡುತ್ತಿದೆ. ಆಹಾರ ಪದಾರ್ಥಗಳ ಬೆಲೆಯನ್ನು ಗಗನಕ್ಕೇರಿಸಿದೆ. ಮಕ್ಕಳ ಭವಿಷ್ಯವನ್ನು ಅಂಧಕಾರಗೊಳಿಸಿದೆ. ಅದಕ್ಕೇನೆ ಗದ್ದರ್ ತನ್ನ ಏರುದನಿಯಲ್ಲಿ ಕೇಳಿದ್ದು ಇದೇನು ಸ್ವಾತಂತ್ರ್ಯ ಎಂದು.

೨೦೧೧ರ ಜಾಗತಿಕ ಹಸಿವು ಸೂಚ್ಯಂಕದ ವರದಿಯ ಪ್ರಕಾರ ಭಾರತ ಹದಿನೈದನೆ ಸ್ಥಾನದಲ್ಲಿದೆ. ೧೯೯೬-೨೦೧೧ರ ಅವಧಿಯಲ್ಲಿ ಹಸಿವೆಯ ಸೂಚ್ಯಂಕ ಹೆಚ್ಚಾದ ಮೂರು ರಾಷ್ಟ್ರಗಳಲ್ಲಿ ಭಾರತವೂ ಒಂದು. ಪ್ರಪಂಚದ ಒಟ್ಟು ಪೌಷ್ಟಿಕಾಂಶದ ಕೊರತೆಯಿರುವ ಮಕ್ಕಳಲ್ಲಿ ಮೂರನೇ ಒಂದು ಭಾಗ ಭಾರತದ್ದು. ಇವೆಲ್ಲ ಬಂಡವಾಳಶಾಹಿ ಜಾಗತೀಕರಣ ಈ ದೇಶಕ್ಕೆ ಕೊಟ್ಟಿರುವ ಕೊಡುಗೆ ಎಂಬುದು ನಿರ್ವಿವಾದ. ಇನ್ನು ಮಾನವ ಅಭಿವೃದ್ಧಿ ಸೂಚ್ಯಂಕದ ಪ್ರಕಾರ ೧೮೭ ರಾಷ್ಟ್ರಗಳ ಪಟ್ಟಿಯಲ್ಲಿ ಭಾರತ ೧೩೪ನೇ ಸ್ಥಾನದಲ್ಲಿದೆ. ದಿನಕ್ಕೆ ಇಪ್ಪತ್ತು ರೂಪಾಯಿಯಲ್ಲಿ ಬದುಕುವವರ ಸಂಖ್ಯೆ ಸುಮಾರು ೮೦ ಕೋಟಿ. ಸಮಾನತೆಯ ಆಶಯ ಸಂವಿಧಾನ ಹೊಂದಿದ್ದರೂ ಅಸಮಾನತೆಯ ಪ್ರಮಾಣ ದಿನೇ ದಿನೇ ಹೆಚ್ಚುತ್ತಿದೆ. ವಿಚಾರ-ಆಚಾರಗಳಲ್ಲೆಷ್ಟು ಅಂತರ, ರೋಸಿಹೋದ ವಿದ್ಯಾವಂತ ನಿರುದ್ಯೋಗಿಗಳು, ಬುಡಕಟ್ಟಿನ ಜನರು ಬಂದೂಕಿಗೆ ಆಕರ್ಷಿತರಾಗುತ್ತಿದ್ದಾರೆ. ಸ್ವಾತಂತ್ರ್ಯ ಬಯಸುವುದೇ ಇವರ ಘೋರ ಅಪರಾಧವೆಂದು ಸರ್ಕಾರಗಳು ತೀರ್ಮಾನಿಸಿವೆ.

ಸ್ವತಂತ್ರ ಭಾರತದ ಜುಟ್ಟು ಜನಿವಾರ ಈಗ ಅಮೆರಿಕಾ ಸರ್ಕಾರದ ಕೈಯಲ್ಲಿದೆ. ವಿದೇಶಾಂಗ ನೀತಿಯನ್ನು ಅಮೆರಿಕಾ ಸರ್ಕಾರವೇ ನಿರ್ಧರಿಸುತ್ತದೆ. ಚಿಲ್ಲರೆ ವ್ಯಾಪಾರದಲ್ಲಿ ವಿದೇಶಿ ಬಂಡವಾಳ ಹೂಡಿಕೆಗೆ ಕೇಂದ್ರ ಸರ್ಕಾರದ ಜೊತೆ ಕೈ ಜೋಡಿಸಬೇಕೆಂದು ಮನವೊಲಿಸಲು ಮಮತಾ ಬ್ಯಾನರ್ಜಿಯವರನ್ನು ಅಮೆರಿಕಾದ ವಿದೇಶಾಂಗ ಕಾರ್ಯದರ್ಶಿ ಹಿಲೆರಿ ಕ್ಲಿಂಟನ್ ಭೇಟಿ ಮಾಡುತ್ತಾಳೆ. ಅಮೆರಿಕಾದ ಜೊತೆ ಮಿಲಿಟರಿ ಒಪ್ಪಂದ, ಅಣು ಒಪ್ಪಂದ, ವ್ಯಾಪಾರ ಒಪ್ಪಂದ ಇತ್ಯಾದಿ ಒಪ್ಪಂದಗಳು ಭಾರತವನ್ನು ಅಮೆರಿಕಾದ ನವ-ವಸಾಹತುವನ್ನಾಗಿಬಿಟ್ಟಿವೆ, ಸ್ವತಂತ್ರ ಭಾರತ ಸರ್ಕಾರಕ್ಕೆ ಈಗ ಸ್ವತಂತ್ರವಾಗಿ ಚಿಂತಿಸುವ ಅಗತ್ಯವೇ ಇಲ್ಲ, ಬಡಜನರ ಬದುಕುವ ಸ್ವಾತಂತ್ರ್ಯ ಅತಂತ್ರವಾಗಿಬಿಟ್ಟಿದೆ. ಸ್ವಾತಂತ್ರ್ಯದ ವಿಕಾಸದ ಬದಲು ಸ್ವಾತಂತ್ರ್ಯ ಹರಣ ಉಳ್ಳವರ ಕಾಯಕವಾಗಿಬಿಟ್ಟಿದೆ. ಮತ್ತೆ ಗೋಪಾಲಕೃಷ್ಣ ಅಡಿಗರ ಕವಿತೆಯ ಸಾಲುಗಳು ನೆನಪಿಗೆ ಬರುತ್ತದೆ:

*ಇಳಿ ಇಳಿಯುವ ಹೊಳೆ ಹೊಳೆಯುವ*
*ಬೆಳಕು ಹೊಳೆವ ಅಲೆ ಅಲೆಯಲಿ*
*ಅಲೆವ ದಿವ್ಯ ಚೇತ...*
*ಅಂತಾಗದೆ ಯಾವ ರಾಜ್ಯ ಬಂದರೇನೊ ಅಣ್ಣ ?*
*ಬರಿಯ ಮೆರಗು ಬಂತು ನಿಜ. ಎಲ್ಲಿ ಗಟ್ಟಿ ಚಿನ್ನ ?*

೧೯೪೭ರಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿಗಳಿಂದ ಹಸ್ತಾಂತರವಾದದ್ದು ಶೋಷಣೆಯ ಅಸ್ತ್ರಗಳು ಮಾತ್ರ. ಆಳುವ ವರ್ಗದ ಬಣ್ಣ ಬಟ್ಟಬಯಲಾಗಿದೆ. ಪರ್ಯಾಯದ ಶೋಧಕ್ಕೆ ಮಂಥನದ ಕಾಲ ಸನ್ನಿಹಿತವಾಗಿದೆ. ಜನಕ್ಕೆ ಸಿನಿಕತನದ ಆಗ ನಿಜವಾದ ಸ್ವಾತಂತ್ರ್ಯದ ಕನಸು ನನಸಾದೀತು.

# ತಲೆಯಿಲ್ಲದ ಮಂದಿ

ಎತ್ತು ಓಡುತ್ತಿದೆ
ಬಾಲವೇರಿಸಿಕೊಂಡು; ಕಿವಿ
ನಿಮಿರಿಸಿಕೊಂಡು.
ಓಟದ ಓಘ ನೋಡಿದರೆ
ಗೆದ್ದೆತ್ತೆ ಇರಬೇಕು.

ಎತ್ತು ಓಡುತ್ತಾ
ಮುಂದೆ, ಮುಂದೆ.
ಬಾಲ ಹಿಡಿದ ಮಂದಿ; ಹಿಂದೆ
ಹಿಂದೆ
ಬಾಲ ಮುಂದಿದ್ದರೆ
ಮುಂದೋಡುತ್ತಿದ್ದರೋ ಏನೋ ?

ಬಾಲದುದ್ದಕ್ಕೂ
ಜೋತು ಬಿದ್ದಿದ್ದಾರೆ.

ಬಾಲದೆತ್ತು ಎತ್ತ ತಿರುಗಿಸಿದರೂ
ಮಂದಿ ಬಿಟ್ಟರೆ ಕೇಳಿ; ಉಡದ
ಚಾಳಿ.

ಬಾಲ ಹಿಡಿದವರ
ಸಂಖ್ಯೆ ದಾರಿಯುದ್ದಕ್ಕೂ
ಏರುತ್ತಿವೆ.
ಈಗ ಎತ್ತಿಗಿಂತ ಬಾಲವೇ
ದೊಡ್ಡದಾಗಿದೆ; ಮತ್ತೂ
ಬೆಳೆಯುತ್ತಿದೆ.

ಎಷ್ಟಾದರೂ ಬಾಲವಲ್ಲವೇ
ತೂಕವೆಷ್ಟು ತಡೆದೀತು ?
ಕಿತ್ತು ಬಂತು ನೋಡಿ.
ಬಾಲವಿಲ್ಲದ ಎತ್ತು ;
ತಲೆಯಿಲ್ಲದ ಮಂದಿ

ಬಾಲಕ್ಕೊಂದು ಮೂರ್ತಿ
ಮಾಡಿ ಸರ್ಕಲ್‌ನಲ್ಲಿ
ನಿಲ್ಲಿಸಿದ್ದಾರೆ.
ನಿತ್ಯ ಪೂಜೆ, ಭಜನೆ.
ಬಾಲ ಬೆಳೆ ಬೆಳೆದು ಎತ್ತಾಗಿ
ಮತ್ತೇರಿಸಿಕೊಂಡು ಓಡುವುದ;
ಬಾಲಕ್ಕೆ ಮತ್ತೆ ಜೋತು ಬೀ
ಳುವುದ ಕನಸು
ಕಾಣುತ್ತಿದ್ದಾರೆ.

**ಮೃತ್ಯುಂಜಯ ಎಂ. ಸಾಲೀಮಠ**
ನಂ. ೨೪೯, ೩ನೇ 'ಎ' ಅಡ್ಡರಸ್ತೆ, ೩ನೇ ಬ್ಲಾಕ್
೩ನೇ ಹಂತ, ಬಸವೇಶ್ವರನಗರ, ಬೆಂಗಳೂರು - ೭೯



*ಈ ತಿಂಗಳು (೩ನೇ ಪುಟದಿಂದ)*

ಪಡೆದಿದ್ದಾನೆ, ಆದರೆ ಮೊಕದ್ದಮೆ ನಡೆದ ಸಂದರ್ಭದಲ್ಲಿ ಯಾರೋ ಒಬ್ಬ ಸಾಕ್ಷಿದಾರನು ಅವನನ್ನು ಅಪರಾಧಿಯೆಂದು ಗುರುತು ಹಿಡಿಯಲಿಲ್ಲವಂತೆ, ಅದಕ್ಕೆ ಅವನ ಬಿಡುಗಡೆಗೆ ತೀರ್ಪು ನೀಡಲಾಯಿತು. ಮೊಕದ್ದಮೆ ಹತ್ತು ವರ್ಷ ನಡೆಯಬೇಕಾಯಿತು ಈ ತೀರ್ಪು ನೀಡಲು. ಅವನ ಮೇಲೆ ೩೩೭ ಕೊಲೆ ಆಪಾದನೆಗಳಿವೆ, ಆದರೂ ಅವನನ್ನು ಜೈಲಿನಿಂದ ಹೊರಬಿಡಲಾಗಿತ್ತು. ಕೊಲೆಯಾದವರು ದಲಿತ ಮಹಿಳೆಯರು, ಮಕ್ಕಳು ಮತ್ತು ಪುರುಷರು. ದಿನನಿತ್ಯ ನಕ್ಸಲೈಟರ ಹಿಂಸೆಯ ಬಗ್ಗೆ ವ್ಯಾಖ್ಯಾನ ನೀಡುವ ನಮ್ಮ ''ಪ್ರಜಾಪ್ರಭುತ್ವವಾದಿ'' ಗೃಹಮಂತ್ರಿ ಪಿ. ಚಿದಂಬರಂಗೆ ಇದನ್ನೆಲ್ಲಾ ಲೆಕ್ಕಕ್ಕೆ ತೆಗೆದುಕೊಳ್ಳುವ ಮನಸ್ಸಿಲ್ಲ. ಕೊಲೆಯಾದವರು ದಲಿತರು ತಾನೆ ಎಂಬ ಉಪೇಕ್ಷೆ, ಬ್ರಹ್ಮ ಮತ್ತು ಈಶ್ವರ ಎರಡೂ ಇರುವ ಬ್ರಹ್ಮೇಶ್ವರನ ಹಿಂಸೆ, ಅತ್ಯಾಚಾರ, ಕೊಲೆ ಯಾವುದೂ ಗಣನೆಗೆ ಬಂದಿಲ್ಲ. ತೀರ್ಪು ಬಂದಿದ್ದು ಅವನ ಬಥಾನಿ ತೋಲ ಎಂಬಲ್ಲಿನ ವಿಧ್ವಂಸಕ ಕೃತ್ಯದ ಬಗೆಗಿನ ಮೊಕದ್ದಮೆಯಲ್ಲಿ. ಇವನು ಅಪರಾಧಿಯಲ್ಲದಿದ್ದರೆ ಬಥಾನಿಯಲ್ಲಿ ೧೯೯೬ರ ಜುಲೈ ೧೧ರಂದು ೨೧ ಮಂದಿ ಕೃಷಿ ಕಾರ್ಮಿಕರನ್ನು ಕೊಂದದ್ದು ಯಾರು ? ನ್ಯಾಯಾಲಯ ಆ ಬಗ್ಗೆ ತನಿಖೆ ನಡೆಸಲು ಸೂಚಿಸಲಿಲ್ಲ, ಬ್ರಹ್ಮೇಶ್ವರನನ್ನು ನಿರಪರಾಧಿಯೆಂದು ಘೋಷಿಸಿತು, ಅಷ್ಟೆ. ಅದೂ ಒಬ್ಬ ಸಾಕ್ಷಿದಾರನ ಒಂದು ಮಾತಿನ ಆಧಾರದ ಮೇಲೆ! ಬಥಾನಿ ತೋಲದಂತಹ ಹತ್ತಾರು ಬೇರೆ ಕಡೆಗಳಲ್ಲಿ ರಣವೀರ ಸೇನೆ ಕೊಲೆಗಳನ್ನು ಮಾಡಿದೆ, ಭೂಮಾಲೀಕರು ಅದಕ್ಕೆ ಬೆಂಬಲ ನೀಡಿದ್ದಾರೆ. ಅದಕ್ಕೆ ಪ್ರತಿಯಾಗಿ ಮಾವೋವಾದಿ ಕೋ-ಆರ್ಡಿನೇಷನ್ ಸೆಂಟರ್ ಎಂಬ ಪಕ್ಷದ ಕಾರ್ಯಕರ್ತರು ರಣವೀರ ಸೇನೆಯವರನ್ನು ಕೊಂದಿರುವುದೂ ನಿಜ. ಶಾಂತಿಯಿಂದಲೇ ಹೋರಾಟ ನಡೆಸಬೇಕೆಂಬ ಸದಿಚ್ಛೆ ಎಲ್ಲರದೂ ಹೌದು, ಆದರೆ ಭೂಮಾಲೀಕರ ಹಿಂಸಾಪಡೆಗಳು ಅದಕ್ಕೆ ಅವಕಾಶ ನೀಡುತ್ತಿಲ್ಲ. ಶಾಂತಿಗಾಗಿ ಆಗ್ರಹಿಸುವ ನಾವೆಲ್ಲಾ ಬಥಾನಿ ತೋಲದಲ್ಲಿ ಕೊಲೆ ಮಾಡಿದವರಿಗೆ ಶಿಕ್ಷೆಯಾಗಲು ಮತ್ತು ರಣವೀರ ಸೇನೆಯ ಹಿಂಸೆಯನ್ನು ಕೊನೆಗಾಣಿಸಲು ಏನು ಮಾಡಬೇಕು ? ಚಿದಂಬರಂ ಮಹಾಮೌನಿ ಮತ್ತು ಕೇಡಿಗ. ಬೇರೆ ಯಾರಿಂದ ಉತ್ತರ ದೊರೆತೀತು ? ನಮ್ಮ ದೇಶದಲ್ಲಿ ಬಥಾನಿ ತೋಲ ಇರುವುದು ಒಂದಲ್ಲ, ಹಲವು. ಹಾಗಿದ್ದರೆ ನಾಳೆ ಏನು ?

* * *

ಕಳೆದೆರಡು ವಾರಗಳಲ್ಲಿ ಅಮೆರಿಕಾದ ಔಟ್ ಆಫ್ ಟೈಂ ಆದ 'ಟೈಮ್' ಪತ್ರಿಕೆಯ ಒಂದು ಲೇಖನದ್ದೇ ಚರ್ಚೆ ನಮ್ಮ ದೇಶದಲ್ಲಿ. ಆ ಪತ್ರಿಕೆಯು ಸದಾ ಏಕಸ್ವಾಮ್ಯ ಬಂಡವಾಳಿಗರ ದನಿಯಾಗಿಯೇ ಕೆಲಸ ಮಾಡಿದೆ, ಈಗಲೂ ಮಾಡುತ್ತಿದೆ. ಅಮೆರಿಕಾದಲ್ಲಿ ಅದನ್ನು ಓದುವವರ ಸಂಖ್ಯೆ ಎಷ್ಟೆಂದು ನಮ್ಮ ಮಾಧ್ಯಮಗಳು ತಿಳಿಸಬೇಕಾಗಿತ್ತು. ಅದನ್ನು ಮಾಡುವ ಬದಲು ಅದೇನೋ ಪೂಜಾರ್ಹ ಮಹಾಪತ್ರವೆಂಬಂತೆ ಅದನ್ನು ಗಂಭೀರವಾಗಿ ತೆಗೆದುಕೊಂಡು ಅಬ್ಬರ ಎಸಗುತ್ತಿರುವುದು ನಮ್ಮ ಮಾಧ್ಯಮಗಳಿಗೆ ಯೋಗ್ಯವಲ್ಲ. ಪ್ರಧಾನಿ ಮನಮೋಹನ ಸಿಂಗ್ ಒಬ್ಬ ಅಶಕ್ತ, ನಿಷ್ಕರ್ಮಿ (ಹಿಂದಿಯಲ್ಲಿ 'ನಿಕಮ್ಮೀ' ಎನ್ನುತ್ತಾರೆ) ನಾಯಕ, ಸೋಲನ್ನುಂಡ ಹೇಡಿ, ಸುಧಾರಣೆಗಳನ್ನು ತರಲು ಸರ್ಕಾರಕ್ಕೆ ಬೆಂಬಲ ನೀಡುತ್ತಿರುವ ಪಕ್ಷಗಳ ಒತ್ತಡವನ್ನು ನಿವಾರಿಸಿಕೊಳ್ಳಲು ಬದ್ಧತೆ ಇಲ್ಲದವ, ಇತ್ಯಾದಿ ವಿಶೇಷಣಗಳನ್ನು ನೀಡಿರುವ 'ಟೈಮ್' ಪತ್ರಿಕೆಯ ಟೀಕೆಯನ್ನು ಕಾಂಗ್ರೆಸ್ ಪಕ್ಷ ಎದುರಿಸಿದ ಬಗೆ ನಾಚಿಕೆಗೇಡಿನದು : ''ಆ ಪತ್ರಿಕೆ ಹಿಂದೆ ವಾಜಪೇಯಿಯವರ ಬಗೆಗೂ ಅಂಥದೇ ಮಾತು ಹೇಳಿತ್ತು, ಆದ್ದರಿಂದ ಮನಮೋಹನ ಸಿಂಗ್ ಬೇಸರಿಸಬೇಕಾಗಿಲ್ಲ'' ಎಂದು. ಮಾಧ್ಯಮ ಹಾಕಿಕೊಳ್ಳಬೇಕಾದ ಪ್ರಶ್ನೆ ಬೇರೆಯದೇ ಇದೆ : ''ಯಾವ ಸುಧಾರಣೆ ಮಾಡಲಿಲ್ಲವೆಂದು ಟೈಮ್ ಪತ್ರಿಕೆ ಪ್ರಧಾನಿ ಬಗ್ಗೆ ಅಸಹನೆ ಪ್ರಕಟಿಸಿದೆ ? ಆ ಸುಧಾರಣೆಗಳನ್ನು ಕಡ್ಡಾಯವಾಗಿ ತರಬೇಕಾಗಿತ್ತೆ ಅಥವಾ ಮುಂದೆ ತರಬೇಕೆ ? ಅದನ್ನು ತರದೆ ಪ್ರಧಾನಿ 'ಅಶಕ್ತ' ಎನಿಸಿಕೊಂಡರೆ ನಮ್ಮ ದೇಶ ದುಃಖಿಸಬೇಕೆ ?'' ಹಿಲರಿ ಕ್ಲಿಂಟನ್ ಇತ್ತೀಚೆಗೆ ಬಂದಿದ್ದು ನಮ್ಮ ದೇಶದಲ್ಲಿ ಸರ್ವಾಧಿಕಾರಿಣಿಯಂತೆ ನಡೆದುಕೊಂಡಿದ್ದುದನ್ನು ಮರೆಯದಿರೋಣ. ಅಮೆರಿಕಾದ ಬಂಡವಾಳ ಹೂಡಿಕೆಗೆ ಯಾವ ಆತಂಕವೂ ಕೂಡದು, ಅದರ ಲಾಭದ ಮಟ್ಟಕ್ಕೆ ಮಿತಿ ಇರಕೂಡದು, ನಮ್ಮ ದೇಶದ ಕಾನೂನನ್ನು ಅದರ ಅನುಕೂಲಕ್ಕೆ ತಕ್ಕಂತೆ ಬದಲಾಯಿಸಬೇಕು : ಇದು ಆಕೆಯ ಆಶಯ, ಅದಕ್ಕೇ ಒತ್ತಡ ಹೇರುವುದು. ವಾಲ್‌ಮಾರ್ಟ್ ಈ ಕೂಡಲೆ ಭಾರತಕ್ಕೆ ಬಂದುಬಿಡಬೇಕೆಂದು ಹಿಲರಿ, ಆನಂದ ಶರ್ಮ, ಅಹ್ಲುವಾಲಿಯ, ಮನಮೋಹನ ಸಿಂಗ್, ಚಿದಂಬರಂ ಎಲ್ಲರೂ ಆಶಿಸುತ್ತಾರೆ. ಅದಕ್ಕೆ ಹಲವು ಪಕ್ಷಗಳು ಅಡ್ಡಬಂದಿವೆ. ಟೈಮ್ ಪತ್ರಿಕೆ ಮನಮೋಹನ ಸಿಂಗರನ್ನು 'ಅಶಕ್ತ' ಎಂದು ಕರೆದಿರುವುದು ಈ ಹಿನ್ನೆಲೆಯಲ್ಲಿ. ''೧೯೯೦ರ ದಶಕದಲ್ಲಿ ಮಾಡಿದಂತೆ ಈಗಲೂ ಮಾಡಿ ನಮ್ಮಿಂದ ಶಹಭಾಸ್‌ಗಿರಿ ಪಡೆದುಕೋ, ಉದಾರೀಕರಣವನ್ನು ಹಿಗ್ಗಿಸಿ ನಿಮ್ಮ ದೇಶವನ್ನು ನುಂಗಲು ಬಿಡು'' ಎಂಬುದು ಹಿಲರಿ ಮತ್ತು ಟೈಮ್ ಬಯಕೆ. ನಮ್ಮ ದೇಶದ ಜನರ ಜೀವನವನ್ನು ಹಸನುಗೊಳಿಸಲಿಲ್ಲವೆಂದು ಅಮೆರಿಕಾದ ಆಪಾದನೆಯಲ್ಲ, ಮನಮೋಹನ ಸಿಂಗ್ ಸರ್ಕಾರವು ಈಗಾಗಲೇ ಅಮೆರಿಕಾದ ದಾಸ್ಯಕ್ಕೆ ಮುಂದಾಗಿದೆ, ಅದನ್ನು ಮುಂದುವರಿಸದೆ ಹಿಂದಕ್ಕೆ ಹೆಜ್ಜೆ ಹಾಕಿ ದೇಶದ ಘನತೆಯನ್ನು ಕಾಪಾಡಬೇಕೆಂಬುದು ಜನತೆಯ ಆಶಯ. ಆದರೆ ಹಿಲರಿ ಮತ್ತು ಟೈಮ್ ಪತ್ರಿಕೆ ಹೇಳುವುದೇ ಬೇರೆ: ಅಮೆರಿಕಾದ ಸೇವೆ ಮಾಡಿದರೆ ಸಾಲದು, ಅಮೆರಿಕಾದ ಪಾದರಕ್ಷೆ ನೆಕ್ಕಿ ನಾಲಿಗೆ ಕಪ್ಪು ಮಾಡಿಕೊಳ್ಳಿ, ಎಂದು. ನಮ್ಮ ಮಾಧ್ಯಮಗಳು ಇಷ್ಟು ಸುಲಭವಾದ ವಿಷಯವನ್ನು ತಿಳಿದುಕೊಳ್ಳಲು ಸೋಲುವುದೇಕೆ ? ಅವು ಸಹ ಭಾರಿ ಬಂಡವಾಳದ ಮತ್ತು ವಿದೇಶಿ ಬಂಡವಾಳದ ಕೈಕೂಸು ಆಗಿರುವುದರಿಂದ. ಟೈಮ್ ಪತ್ರಿಕೆ ಹೇಳುವ ''ಪ್ರಧಾನಿಯ ಅಶಕ್ತತೆ ಮತ್ತು ಸೋಲು'' ದ್ವಿಗುಣಗೊಳ್ಳಲಿ, ಆ ಪತ್ರಿಕೆ ಅವರನ್ನು ಇನ್ನೂ ಹೆಚ್ಚು ಛೇಡಿಸಲಿ; ಅದರಿಂದ ನಮ್ಮ ದೇಶಕ್ಕೆ ಅವಮರ್ಯಾದೆ ಎಂಥದೂ ಇಲ್ಲ, ಬದಲಾಗಿ ದೇಶದ ಜನರ ಹಿತಕ್ಕೆ ಅದು ಒಳ್ಳೆಯದು. ಟೈಮ್ ಪತ್ರಿಕೆಯನ್ನು ನಾವು ಸುಡಬೇಕಾಗಿಲ್ಲ, ತನ್ನ ಅಸಹನೆಯ ಮತ್ತು ಲಾಭಗಡುಕತನದ ಬೆಂಕಿಯಲ್ಲಿ ತನ್ನನ್ನು ತಾನೇ ಸುಟ್ಟುಕೊಳ್ಳುತ್ತದೆ. ಶುಭಮಸ್ತು! ಇದನ್ನು ಬರೆಯುತ್ತಿರುವಾಗ ಅಮೆರಿಕಾ ಅಧ್ಯಕ್ಷ ಒಬಾಮಾ ಅವರ ಒಂದು ಭರ್ತ್ಸನೆ ಬಂದಿದೆ: ಭಾರತಕ್ಕೆ ಉದಾರವಾದಿ 'ಸುಧಾರಣೆಯ ಇನ್ನೊಂದು ಅಲೆ' ಬೇಕಾಗಿದೆ ಎಂದು. ನಮಗೆ ಬೇಕಾದ್ದೇನೆಂದು ನಮಗಿಂತ ಅವರಿಗೆ ಹೆಚ್ಚು ತಿಳಿದಿದೆ! ಏಕೆಂದರೆ ಭಾರತದ ಹೊಟ್ಟೆ ಬಗೆದು ಸಂಪತ್ತನ್ನು ದೋಚಬೇಕೆನ್ನುವ ಉತ್ಸಾಹ ಅವರದು. ಜೊತೆಗೆ ಚೀಣಾ, ರಷ್ಯ ಮತ್ತು ಪಾಕಿಸ್ತಾನಗಳ ವಿರುದ್ಧ ಕತ್ತಿ ಮಸೆಯುವಾಗ ಅವರಿಗೆ ಭಾರತ ಒಂದು ಮಸೆಗಲ್ಲಾಗಬೇಕೆಂಬ ಆಕಾಂಕ್ಷೆ ಮಹತ್ತರವಾಗಿದೆ.

* * *

ಭಾರತದಲ್ಲಿ 'ಸುಧಾರಣೆಯ ಇನ್ನೊಂದು ಅಲೆ' ಅಗತ್ಯವೆಂದು ಹೇಳಿದ ಒಬಾಮಾ ತನ್ನ ದೇಶದ ಹಿತವನ್ನು ಕಾಯಲು ತವಕಿಸುವಂತೆ ಕೇಂದ್ರ ಮಂತ್ರಿ ಕಪಿಲ್ ಸಿಬಲ್ ಸಹ ಅಮೆರಿಕಾ ಹಿತಕ್ಕಾಗಿ ಶಪಥ ಕೈಗೊಂಡಿದ್ದಾರೆ. ಹೇಗೂ ಆತ ನ್ಯೂಯಾರ್ಕ್ ಲಾಯರ್ ಅಲ್ಲವೇ! ಭಾರತದ ಉನ್ನತ ಶಿಕ್ಷಣ ಕ್ಷೇತ್ರದ ''ಅಭಿವೃದ್ಧಿ''ಗಾಗಿ ಅವರು ಕೂಡಲೆ ವಿದೇಶಿ ವಿಶ್ವವಿದ್ಯಾನಿಲಯಗಳಿಗೆ ಅವಕಾಶ ಮಾಡಿಕೊಡಲು ಶ್ರಮಿಸುತ್ತಿದ್ದಾರೆ. ಅವರಿಗೆ ಸಹಾಯ ಮಾಡಲು ರಾಷ್ಟ್ರೀಯ ಜ್ಞಾನ ಆಯೋಗವನ್ನು ನೇಮಿಸಿದ್ದಾರೆ. ಅದು ವಿಶ್ವಮಟ್ಟದ ೧೪ ವಿಶ್ವವಿದ್ಯಾನಿಲಯಗಳನ್ನು ನಮ್ಮ ದೇಶದಲ್ಲಿ ಸ್ಥಾಪಿಸಬೇಕೆಂದು ಸಲಹೆ ನೀಡಿದೆ. ''ವಿಶ್ವ'' ಎಂದಕೂಡಲೆ ಅಮೆರಿಕಾ ಬರಬೇಕಲ್ಲವೆ ? ಸಿಬಲ್ ಭಾರಿ ''ಇನೋವೇಟಿವ್'' ಮನುಷ್ಯ, ಸದಾ ಹೊಸ ಅಡ್ಡದಾರಿಗಳನ್ನು ಕಂಡುಕೊಳ್ಳುತ್ತಲೇ ಇರುತ್ತಾರೆ. ಈಗಿನ ಅವರ ಅಮೋಘ ಯೋಜನೆ ಭಾರತದಲ್ಲಿ ''ಇನೊವೇಶನ್'' ವಿಶ್ವವಿದ್ಯಾಲಯಗಳನ್ನು ಸ್ಥಾಪಿಸುವುದು. ಅದಕ್ಕಾಗಿ ಪಾರ್ಲಿಮೆಂಟಿನಲ್ಲಿ ಒಂದು ಮಸೂದೆ ಮಂಡಿಸಿದ್ದಾರೆ. ನಾವೀನ್ಯದ ಕಲ್ಪನೆಯ ಮೊದಲ ಹಂತದಲ್ಲಿ ವಿದೇಶಿ ವಿಶ್ವವಿದ್ಯಾನಿಲಯಗಳ ಆಹ್ವಾನ ಮತ್ತು ನಿಯಂತ್ರಣದ ಮಸೂದೆಯು ಪಾರ್ಲಿಮೆಂಟಿನಲ್ಲಿ ಸದ್ಯಕ್ಕಿನ್ನೂ ಅಂಗೀಕಾರ ಪಡೆಯಲಾರದೆಂಬ ಕಾರಣದಿಂದ ಸಿಬಲ್ ಅಡ್ಡದಾರಿ ಕಲ್ಪಿಸಿದ್ದಾರೆ : ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಯಾವುದೋ ಒಂದು ನಿಬಂಧವನ್ನು ತಿರುಚಿ ಅದರಡಿಯಲ್ಲಿ ತುರ್ತಾಗಿ ಹೊರದೇಶಗಳ (ಅಂದರೆ ಅಮೆರಿಕಾದ !) ವಿಶ್ವವಿದ್ಯಾಲಯಗಳನ್ನು ತಂದು ಭಾರತದಲ್ಲಿ ನೆಡುವುದು ಈ ಅಡ್ಡದಾರಿ. ಈಗಾಗಲೆ ಅಮೆರಿಕಾದಲ್ಲಿ ಸಂಚರಿಸಿ ಸಿಬಲ್ ಅಲ್ಲಿಯ ''ಕಮ್ಯುನಿಟಿ ಕಾಲೇಜು''ಗಳನ್ನು ಇಲ್ಲಿಗೆ ತರಲು ಮುಂದಾಗಿದ್ದಾರೆ. ಮೊದಲಿಗೆ ೩೫ ಸಾಕಂತೆ. ಏನಿವು ? ನಮ್ಮ ದೇಶದ ಔದ್ಯಮಿಕ ತರಬೇತಿ ಸಂಸ್ಥೆ, ಪಾಲಿಟೆಕ್ನಿಕ್ ಇವಕ್ಕೆ ಸಮನಾದವು. ಅವೇ ''ವಿದೇಶಿ ವಿಶ್ವವಿದ್ಯಾಲಯಗಳು'' ! ಇಂಗ್ಲಿಷ್ ಮಾಧ್ಯಮದ ಖಾಸಗಿ ಶಾಲೆಗಳು ನಮ್ಮ

ರಾಜ್ಯದಲ್ಲಿ ಸರ್ಕಾರಿ ಶಾಲೆಗಳನ್ನು ನಾಶಮಾಡಿರುವಂತೆ ಅಮೇರಿಕಾದ ''ಕಮ್ಯುನಿಟಿ ಕಾಲೇಜುಗಳು'' ನಮ್ಮ ಪಾಲಿಟೆಕ್ನಿಕ್‌ಗಳನ್ನು ಮುಚ್ಚಿಸುತ್ತವೆ. ಕಡಿಮೆ ಶುಲ್ಕ ಕೊಟ್ಟು ತರಬೇತಿ ಪಡೆಯುವ ಅವಕಾಶ ಆಗ ನಮ್ಮ ವಿದ್ಯಾರ್ಥಿಗಳಿಗೆ ಇರುವುದಿಲ್ಲ, ಆದ್ದರಿಂದ ಸಮಾಜದ ಕೆಳವರ್ಗದವರಿಗೆ ಔದ್ಯಮಿಕ ತಾಂತ್ರಿಕ ಶಿಕ್ಷಣ ದುರ್ಲಭ ವಾಗಲಿದೆ. ಹಾರ್ವರ್ಡ್ ಬೆಂಗಳೂರಿಗೆ ಬರದಿದ್ದರೇನಂತೆ, ಕಲಮಝೂ ಕಮ್ಯುನಿಟಿ ಕಾಲೇಜು ಬರುತ್ತದೆ, ಎಂತಹ ಸೌಭಾಗ್ಯ! ಇದು ಸಿಬಲ್ ಉನ್ನತ ಶಿಕ್ಷಣ ನೀತಿ. ''ಇನೊವೇಟಿವ್'' ವಿಶ್ವವಿದ್ಯಾಲಯಗಳು ಬೇರೆ ತೆರನಾದವು: ಅವು ಸ್ವಾಯತ್ತ, ಅಂದರೆ ಶೈಕ್ಷಣಿಕ ವಿಷಯ, ಬೋಧನೆಯ ಹಾದಿ, ಶುಲ್ಕ, ಪರೀಕ್ಷೆ, ಪದವಿ ಪ್ರದಾನ, ಎಲ್ಲವನ್ನೂ ಅವೇ ತೀರ್ಮಾನಿಸುತ್ತವೆ. ಅಲ್ಲಿ ವಿದ್ಯಾರ್ಥಿಗಳ ಪ್ರವೇಶದಲ್ಲಿ ಪರಿಶಿಷ್ಟರಿಗೆ ಸಹ ಮೀಸಲಾತಿ ಇರುವುದಿಲ್ಲ; ಸರ್ಕಾರ ಮತ್ತು ಸಮಾಜ ಅಲ್ಲಿ ಮಧ್ಯಪ್ರವೇಶ ಮಾಡುವಂತಿಲ್ಲ. ಯಾವ ಉದ್ಯಮಿ ಅಥವಾ ಬಂಡವಳಿಗನು ಹಣ ಹೂಡಿ ವಿಶ್ವವಿದ್ಯಾನಿಲಯ ಸ್ಥಾಪಿಸುತ್ತಾನೊ ಅವನದೇ (ಅಥವಾ ಅವಳದೇ) ಎಲ್ಲಾ ಕಾರುಬಾರು. ಸ್ಥಳೀಯ ವಿಶ್ವವಿದ್ಯಾಲಯದ ಕೆಲವು ಅಧ್ಯಾಪಕರು ಮಾತ್ರ ಶೈಕ್ಷಣಿಕ ಮಂಡಲಿಯಲ್ಲಿರುತ್ತಾರೆ, ಆಡಳಿತ ಮಂಡಲಿಯಲ್ಲಿ ಯಾರಿಗೂ ಪ್ರವೇಶವಿಲ್ಲ. ನಮ್ಮಲ್ಲಿ ಅಪಾರ್ಟ್‌ಮೆಂಟ್‌ಗಳನ್ನು ನಿರ್ಮಿಸುವ ''ಪ್ರಮೋಟರ್ಸ್'' ಇದ್ದಂತೆ ''ಇನೊವೇಟಿವ್ ವಿಶ್ವ ವಿದ್ಯಾಲಯ'' ಸ್ಥಾಪಿಸುವ ಪ್ರಮೋಟರ್ಸ್ ಇರುತ್ತಾರೆ, ಅಷ್ಟೆ. ಇದೂ ಸಂಪೂರ್ಣ ಖಾಸಗಿ ಉದ್ಯಮ. ಸಾರ್ವಜನಿಕರು ಅದರ ಲೆಕ್ಕಪತ್ರ ಸಹ ನೋಡಲಾರರು. ಅಂದರೆ, ಅವಕ್ಕೆ ಯಾರ ಹಂಗೂ ಇಲ್ಲ, ಯಾರಿಗೂ ಬಾಧ್ಯವಾಗಬೇಕಾಗಿಲ್ಲ. ವಿದೇಶಿ ವಿಶ್ವವಿದ್ಯಾಲಯಗಳನ್ನು ಇಂದಿನ ''ಡೀಮ್ಡ್ ಯೂನಿವರ್ಸಿಟಿ''ಗಳಂತೆ ಸ್ಥಾಪನೆ ಗೊಳ್ಳಲು ಆಹ್ವಾನ ಒಂದು ಕಡೆ, ಇನೊವೇಟಿವ್ ವಿಶ್ವವಿದ್ಯಾಲಯ ಇನ್ನೊಂದು ಕಡೆ. ಯಾವ ಕಾನೂನು ಸಹ ಅನ್ವಯವಾಗದ ಈ ವಿದ್ಯಾಸಂಸ್ಥೆಗಳು ಯಾರಿಂದ ಮತ್ತು ಯಾರಿಗಾಗಿ ಎಂಬುದನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳಬಹುದು. ಆಮೇಲೆ ಮಾನಸಗಂಗೋತ್ರಿ, ಜ್ಞಾನಭಾರತಿ, ಇತ್ಯಾದಿಗಳನ್ನು ಹರಾಜಿಗಿಟ್ಟು ಕಡಿಮೆ ಬೆಲೆಗೆ ಅವನ್ನು ಈ ಪ್ರಮೋಟರ್ಸ್‌ಗೆ ಹಸ್ತಾಂತರಿಸಿ ಸಿಬಲ್ ವೃಂದ ಒಂದಷ್ಟು ಲಕ್ಷ ಕೋಟಿಗಳನ್ನು ಕಮಿಶನ್ ಎಂದು ಜೇಬಿಗೆ ಬಿಡಬಹುದು! ಇದು ನಮ್ಮ ಉನ್ನತ ಶಿಕ್ಷಣ ಕ್ಷೇತ್ರದ ನಾಳಿನ ಭವಿಷ್ಯ.ಇನೊವೇಟಿವ್ ಹೆಸರಿನಲ್ಲಿ ವಿಷ ಉಣ್ಣಿಸುವ ವಿಶ್ವವಿದ್ಯಾಲಯಗಳು ಬೇಡ, ಡೀಮ್ಡ್ ವಿದೇಶಿ ವಿಶ್ವವಿದ್ಯಾಲಯ ಬೇಡ. ಇರುವ ನಮ್ಮ ವಿಶ್ವವಿದ್ಯಾಲಯಗಳನ್ನು ಸುಸೂತ್ರವಾಗಿ ಚೆನ್ನಾಗಿ ನಡೆಸಿದರೆ ಜನತೆಗೆ ಅವು ಉನ್ನತ ಶಿಕ್ಷಣದ ಉತ್ತಮ ಕೇಂದ್ರಗಳಾಗುತ್ತವೆ. ಸಿಬಲ್ ಅವರನ್ನು ಕೂಡಲೆ ನ್ಯೂಯಾರ್ಕಿಗೆ ರವಾನಿಸಿಬಿಡೋಣ!

* * *

ಕರ್ನಾಟಕದಲ್ಲಿ ಭಾರತೀಯ ಜನತಾ ಪಕ್ಷದ ಆಡಳಿತ ಪ್ರಾರಂಭವಾದ ನಾಲ್ಕು ಚಿಲ್ಲರೆ ವರ್ಷದಲ್ಲಿ ಹಲವು ಪ್ರಥಮಗಳು ದಾಖಲೆಗೊಂಡಿವೆ. ಸ್ವಾತಂತ್ರ್ಯಾನಂತರ ದಲ್ಲಿ ಅಸ್ತಿತ್ವಕ್ಕೆ ಬಂದ ಕಳಪೆ ಸರಕಾರಗಳಲ್ಲಿ ಅತ್ಯಂತ ಕಳಪೆಯಾದ್ದು ಭಾಜಪ ಸರಕಾರ ಯಡ್ಡಿಯೂರಪ್ಪ ನೇತೃತ್ವದ್ದು. 'ಆಪರೇಶನ್ ಕಮಲ' ಎಂಬ ಕುಖ್ಯಾತಿ ಹೊಂದಿರುವ ಶಾಸಕರನ್ನು ಖರೀದಿಸಿ ಆ ಸ್ಥಾನಕ್ಕಿದ್ದ ಗೌರವವನ್ನು, ಮೌಲ್ಯವನ್ನು ಚ್ಯುತಿಗೆ ತಂದಿದ್ದು ಮೊದಲ ಅಪರಾಧ. ಇಂಥ ಅವ್ಯವಹಾರಗಳು ಹಿಂದೆ ರಹಸ್ಯವಾಗಿ ಒಂದೆರಡು ಪ್ರಕರಣಗಳಲ್ಲಿ ನಡೆದಿತ್ತಾದರೂ ಬಹಿರಂಗ ವಾಗಿ ಬೀದಿಗೆ ತಂದು ನಿಲ್ಲಿಸಿದ ಕೀರ್ತಿ ಭಿನ್ನವಾದ ಈ ಪಾರ್ಟಿಗೆ ಸಲ್ಲುತ್ತದೆ. ತಾನು 'ಪಾರ್ಟಿ ವಿತ್ ಎ ಡಿಫರೆನ್ಸ್', 'ಶಿಸ್ತಿನ ಸಂಘಟನೆ' ಎಂದು ಹೇಳಿಕೊಳ್ಳುತ್ತಿದ್ದ ಈ ಆರೆಸ್ಸೆಸ್ ಮುಖವಾಡ ಎಂಥ ವಿಕಾರವಾದ್ದು ಎನ್ನುವುದು ಜನರಿಗೆ ಈಗ ಗೊತ್ತಾಗಿದೆ. ಜೈಲಿಗೆ ಹೋದ ಮೊದಲ ಮುಖ್ಯಮಂತ್ರಿ ಭಾಜಪದವ. ಈತ ಅಧಿಕಾರದಿಂದ ಇಳಿದರೂ ಪಕ್ಷದ ದಿಲ್ಲಿ ನಾಯಕರನ್ನು ಮಣ್ಣು ಮುಕ್ಕಿಸಿದ ವೀರ. ಪಟ್ಟು ಹಿಡಿದು ತಾನೇ ನೇಮಿಸಿದ್ದು, ತಿರುಗಿಬಿದ್ದ ಮುಖ್ಯಮಂತ್ರಿ ಸದಾನಂದ ಗೌಡರನ್ನು ಇಳಿಸಿ, ತನ್ನ ಹಳೆ ಶತ್ರುವಾಗಿದ್ದ ಜಗದೀಶ ಶೆಟ್ಟರನ್ನು ಅಧಿಕಾರಕ್ಕೆ ತಂದಿರುವ ಪ್ರಚಂಡ. ಇಬ್ಬರು ಡೆಪ್ಯುಟಿ ಮುಖ್ಯಮಂತ್ರಿಗಳನ್ನು ಮೊದಲ ಬಾರಿಗೆ ಸೃಷ್ಟಿಸಿದ್ದಾರೆ. ಭಾಜಪ ಹೈಕಮಾಂಡ್- ಗಡ್ಕರಿ, ಅದ್ವಾನಿ, ಜೇಟ್ಲಿ, ಸುಷ್ಮಾ ವಗೈರೆ ನಾಯಕರು ಯಡಿಯೂರಪ್ಪ ಹೇಳಿದ ಹಾಗೆ ಕುಣಿದಿರುವುದು ನಾಚಿಕೆಗೇಡು. ಇಂಥ ಸರಕಾರವನ್ನು ಇನ್ನೂ ಹನ್ನೊಂದು ತಿಂಗಳು ಕನ್ನಡಿಗರು ಸಹಿಸಿಕೊಂಡಿರಬೇಕಾಗಿದೆ. ಅಂದ ಹಾಗೆ ಜಾತಿ ರಾಜಕಾರಣಕ್ಕೆ ಕುಮ್ಮಕ್ಕು ನೀಡಿ ಬಹಿರಂಗವಾಗಿ ಚಾಲ್ತಿಗೆ ತಂದ ಭ್ರಷ್ಟರು ಭಾರತೀಯ ಸಂಸ್ಕೃತಿ ಕುರಿತು ಬೊಬ್ಬೆ ಹೊಡೆಯುವ ಆರೆಸ್ಸೆಸ್ ಮೂಲದಿಂದ ಬಂದಿರುವ ಕಾರ್ಯಕರ್ತರು. ಅಧಿಕಾರಕ್ಕೆ ಅಂಟಿಕೊಳ್ಳುವುದೇ ಮುಖ್ಯ ಇವರಿಗೆ. ಮಾಧ್ಯಮಗಳು ನೀಡಿರುವ 'ಎಲ್‌ಕೆಜಿ' ಹಣೆಪಟ್ಟಿ ಯಥಾರ್ಥವಾದ ದ್ದಾಗಿದೆ. ಇಂಥ ನೀಚರನ್ನು ಹೊಂದಿರುವುದು ಕನ್ನಡಿಗರ ದೊಡ್ಡ ದುರಂತ.

* * *

ಹೊಸ ಮಂತ್ರಿಮಂಡಲ ಹೆಣೆದ ಮೇಲೆ ಖಾತೆ ಗಳಿಗಾಗಿ ಕಿತ್ತಾಟ. ಇದು ಎಲ್ಲ ಸರಕಾರ ರಚನೆಯಲ್ಲೂ ಇದ್ದದ್ದೆ ಎನ್ನಬೇಡಿ. ಇದರಲ್ಲೂ ಭಾಜಪದ ವಿಶೇಷತೆ ಇದೆ. ಕಳಂಕಿತರನ್ನು ಸಂಪುಟದಲ್ಲಿ ಮುಂದುವರಿಸಿ ರುವುದು, ಹಳೆಯ 'ಪ್ಲಮ್', ಅಂದರೆ ವಸೂಲಿಬಾಜಿ ಖಾತೆಗಳನ್ನೇ ನೀಡಿರುವುದು ಹೊಸದೇನಲ್ಲ. ಕಳಂಕಿತರು ಯಾರು ಎಂದು ಹೆಕ್ಕಿ ತೆಗೆಯುವುದೇ ಕಷ್ಟ. ಏಕೆಂದರೆ ಎಲ್ಲರೂ ಕಳಂಕಿತರೆ. ಯಾರು ಹೆಚ್ಚು ಯಾರು ಕಡಿಮೆ? ಹೊಸದಾಗಿ ಸೃಷ್ಟಿಯಾಗಿರುವ ಇಬ್ಬರು ಉಪ ಮುಖ್ಯಮಂತ್ರಿ ಗಳಲ್ಲಿ ಯಾರು ಹೆಚ್ಚು? ತ್ರಿಮೂರ್ತಿಗಳಲ್ಲಿ ಎಷ್ಟುಮಟ್ಟಿಗೆ ಹೊಂದಾಣಿಕೆ ಇದ್ದೀತು? 'ಎತ್ತು ಏರಿಗೆ ಎಳೆದರೆ ಕೋಣ ನೀರಿಗೆ' ಅಂದ ಹಾಗೆ ಈ ಕಿಚಡಿ ಸರಕಾರ ಏನು ಸಾಧನೆ ಮಾಡೀತು ಉಳಿದ ತಿಂಗಳುಗಳಲ್ಲಿ? ತೀವ್ರವಾದ ಬರಗಾಲ ಪರಿಸ್ಥಿತಿ ಎದುರಿಸುತ್ತಿರುವ ಕನ್ನಡ ಜನರ ಪಾಡನ್ನು ಕೇಳುವವರೆ ಇಲ್ಲವಾಗಿದೆ. ಒಂದು ವರ್ಷದಿಂದ ಅಧಿಕಾರಿಗಳದ್ದೇ ದರ್ಬಾರು. ಈಗಲೂ ಅಷ್ಟೆ, ಅವರದೇ ಕಾರುಬಾರು. ಸಚಿವರುಗಳು ಇರುವುದು ನೆಪಮಾತ್ರಕ್ಕೆ. ಕಿತ್ತಾಟ, ಹಣ ಸುಲಿದುಕೊಳ್ಳಲು ಕುರ್ಚಿ ಭದ್ರತೆಯತ್ತ ಅವರ ಮುಖ್ಯ ಗಮನ. ಈಗ ಉಪ ಮುಖ್ಯಮಂತ್ರಿಗಳ ಸ್ಥಾನಮಾನ ಪಡೆದಿರುವ ಸಾರಿಗೆ ಸಚಿವ ದೆಹಲಿಯ ಕರ್ನಾಟಕ ಭವನದಲ್ಲಿ ಹೊಸ ಕ್ಯಾತೆ ತೆಗೆದಿದ್ದಾರೆ. ಅವರ ಸ್ಥಾನಮಾನಕ್ಕೆ ತಕ್ಕಂತೆ ಅಲ್ಲಿ ಇವರಿಗೆ ವಸತಿ ಏರ್ಪಾಟಾಗ ಬೇಕಂತೆ. ಉಪ ಮುಖ್ಯಮಂತ್ರಿ ಸ್ಥಾನ ಪಡೆದುಕೊಂಡು ದೆಹಲಿಗೆ ಹೋದಾಗ ಅಲ್ಲಿನ ಅಧಿಕಾರಿಗಳ ಮೇಲೆ ತೋರಿದ ದರ್ಪ ಇದು. ಇನ್ನೂ ಈ ಅವಧಿಯಲ್ಲಿ ಏನೇನು ಕಾದಿದೆಯೊ.

* * *

ಭಾರತದ ಆರ್ಥಿಕ ಪರಿಸ್ಥಿತಿ ಬಗ್ಗೆ ಇಲ್ಲಿನ ಜನರಿಗಿಂತ ಅಮೇರಿಕದ ಆಡಳಿತಗಾರರಿಗೇ, ಬಂಡವಾಳಶಾಹಿಗಳಿಗೇ ಹೆಚ್ಚು ಕಾಳಜಿ. ಕೆಲ ವಾರಗಳ ಹಿಂದೆ ಅಮೇರಿಕದ ವಾರಪತ್ರಿಕೆ 'ಟೈಮ್' ಮನಮೋಹನಸಿಂಗರನ್ನು ತರಾಟೆಗೆ ತೆಗೆದುಕೊಂಡಿತ್ತು. ಈ ಪ್ರಧಾನಿ ಆರ್ಥಿಕ ಸುಧಾರಣೆ ಗಳನ್ನು ಮಂದಗತಿಯಿಂದ ತರುತ್ತಿದ್ದಾರೆ ಎಂದು ಟೀಕಿಸಿತ್ತು. ಇದು ನಮ್ಮ ಮಾಧ್ಯಮಗಳಲ್ಲಿ (ಇಂಗ್ಲಿಷ್) ದೊಡ್ಡ ಸುದ್ದಿ, ಒಣಚರ್ಚೆಗೆ ಗ್ರಾಸ. ಅಮೇರಿಕದ ತುತ್ತೂರಿ ಊದುವವರಿಗೆ ನಮ್ಮಲ್ಲಿ ಕಡಿಮೆ ಏನಿಲ್ಲ. ವಿದೇಶೀ ಬಂಡವಾಳಕ್ಕೆ ಗಾಳ ಹಾಕುತ್ತಿರುವವರೆಲ್ಲರದ್ದೂ ಒಂದೇ ಬೊಬ್ಬೆ. ಕೋಟೆ ಬಾಗಿಲು ತೆರೆದು ಬಿಡಿ ಎಂಬುದೊಂದೇ ಮಂತ್ರ. ಆರ್ಥಿಕ ಸುಧಾರಣೆಗಳು, ರೀಸ್ಟ್ರಕ್ಚರಿಂಗ್, ಗ್ಲೋಬಲೈಸೇಶನ್‌ಗಳಿಂದಾಗಿರುವ ಅನಾಹುತವನ್ನೇ ನಾವು ಇಂದು ಅನುಭವಿಸುತ್ತಿರುವುದು. ನಮ್ಮ ಬಡರೈತರ ಆತ್ಮಹತ್ಯೆ ಪ್ರಕರಣಗಳೇ ಒಂದು ಅಳತೆಗೋಲು. ಮತ್ತೆ ಕಳೆದ ಹತ್ತು ವರ್ಷಗಳಲ್ಲಿ ಹೆಚ್ಚಿರುವ ಬಡತನ ರೇಖೆಯಿಂದ ಕೆಳಗಿರುವವರ ಸಂಖ್ಯೆ ಇನ್ನೊಂದು ಸೂಚಕ. ಜಾರ್ಜ್ ಬುಷ್ ಭಾರತವನ್ನು ಪರಮಾಣು ಕ್ಷೇತ್ರದಲ್ಲಿ ಸಿಕ್ಕಿಸಿದ್ದಾಯಿತು. ಈಗ ಬರಾಕ್ ಒಬಾಮಾ ತಮ್ಮ ದೇಶದ ಬಂಡವಳಿಗರಿಗೆ ಭಾರತದ ಆರ್ಥಿಕದ ಮೇಲೆ ಹಿಡಿತ ಸ್ಥಾಪಿಸಿಕೊಳ್ಳುವಂತೆ ಮಾಡಲು ಹಾತೊರೆಯುತ್ತಿದ್ದಾರೆ. ಭಾರತದ ಮನಮೋಹನ ಸಿಂಗ್ ಸರಕಾರ ವಿದೇಶಿ ಬಂಡವಾಳದ ಹರಿವಿಗೆ ಸೂಕ್ತವಾದ ವಾತಾವರಣ ಕಲ್ಪಿಸುತ್ತಿಲ್ಲ; ಹಲವು ಕ್ಷೇತ್ರಗಳಲ್ಲಿ ನಿರ್ಬಂಧ ಗಳನ್ನು ಹಾಕಿದೆ ಎಂದು ಅವರು ಪ್ರಲಾಪಿಸಿದ್ದಾರೆ. ಭಾರತದಲ್ಲಿ ಚಿಲ್ಲರೆ ವ್ಯಾಪಾರ ಕ್ಷೇತ್ರ ಮುಂತಾದುವನ್ನು ಅಮೇರಿಕಾಗೆ ಬಿಟ್ಟುಕೊಡಬೇಕೆಂದು ಉಪದೇಶ ಮಾಡಿದ್ದಾರೆ. ಈಗಲೇ ವಿದೇಶೀ ವಿನಿಮಯದ ಕೊರತೆ ಅನುಭವಿಸುತ್ತಿರುವ ಭಾರತವನ್ನು ಇನ್ನಷ್ಟು ಅಮೇರಿಕ ಅವಲಂಬಿತವನ್ನಾಗಿಸುವುದು ಅವರ ಉದ್ದೇಶ. ಬೆನ್ನೆಲುಬೇ ಗಟ್ಟಿಯಿಲ್ಲದ ಮನಮೋಹನ್ ಸಿಂಗ್ ಸರಕಾರ ಅಮೇರಿಕದ ಈ ಒತ್ತಡಗಳಿಗೆ ಮಣಿಯುವುದೆ? ಈತನಿಗೇ ಬಿಟ್ಟರೆ ಅದು ಕಷ್ಟವೇನಲ್ಲ. ಅಮೇರಿಕದಲ್ಲೇ ತರಬೇತಿ ಹೊಂದಿದ ವರಲ್ಲವೆ ಸಿಂಗ್ ಸಾಹೇಬರು. ಪರಮಾಣು ಒಪ್ಪಂದಕ್ಕೆ 'ಎಹೆಜೆ' ಒತ್ತಿದ ಈತ 'ಎಫ್‌ಡಿಐ'ಗೆ ಹೆಬ್ಬಾಗಿಲು ತೆರೆದರೆ ಆಶ್ಚರ್ಯಪಡಬೇಕಾಗಿಲ್ಲ.




**ಜುಲೈ ತಿಂಗಳ ಸಂಚಿಕೆ**

'ಸರಳವ್ಯಕ್ತಿ... ಜಿ. ಕುಮಾರಪ್ಪ' (ಪರಂಜ್ಯೋತಿಯವರ ಲೇಖನ): ಕನ್ನಡ ಎಂ.ಎ.ನಲ್ಲಿ ನನ್ನ ವಿದ್ಯಾರ್ಥಿಯಾಗಿದ್ದರು, ಕುಮಾರಪ್ಪ. ಈಚಿನ ಒಂದು ನೆನಪು: ಶ್ರೀರಾಮಕೃಷ್ಣರನ್ನು ಕುರಿತ 'ಫೇಸ್ ಆಫ್ ಸೈಲೆನ್ಸ್' ಎಂಬ ಪುಸ್ತಕ ನನಗೆ ಬೇಕಿತ್ತು. ಇಲ್ಲಿ ಅದು ಅಲಭ್ಯವಾದ್ದರಿಂದ, ಅದರ 'ನೆರಳಚ್ಚು' ಮಾಡಿಸಿ ಕಳುಹಿಸುವಂತೆ ಕುಮಾರಪ್ಪನವರಿಗೆ ಬರೆದೆ. (ಕೊಲ್ಕೊತ್ತಾದಲ್ಲಿ ಅದು ಇರಲೇಬೇಕಲ್ಲ). ಕಳುಹಿಸಿದರು; ಆದರೆ ನೆರಳಚ್ಚಿನ ವೆಚ್ಚವನ್ನು ಸ್ವೀಕರಿಸಲಿಲ್ಲ ''ಮತ್ತೇನಾದರೂ ಬೇಕಾದರೆ ತಿಳಿಸಿ'' ಎಂದು ಬರೆದರು. (ಇನ್ನೆಲ್ಲಿ ತಿಳಿಸುವುದು?) ಅವರ ನಿಧನದಿಂದ ಬಂಗಾಳಿ-ಕನ್ನಡಗಳ ನಡುವಣ ಒಂದು ಸೇತುವೆ ಮುರಿದುಬಿತ್ತು!

ಮೈಸೂರು **ಸಿ. ಪಿ. ಕೆ.**

ಜುಲೈ ೨೦೧೨ರ 'ಹೊಸತು' ಸಂಚಿಕೆಯಲ್ಲಿ ಪ್ರಕಟವಾದ ಎಚ್. ಎಸ್. ಈಶ್ವರ ಅವರು ಬರೆದಿರುವ 'ಸಾಕ್ರೆಟೀಸನ ಮೂರು ಪ್ರಶ್ನೆಗಳು' ತುಂಬ ಮಾರ್ಮಿಕವಾಗಿದೆ. ನನಗಂತೂ ಬಹಳ ಹಿಡಿಸಿತು. 'ಹೊಸತು' ಮನೆಗೆ ಬಂದ ದಿನವೂ, ಮರುದಿನವೂ ಕೆಲ ಬಾರಿ ಓದಿದೆ. ಮನೆಮಂದಿಗೆಲ್ಲ ಕೊಟ್ಟು ಓದಿಸಿದೆ. ಕತೆ ಓದಿ ಮುಗಿಸಿದ ಕೂಡಲೇ ನನ್ನ ಮಗಳು ಅಂಜನಾ ಅಂದದ್ದು–

''ಈ ನೀತಿ ಕತೆ ತುಂಬ ಚೆನ್ನಾಗಿದೆ. ಆದರೆ ಅಮ್ಮ, ಸಾಕ್ರೆಟೀಸನ ರೀತಿ, ಕೆಟ್ಟ ಕುತೂಹಲವೇ ಇಲ್ಲದ ದೊಡ್ಡಮನುಷ್ಯರು ನಮ್ಮಲ್ಲಿ ಎಷ್ಟು ಜನ ಇದ್ದಾರೆ?''

ಬೆಂಗಳೂರು **ಭಾರತೀ ಕಾಸರಗೋಡು**

ಜುಲೈ ೨೦೧೨ರ ಸಂಚಿಕೆಯು ಬಹಳ ಉಪಯುಕ್ತವಾದ ಲೇಖನಗಳಿಂದ ಕೂಡಿದೆ. ದಿನಾಂಕ ೩೦ನೇ ಸಂಜೆಯೇ ನಾನು ಸಂಚಿಕೆಯ ಮೂರು ಲೇಖನಗಳನ್ನು ಓದಿದೆ. ಅವುಗಳಲ್ಲಿ 'ಮಾರ್ಕ್ಸ್ ಹೇಳಿದ್ದು ಏಕೆ ಸರಿ?', 'ಸರಳವ್ಯಕ್ತಿ ಸ್ನೇಹಜೀವಿ, ನಿಗರ್ವಿ ಜಿ. ಕುಮಾರಪ್ಪ' ಹಾಗೂ 'ಪೋಸ್ಕೊ ಉಕ್ಕು ಕಾರ್ಖಾನೆ ಜನವಿರೋಧಿ ಯೋಜನೆ' ಎಂಬ ಲೇಖನಗಳು, ಮಾಹಿತಿ, ತಿಳುವಳಿಕೆ ಹಾಗೂ ಲಾಭಕೋರ ವಿದೇಶಿ ಕಂಪನಿಯ ವಿರುದ್ಧ ಚಳುವಳಿಗೆ ಬೌದ್ಧಿಕವಾಗಿ ಸಿದ್ಧಗೊಳಿಸುವಲ್ಲಿ ಪ್ರಮುಖಪಾತ್ರ ವಹಿಸುತ್ತವೆ. ಇನ್ನು ಸಂಪಾದಕೀಯಗಳನ್ನು ಓದದೆ ಬಿಡುವ ಹಾಗಿಲ್ಲ, ಇದೇ ರೀತಿ ಉಪಯುಕ್ತ ಲೇಖನಗಳಿಂದ 'ಹೊಸತು' ತುಂಬಿ ಬರಲಿ ಎಂದು ನಾನು ಆಶಿಸುತ್ತೇನೆ. ಕೇವಲ ಆಡಂಬರ, ಮನರಂಜನೆ ಹಾಗೂ ತಪ್ಪು ಮಾಹಿತಿಯಿಂದ ಕೂಡಿರುವ ಇಂದಿನ ನಿಯತಕಾಲಿಕ ಮಾರುಕಟ್ಟೆಯಲ್ಲಿ 'ಹೊಸತು', ಹೊಸತಾಗಿಯೇ ಉಳಿಯುತ್ತದೆ.

ಬೆಂಗಳೂರು **ಬಿ. ಎನ್. ವೇಣುಗೋಪಾಲ್**

ಜುಲೈ ೨೦೧೨ರ 'ಹೊಸತು'ನಲ್ಲಿ ಪ್ರಕಟವಾದ ಇಸ್ಮತ್ ಫಜೀರ್‌ರವರ 'ಹೀಗೊಬ್ಬ ಅಕ್ಷರಸಂತ: ಹರೇಕಳ ಹಾಜಬ್ಬ' ಲೇಖನವನ್ನು ಓದಿದೆ. ಕಣ್ಣೀರು ತಡೆಯಲಾಗಲಿಲ್ಲ, ಈ ಕಾಲದಲ್ಲೂ ಅವರಂತಹ ನಿಸ್ವಾರ್ಥ ವ್ಯಕ್ತಿ ಇದ್ದಾರೆಯೇ ಎನಿಸಿತು. ಕುತೂಹಲ ತಡೆಯಲಾರದೆ ನೇರವಾಗಿ ಹಾಜಬ್ಬರಿಗೆ ಕರೆ ಮಾಡಿದೆ.




ಸುಮಾರು ಹೊತ್ತು ಮಾತನಾಡಿದ ಹಾಜಬ್ಬರು, ''ಈ ಸಾಧನೆಯಲ್ಲಿ ನನ್ನದೇನೂ ಇಲ್ಲ ಎಲ್ಲಾ ಭಗವಂತನ ಕೃಪೆ'' ಎಂದರು. ನಿಜವಾಗಿಯೂ ಹಾಜಬ್ಬರು ರಿಯಲ್ ಹೀರೋನೇ ಸರಿ.

ಅರಸೀಕೆರೆ **ಖಲಂದರ್ ಅಝೀಝ್ ಜಾವಗಲ್**

ಅಕ್ಷರ ಸಂತ ಹರೇಕಳದ ಹಾಜಬ್ಬರ ಬಗ್ಗೆ ಪರಿಚಯ ಲೇಖನ ಬರೆದ ಇಸ್ಮತ್ ಫಜೀರ್ ಹಾಗೂ ಅಂಥ ಲೇಖನ ಪ್ರಕಟಿಸಿದ ನಿಮಗೂ ಕೃತಜ್ಞತೆಗಳು.

ಸಾವಿಲ್ಲದ ಮನೆಯಲ್ಲಿ ಸಾಸಿವೆ ತಂದರು ಎಂಬಂತೆ ಇಂಥ ಕಾಲದಲ್ಲೂ ಹಾಜಬ್ಬರಂಥ ವ್ಯಕ್ತಿಗಳಿರುವುದು ಮತ್ತು ಅಂಥವರನ್ನು ಗುರ್ತಿಸುವುದು ಎಷ್ಟೋ ಸಮಾಧಾನದ ವಿಷಯ. ''ಕಿತ್ತಳೆಹಣ್ಣು ಬೆಲೆ ಎಷ್ಟು?'' ಎಂದ ವಿದೇಶಿಯರೊಂದಿಗೆ ವ್ಯವಹರಿಸಲಾರದ ಮುಜುಗರವೇ ಅವರನ್ನು ಬಡಿದೆಬ್ಬಿಸಿ ಊರಿನಲ್ಲಿ ಒಂದು ಶಾಲೆ ಮಾಡಲು ಪ್ರೇರೇಪಿಸಿದ್ದು; ಆ ದಾರಿಯಲ್ಲಿ ಅವರು ಪಟ್ಟಪಾಡು, ಪಡೆದ ಅನುಭವದ ಕಥನವನ್ನು ಓದಿದ ಯಾರಿಗಾದರೂ ಅವರ ಬಗ್ಗೆ ಅಭಿಮಾನ ಮೂಡದಿರದು. ಇಂಥವರಿಂದಲೇ ಈ ನೆಲವನ್ನು ಕರ್ಮಭೂಮಿ ಎಂದಿರುವುದು. ಕಾಯಕವೇ ಕೈಲಾಸ ಎಂಬ ಮಾತಿಗೆ ಸಾಕಾರವಾಗಿರುವ ಹಾಜಬ್ಬರು ಒಬ್ಬ ಸರಳ ಜೀವಿ; ಉನ್ನತ ಚಿಂತಕ. ಇವರ ಬದುಕೇ ನಾಡಿಗೊಂದು ಪಾಠ. 'ಹೊಸತು' ಪತ್ರಿಕೆ ಸಾದರಪಡಿಸುವಂತೆ ಹಾಜಬ್ಬರಂಥವರಿಂದ ನೆಮ್ಮದಿಯ ನಾಳೆ ನಮ್ಮದಾಗಬಹುದು ಎಂದು ಆಶಿಸಬಹುದು.

ಬೆಂಗಳೂರು **ಪ್ರೊ|| ಶಿವರಾಮಯ್ಯ**

ಬಿ. ವಿ. ಕಕ್ಕಿಲ್ಲಾಯರವರ ಆಕರ್ಷಕ ಮುಖಪುಟದೊಂದಿಗೆ ಬಂದ ಜುಲೈ ೨೦೧೨ 'ಹೊಸತು' ಸಂಚಿಕೆ ಓದುಗರ ಮನಸೂರೆಗೊಂಡಿದೆ. ಹಿರಿಯ ಕಮ್ಯುನಿಸ್ಟ್ ನಾಯಕ ಕಕ್ಕಿಲ್ಲಾಯರವರ ಬಗ್ಗೆ ಬರೆದ ಲೇಖನ ಸಮಯೋಚಿತ ಮಾಹಿತಿಯಿಂದ ಕೂಡಿದ್ದವು. ಎಂ. ಡಿ. ಗೋಗೇರಿಯವರು ಬರೆದ 'ಮಕ್ಕಳ ಸಾಹಿತ್ಯದಲ್ಲಿ ಶಾಂತಿ ಮತ್ತು ಸೌಹಾರ್ದತೆ' ಲೇಖನ ಓದಿದೆ. ಈಗ ಮಕ್ಕಳ ಸಾಹಿತ್ಯದ ಬಗ್ಗೆ ಬಹಳಷ್ಟು ಗಮನಹರಿಸಬೇಕಾಗಿದೆ. ಮಕ್ಕಳ ಬೇಕುಬೇಡಗಳ ಬಗ್ಗೆ ಚಿಂತನೆ ನಡೆಸಬೇಕು. ಇಂದಿನ ಪ್ರಭಾವಿ ಸಂಪರ್ಕ ಮಾಧ್ಯಮಗಳ ಭರಾಟೆಯಲ್ಲಿ ಮಕ್ಕಳು ದಾರಿ ತಪ್ಪುತ್ತಿದ್ದಾರೆಯೇ ಎಂಬ ಸಂಶಯ ಬರದೇ ಇರದು. ಮಕ್ಕಳ ಭಾಷೆಯಲ್ಲಿ, ಮಕ್ಕಳಿಗೆ ಅರ್ಥವಾಗುವ ಸಾಹಿತ್ಯ ಹೆಚ್ಚು ಹರಿದುಬರಲಿ.

ಮೈಸೂರು **ಕಾಳೀಹುಂಡಿ ಕೆ. ವಿ. ಶಿವಕುಮಾರ್**

'ಸ್ವಾತಂತ್ರ್ಯ ಹೋರಾಟಗಾರ ಸಿ.ಪಿ.ಐ. ನೇತಾರ ಬಿ. ವಿ. ಕಕ್ಕಿಲ್ಲಾಯ ಅಸ್ತಂಗತ' ಎಂಬ ಜೂನ್ ನಾಲ್ಕರ ಕಾಸರಗೋಡಿನಿಂದ ಪ್ರಕಟವಾಗುವ 'ಕಾರವಲ್' ದಿನಪತ್ರಿಕೆಯ ಕನ್ನಡ ಹಾಗೂ ಮಲಯಾಳಂನಲ್ಲಿ ದಪ್ಪಕ್ಷರದ ಮೊದಲ ಪುಟದ ಅಕ್ಷರ ಬರಹವನ್ನೋದಿ ಕಾಸರಗೋಡಿನಾದ್ಯಂತ ಪಕ್ಷ - ಪಂಗಡಗಳ ಪೊರೆ ಕಳಚಿ ಶೋಕತಪ್ತರಾದುದು ಅಪ್ಪಟ ಸತ್ಯ. ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸ್ಥಾಪನಾ ಪ್ರಚೋದಕರೂ ಕರ್ನಾಟಕ ಏಕೀಕರಣ ಸಂಘಟನಾ ಸಕ್ರಿಯ ಕಾರ್ಯಕರ್ತ, ಲೇಖಕ, ಬೋಧಕ, ಪಂಡಿತರೆಂದೆಲ್ಲಾ ಜನರೊಂದಿಗೆ ಹೊಂದಿಕೊಂಡು ಗಮನ ಸೆಳೆಯುತ್ತಿದ್ದ ಬಿ.ವಿ.ಕೆ. ಅವರ ನಿಧನದ ಸುದ್ದಿಯನ್ನು ಆರಂಭದಲ್ಲಿ ಯಾರೂ ನಂಬಲೇ ಇಲ್ಲ. 'ಹೊಸತು'ವಿನ ಮೇ ಸಂಚಿಕೆಯಲ್ಲಿ ಅವರು ಭಾಗವಹಿಸಿದ ಕಾರ್ಯಕ್ರಮದ ಸಣ್ಣ ವರದಿಯೊಂದು ಭಾವಚಿತ್ರ ಸಮೇತ ಪ್ರಕಟವಾಗಿದ್ದುದು ನೆನವರಿಕೆಗೊಂಡು ಕಣ್ಣಾಲಿಗಳು ಹನಿಗೂಡಿದವು. ಸದಾ ಖಾದೀಧಾರಿಯಾಗಿ ಸತ್ಯ ಸನ್ನಡತೆಯ ಮುನ್ನಡೆಯಲ್ಲಿದ್ದ ಕಕ್ಕಿಲ್ಲಾಯರವರಿಗೆ ಸರಿಸಾಟಿ ಎನಿಸಿದ ದೇಶಭಕ್ತ ಧುರೀಣ ಸಮಕಾಲೀನ ಇನ್ನೊಬ್ಬರಿಲ್ಲ ಎಂಬುದು ಅತಿಯಾದ ಮಾತಲ್ಲ. ದಿವಂಗತರಿಗೆ ಕಾಸರಗೋಡಿನ ಅಭಿಮಾನಿ ಜನತೆಯ ಪರವಾಗಿ ಮನತುಂಬಿದ ಶ್ರದ್ಧಾಂಜಲಿಗಳು.

'ರಾಜಕೀಯ ಇಸ್ಲಾಂನ ಧೋರಣೆ'ಯೆಂಬ ಜಿ. ರಾಮಕೃಷ್ಣರ ವಿಶೇಷ ಸಚಿತ್ರ ಬರಹ ಎರಡಾವರ್ತಿ ಓದಿಸಿಕೊಂಡಿತು.

## ಬಸವರಾಜ ಕಟ್ಟೀಮನಿ ಪತ್ರಗಳ ಸಂಗ್ರಹ

ಕರ್ನಾಟಕ ಸರಕಾರವು ಬೆಳಗಾವಿಯಲ್ಲಿ ಬಸವರಾಜ ಕಟ್ಟೀಮನಿ ಪ್ರತಿಷ್ಠಾನವನ್ನು ಆರಂಭಿಸಿದೆ. ಕನ್ನಡದ ಕ್ರಾಂತಿಕಾರಿ ಕಾದಂಬರಿಕಾರ, ಕಥೆಗಾರ ಹಾಗೂ ಪತ್ರಿಕೋದ್ಯಮಿಯಾಗಿದ್ದ ಬಸವರಾಜ ಕಟ್ಟೀಮನಿಯವರ ಬದುಕು-ಬರಹಗಳ ಪುನರವಲೋಕನ ಮಾಡುವುದು, ಅವರ ಕೃತಿಗಳನ್ನು ಮತ್ತೆ ಪ್ರಕಟಿಸುವುದು, ಹೊಸ ತಲೆಮಾರಿನವರಿಗೆ ಅವರನ್ನು ಪರಿಚಯಿಸುವುದು ಹಾಗೂ ಅವರ ಹೆಸರಿನಲ್ಲಿ ಕನ್ನಡ ಸಾಹಿತ್ಯ, ಸಂಸ್ಕೃತಿ, ನಾಡು-ನುಡಿಗಳಿಗೆ ಸಂಬಂಧಿಸಿದಂತೆ ವಿಚಾರ ಸಂಕಿರಣಗಳನ್ನು ಏರ್ಪಡಿಸಿ ಜಾಗೃತಿ ಮೂಡಿಸುವುದು ಪ್ರತಿಷ್ಠಾನದ ಮುಖ್ಯ ಉದ್ದೇಶ.

ಪ್ರಸ್ತುತ, ಈ ಪ್ರತಿಷ್ಠಾನದಿಂದ ಕಟ್ಟೀಮನಿಯವರು ಬದುಕಿದ್ದಾಗ ನಾಡಿನ ಹಲವಾರು ಬರಹಗಾರರಿಗೆ, ವಿದ್ವಾಂಸರಿಗೆ, ರಾಜಕಾರಣಿಗಳಿಗೆ, ಪತ್ರಿಕೆಗಳಿಗೆ ಬರೆದ ಪತ್ರಗಳನ್ನು ಒಂದು ಗ್ರಂಥದ ರೂಪದಲ್ಲಿ ತರುವ ಯೋಜನೆಯನ್ನು ಹಾಕಿಕೊಳ್ಳಲಾಗಿದೆ. ಹೀಗೆ ಯಾರ ಹತ್ತಿರವಾದರೂ ಅವರು ಬರೆದ ಪತ್ರಗಳಿದ್ದರೆ ಅವುಗಳ ನೆರಳಚ್ಚಿನ (ಝೆರಾಕ್ಸ್) ಪ್ರತಿಗಳನ್ನು ಕಳಿಸಿಕೊಡಲು ವಿನಂತಿಸಲಾಗಿದೆ. ಪತ್ರ ಕಳಿಸಿದವರ ಹೆಸರುಗಳನ್ನು ಆಯಾ ಪತ್ರಗಳ ಜೊತೆಗೆ ಪ್ರಕಟಿಸಲಾಗುವುದು. ಅದಕ್ಕಾಗಿ ಕಟ್ಟೀಮನಿಯವರ ಪತ್ರಗಳಿದ್ದವರು ಅವುಗಳ ಪ್ರತಿಗಳನ್ನು ಕೂಡಲೇ ಈ ಕೆಳಗಿನ ವಿಳಾಸಕ್ಕೆ ಕಳಿಸಿಕೊಡಲು ವಿನಂತಿ.

**ಶಿವಕುಮಾರ ಕಟ್ಟೀಮನಿ**
ಬಸವನಗರ, ಘಟಪ್ರಭಾ - ೫೯೧ ೩೦೬, ಗೋಕಾಕ ತಾಲೂಕು, ಬೆಳಗಾವಿ ಜಿಲ್ಲೆ

ದತ್ತಗುರು ಕಂಠಿಯವರ 'ತೋಟಕ್ಕೆ ಹೋಗಿ ಬರ್ತೇನೆ ಅಮ್ಮ' ಬರಹದ ಹಿಡಿತದಿಂದ ತಪ್ಪಿಸಿ ಕೊಳ್ಳಲಾಗದೆ ಮುಗ್ಧ ಮನಸ್ಸಿನ ಒಳಗಡೆಯ ರಹಸ್ಯ ಸ್ಫೋಟನೆಗೆ ಕಾರಣವೆನಿಸಿ ಖುಷಿಯಾದರೆ - ಡಾ|| ರಾಮಲಿಂಗಪ್ಪನವರ ನಾಟಕ ದೃಶ್ಯಗಳು ತಪ್ಪಿಸಿ ಕೊಳ್ಳದೆ ಗಂಧರ್ವಕನ್ಯೆಯ ಮುಖದರ್ಶನಕ್ಕೆಡೆ ನೀಡಿದವು. ಇದೇ ಸಂಚಿಕೆಯಲ್ಲಿ ಬಿ. ವಿ. ಕಕ್ಕಿಲ್ಲಾಯರ ಬರಹವಾಗಿ ಕಾಣಿಸಿಕೊಂಡು ಮರಣದಲ್ಲೂ ವಿಶೇಷತೆ ತೋರಿಬಂದುದು - ಇಚ್ಛಾಮರಣಿ ಎನ್ನಿಸಿದ ಪೌರಾಣಿಕದ ಭೀಷ್ಮಾಚಾರ್ಯರ ನೆನವರಿಕೆಗೂ ಒತ್ತುನೀಡಿತು.

ಒಟ್ಟಿನಲ್ಲಿ ಸಂಚಿಕೆ ವೈಶಿಷ್ಟ್ಯಮಯವೇ ಹೌದೆನ್ನಿಸಿದುದು ನಿಜ.

ಸಂಸತ್ತಿಗೆ ಅರವತ್ತು - ಕುಸಿಯುತ್ತಿರುವ ಮೌಲ್ಯ ಎಂದು ನೇರವಾಗಿ ಎತ್ತಿಕೊಟ್ಟು ಪ್ರಜಾಪ್ರಭುತ್ವ ಆಡಳಿತದ ಅಖಾಡದೊಳಗಿಳಿದು ತನ್ನ ಪ್ರಾಮಾಣಿಕ ಬರಹದ ಮೊದಲ ಅಧ್ಯಾಯದಲ್ಲಿ ಶ್ರುತಪಡಿಸಿದ ಸಹಸಂಪಾದಕ ಸಿ. ಆರ್. ಕೃಷ್ಣರಾವ್ ತನ್ನೆಡೆಗೆ ಓದುಗರನ್ನು ತಾನಾಗಿ ಸೆಳೆದುಕೊಂಡಿದ್ದಾರೆ. ಒಳಿತು ಕೆಡುಕುಗಳೆರಡನ್ನು ವಿಶದವಾಗಿ ವಿವರಿಸಿ ನಿಖರವಾದ ಇವರ ವಾಗ್ವೈಖರಿ ಓದುಗರಿಗೂ ಸ್ಪಷ್ಟತೆಯ ಮನೋಭಾವವುಂಟು ಮಾಡುತ್ತದೆ.

ಪಂದ್ಯಾವಳಿ, ಮಾಧ್ಯಮಗಳ ಜಟಾಪಟಿಯೇ ಮುಂತಾದ ಇನ್ನಿತರ ಪ್ರಮುಖ ಸಮಸ್ಯೆಗಳೆಡೆಗೆ ಮುಖ ತಿರುಗಿಸಿ ಓದುಗರಿಗೆ ವಿಷಯಾಸಕ್ತಿ ಬೆಳೆಸಲು ಪೂರಕ ವಾತಾವರಣವುಂಟುಮಾಡುತ್ತದೆ. ಅಭಿನಂದನೆಗಳು.

ಕಾಸರಗೋಡು **ಕೀರಿಕ್ಕಾಡು ವನಮಾಲ ಕೇಶವ ಭಟ್ಟ**

**ಅನಿಸಿಕೆ ಪತ್ರ**

ಪತ್ರಿಕೆಯಲ್ಲಿನ ರಾಜಕೀಯ ವಿಶ್ಲೇಷಣೆ, ರಾಜಕೀಯ ಅಧಿಕಾರಸ್ಥರು ಈ ದೇಶದ ನೆಲ, ಜಲ, ಗಣಿ ಮತ್ತಿತರ ಸಂಪತ್ತನ್ನು ದೋಚುವ ವಿವರ; ಅಧಿಕಾರಿಗಳು ಮತ್ತು ರಾಜಕಾರಣಿಗಳು ಅನೈತಿಕ ಕೂಡಾವಳಿ ಮಾಡಿಕೊಂಡು ಮಿತಿಮೀರಿ ಎಸಗಿರುವ ಭ್ರಷ್ಟಾಚಾರ, ಲಂಚಗುಳಿತನ, ಸ್ವಜನ ಪಕ್ಷಪಾತದಿಂದಾಗಿ ದೇಶವನ್ನು ದಿವಾಳಿ ಮಾಡಿ ಜನಸಾಮಾನ್ಯರ ಬದುಕು ನರಕವಾಗಿಸುತ್ತಿರುವ ಸಂಗತಿಗಳು ಕಣ್ಣಿಗೆ ರಾಚುವಂತಿರುತ್ತವೆ.

ಜುಲೈ ೧೨ರ ಮಾನ್ಯ ಸಿದ್ದನಗೌಡರ ಸಂಪಾದಕೀಯ ''ಜಿಮ್, ಅಭಿವೃದ್ಧಿ, ಜೈಲ್‌ಭರೋಸ್ಪರ್ಧೆ ಇತ್ಯಾದಿ'' ಯಲ್ಲಿ ಪ್ರಸ್ತಾಪವಾಗಿರುವ ಮಾಹಿತಿಗಳಂತೂ ಪ್ರಜ್ಞಾವಂತ ನಾಗರಿಕರ ಮನಕಲಕುವಂತಿದ್ದು ಚಿಂತನೆಗೆ ಹಚ್ಚಿ ವ್ಯವಸ್ಥೆ ವಿರುದ್ಧ ಹೋರಾಟ ಪ್ರಾರಂಭಿಸುವ ಅನಿವಾರ್ಯತೆಯನ್ನು ಸಾರುತ್ತಿದೆ.

ಕೈಗಾರಿಕೋದ್ಯಮಕ್ಕೆ ಒಂದು ಸ್ಪಷ್ಟವಾದ ವ್ಯವಹಾರ ನೀತಿ ಇರುತ್ತದೆ. ವ್ಯವಸಾಯಕ್ಕೆ ಯಾವ ನೀತಿ ನಿಯಮವೂ ಪ್ರಭುತ್ವದಲ್ಲಿ ಇರುವುದಿಲ್ಲ. ರೈತರ ಗೋಳು ಕೇಳುವವರೇ ಇಲ್ಲ, ಕೈಗಾರಿಕೋದ್ಯಮದಲ್ಲಿ ತೊಡಗಿಸುವ ಎಲ್ಲಾ ಆಗುಹೋಗುಗಳನ್ನು ನೋಡಿ ಕೊಂಡು ಸಾಲ ಬಡ್ಡಿ ತೀರಿಸುತ್ತಾರೆ ಅಥವಾ ತೀರಿಸು ವುದಿಲ್ಲ, ಮೇಲಾಗಿ ಸಬ್ಸಿಡಿ ಜೊತೆಗೆ ಕೆಲಕಾಲ ತೆರಿಗೆ ವಿನಾಯ್ತಿ ಕೂಡ ಇರುತ್ತದೆ. ಲೇಖನದಲ್ಲಿ ತಿಳಿಸಿರುವಂತೆ ಕೈಗಾರಿಕೋದ್ಯಮಿಗಳು ಸಾರ್ವಜನಿಕ ವಲಯದ ಬ್ಯಾಂಕ್‌ಗಳಿಗೆ ಕಟ್ಟಬೇಕಾದ ಸಾಲ ೭೪,೬೧೬ ಕೋಟಿ ರೂಪಾಯಿ. ಬಡ್ಡಿ ಸೇರಿಸಿ ಎರಡು ಲಕ್ಷ ಕೋಟಿಗಳಾಗುತ್ತದೆಯೆಂಬ ಸಂಗತಿ ಆತಂಕಪಡ ಬೇಕಾದದ್ದೇ. ಇವರು ಸಾಲ ಮರುಪಾವತಿ ಮಾಡದೆ ಸಾರ್ವಜನಿಕ ಸಂಪತ್ತನ್ನು ಅಕ್ರಮವಾಗಿ ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ.

ಸ್ವಾರ್ಥ ಮನೋಭಾವದ, ಎಡಬಿಡಂಗಿ ದೇಶದ್ರೋಹಿ ರಾಜಕಾರಣಿಗಳ, ರಾಷ್ಟ್ರವಿರೋಧಿ ಪ್ರಗತಿ ಕಂಟಕ ಭ್ರಷ್ಟ ಅಧಿಕಾರಿ ನೌಕರಶಾಹಿಗಳ ಬಗ್ಗೆ ವಾಸ್ತವ ಚಿತ್ರಣ ನೀಡುವ ಲೇಖನಗಳಿಂದಾಗಿ ಹಾಗೂ ದೇಶ ಕಟ್ಟುವ ಮತ್ತು ಪ್ರಗತಿ ಪಥದಲ್ಲಿ ಕೊಂಡೊಯ್ಯುವ ಮಾರ್ಗದರ್ಶಕ ಬರಹಗಳಿಂದಾಗಿ, ವೈಚಾರಿಕಾ ಚಿಂತನೆಗಳ ಲೇಖನಗಳಿಂದಾಗಿ, ಸದಭಿರುಚಿಯ ಕಥೆ, ಕವನ, ವ್ಯಕ್ತಿ ಪರಿಚಯಗಳಿಂದಾಗಿ ಸರಿದಾರಿ ಯಲ್ಲಿ ನಡೆಸುವಂತಿದ್ದು ಪತ್ರಿಕೆಯು ಎಲ್ಲರಿಗೂ ಮೆಚ್ಚುಗೆಯಾಗುವಂತಿದೆ.

ಎಡಪಂಥೀಯ ಧೋರಣೆಗಳೊಂದಿಗೆ ಪ್ರಜಾ ಸತ್ತಾತ್ಮಕ ನೆಲೆಗಟ್ಟಿನಲ್ಲಿ ದಾಪುಗಾಲು ಹಾಕುತ್ತಿರುವ ಪತ್ರಿಕೆಗೆ, ಲೇಖಕರಿಗೆ ಧನ್ಯವಾದಗಳು.

ದಾವಣಗೆರೆ ***ಪಿ. ಆಂಜನಪ್ಪ ಗುಂಡಗತ್ತಿ***

**ಬೆಳವಣಿಗೆ**



ಅಂಬೆಗಾಲು
ದಾಪುಗಾಲು
ಕ್ಷಿಪ್ರ ನಡಿಗೆ
ಧಾವಂತ ಓಟ
ಸಾಗುತ್ತಿದ್ದವನ
ನೆರಳೇ
ತ್ರಿವಿಕ್ರಮನಾದಾಗ
ಅವನಾದ ವಾಮನ

**ಮ. ಶ್ರೀ. ಮುರಳಿ ಕೃಷ್ಣ**
ಬೆಂಗಳೂರು - ೫೬೦ ೦೦೧




# ವಿಜ್ಞಾನ ಇತಿಹಾಸದ ಕೊಂಡಿ : ರಘುನಾಥ ಚಾರಿ, ಬದುಕು-ಬರಹ




| | |
|---|---|
| ಪುಸ್ತಕದ ಹೆಸರು | : **ಚಿಂತಾಮಣಿ ರಘುನಾಥ ಚಾರಿ ಅಂಡ್ ಕಾಂಟೆಂಪೊರರಿ ಇಂಡಿಯನ್ ಆಸ್ಟ್ರಾನಮಿ** |
| ಲೇಖಕರು | : **ಡಾ|| ಬಿ. ಎಸ್. ಶೈಲಜಾ** |
| ಪ್ರಕಾಶಕರು : | : ಬೆಂಗಳೂರು ಅಸೋಸಿಯೇಷನ್ ಫಾರ್ ಸೈನ್ಸ್ ಎಜುಕೇಶನ್ ಸಂಸ್ಥೆಯ ಸಹಯೋಗದೊಂದಿಗೆ ನವಕರ್ನಾಟಕ ಪ್ರಕಾಶನ (ಬೆಂಗಳೂರು) |
| ಪುಟಗಳು | : ೯೬ |
| ಬೆಲೆ | : ರೂ. ೭೫/- |

ಬೆಂಗಳೂರು ಅಸೋಸಿಯೇಷನ್ ಫಾರ್ ಸೈನ್ಸ್ ಎಜುಕೇಶನ್ ಸಂಸ್ಥೆಯ ಸಹಯೋಗದೊಂದಿಗೆ ನವಕರ್ನಾಟಕ ಪ್ರಕಾಶನ (ಬೆಂಗಳೂರು), ಶುಕ್ರ ಸಂಕ್ರಮಕ್ಕೆ (೨೦೧೨) ಕೆಲವು ದಿನಗಳ ಮೊದಲು ಓದುಗರಿಗೆ ಒಂದು ಕೃತಿಯನ್ನು ಅರ್ಪಿಸಿತು. ಅದನ್ನು ಬರೆದವರು ಡಾ|| ಬಿ. ಎಸ್. ಶೈಲಜಾ. ಇಂಗ್ಲಿಷಿನಲ್ಲಿರುವ ಆ ಪುಸ್ತಕ - 'ಚಿಂತಾಮಣಿ ರಘುನಾಥ ಚಾರಿ ಅಂಡ್ ಕಾಂಟೆಂಪೊರರಿ ಇಂಡಿಯನ್ ಆಸ್ಟ್ರಾನಮಿ'. ಕನ್ನಡದಲ್ಲಿ ಅದನ್ನು 'ಚಿಂತಾಮಣಿ ರಘುನಾಥ ಚಾರಿ ಮತ್ತು ಸಮಕಾಲೀನ ಭಾರತೀಯ ಖಗೋಲ ವಿಜ್ಞಾನ' ಎಂದು ಕರೆಯಬಹುದು. ನಮ್ಮ ದೇಶದ ವಿಜ್ಞಾನ ಇತಿಹಾಸದ ಸಮಗ್ರ ನೋಟವನ್ನು ಪಡೆಯುವಲ್ಲಿ ಇದು ಇನ್ನೊಂದು ಕೊಂಡಿಯಾಗಬಹುದು. ಆದ್ದರಿಂದಲೇ ಈ ಕೃತಿಯ ನಿಲುವು-ಲಕ್ಷಣಗಳು ನಮಗೆ ಮುಖ್ಯವಾಗುತ್ತವೆ.

ಭಾರತದ ವಿಜ್ಞಾನ ಇತಿಹಾಸದಲ್ಲಿ 'ಖಾಲಿ' ಅಥವಾ 'ಘಟನಾವಿಹೀನ' ಎಂದು ಹಿಂದೆ ಭಾವಿಸಿಕೊಂಡಿದ್ದ ಅವಧಿಗಳೆಲ್ಲವೂ ಹಾಗಿರಲಿಲ್ಲ. ಹಿಂದೆ ಕಾಣಿಸಿಕೊಳ್ಳದ ದಾಖಲೆಗಳು ಪ್ರಕಟವಾದಾಗ ಅವು ಹೊಸ ಸುಳಿವುಗಳನ್ನು ನೀಡಿದುವು. ವಿಜ್ಞಾನ ಇತಿಹಾಸದ ನಡೆಯ ಹೊಸನೋಟವನ್ನು ಒದಗಿಸಿದುವು. ಆದ್ದರಿಂದಲೇ ಅಂಥ ದಾಖಲೆಗಳೂ ಮಾಹಿತಿಗಳೂ ಹೊಸ ಕೊಂಡಿಗಳಾದುವು. ೧೯ನೇ ಶತಮಾನದಲ್ಲಿ 'ಆರ್ಯಭಟೀಯ' ಕೃತಿಯ ಒಂದು ಹಸ್ತಪ್ರತಿ ದೊರಕಿದಾಗ ಹದಿಮೂರು ಶತಮಾನಗಳ ಹಿಂದಿನ ಭಾರತೀಯ ವಿಜ್ಞಾನದ ಸನ್ನಿವೇಶ ಚಿತ್ರಣ ಹೆಚ್ಚು ಸ್ಫುಟವಾಯಿತು. ೧೯ನೇ ಶತಮಾನದಲ್ಲಿ ಈಸ್ಟ್ ಇಂಡಿಯಾ ಕಂಪೆನಿಯ ಚಾರ್ಲ್ಸ್ ವಿಶ್ ೧೪-೧೬ ಶತಮಾನಗಳ ಕೇರಳ ಖಗೋಲಜ್ಞರ ಕೊಡುಗೆಯನ್ನು ಉಲ್ಲೇಖಿಸಿದರೂ ಅದರ ಅಧ್ಯಯನ ಮತ್ತು ತಿಳಿವಳಿಕೆ ಪ್ರಚಾರವಾದದ್ದು ೨೦ನೇ ಶತಮಾನದಲ್ಲಿ. ವಿಳಂಬವಾಗಿಯಾದರೂ ಈ ಕೊಂಡಿ ಕಾಣಿಸಿಕೊಂಡಾಗ ಸೂರ್ಯ ಕೇಂದ್ರ ಸಿದ್ಧಾಂತದ ಪ್ರತಿಪಾದನೆಯಲ್ಲಿ ಭಾರತೀಯ ಖಗೋಲಜ್ಞರ ಪಾತ್ರ ಸ್ಪಷ್ಟವಾಯಿತು; ನೀಲಕಂಠ ಸೋಮಯಾಜಿ ಅವರ (೧೫ನೇ ಶತಮಾನ) ಹೆಸರು ಮಕ್ಕಳ ಪಠ್ಯಪುಸ್ತಕದಲ್ಲೂ ಕಾಣಿಸಿಕೊಂಡಿತು.

ಈ ದೃಷ್ಟಿಯಿಂದ ಚಿಂತಾಮಣಿ ರಘುನಾಥ ಚಾರಿ (೧೮೨೮-೧೮೮೦) ಅವರ ಕಾರ್ಯಚಟುವಟಿಕೆ ಮತ್ತು ಬರಹಗಳ ಬಗೆಗೆ ಡಾ|| ಶೈಲಜಾ ಅವರು ಬರೆದ ಕೃತಿ ಸ್ವಾತಂತ್ರ್ಯಪೂರ್ವ ಭಾರತದ ಒಂದು ನಿಶ್ಚಿತ ಕಾಲಘಟ್ಟದಲ್ಲಿನ ಖಗೋಲ ವಿಜ್ಞಾನ ಕ್ಷೇತ್ರದ ಮೇಲೆ ಆಂಶಿಕ ಬೆಳಕನ್ನಾದರೂ ಚೆಲ್ಲುತ್ತದೆ. ಪಂಚಾಂಗ ಕರ್ತರ - ಪ್ರಾಯಶಃ ಸಾಂಪ್ರದಾಯಿಕ ಕುಟುಂಬದಲ್ಲಿ ಹುಟ್ಟಿದ ಚಾರಿಯವರು ೧೯ನೇ ವಯಸ್ಸಿನಲ್ಲಿ ಮದ್ರಾಸು ವೀಕ್ಷಣಾಲಯವನ್ನು ಸೇರಿ ಪಾಶ್ಚಿಮಾತ್ಯ ವಿಜ್ಞಾನಿಗಳ ಆಧುನಿಕ ವಿಚಾರಗಳಿಗೆ ತಮ್ಮನ್ನು ತೆರೆದುಕೊಂಡರು. ಆಗ ರೂಪುಗೊಂಡ ಮಾನಸಿಕ ಪ್ರವೃತ್ತಿಯ ಮಾದರಿಯೊಂದು ನಮಗೆ ಈ ಬರಹದಲ್ಲಿ ದೊರೆಯುತ್ತದೆ. ಸೂರ್ಯಗ್ರಹಣ, ಶುಕ್ರ ಸಂಕ್ರಮದಂಥ ವಿಶೇಷ ಸಂದರ್ಭಗಳ ವೀಕ್ಷಣೆಗೆ ಸಾಮಾನ್ಯಜನರೂ ಆಸಕ್ತಿ ಪಡುವಂತೆ ಮಾಡಬೇಕೆಂಬ ಚಾರಿಯವರ ವಿಜ್ಞಾನ ಸಂವಹನದ ತುಡಿತ ವೇದ್ಯವಾಗುತ್ತದೆ. ಸ್ವತಂತ್ರ ವೀಕ್ಷಣೆಗಳನ್ನು ನಡೆಸಲು ಸಮರ್ಥರಾಗಿದ್ದ ಚಾರಿಯವರು ವಿನಯಶೀಲರಾಗಿದ್ದೂ ಭಾರತದ ಸಮಕಾಲೀನ ಖಗೋಲಜ್ಞರ ಲೆಕ್ಕಾಚಾರಗಳು ನಿಯಮ ಪ್ರಕಾರ ನಡೆಯುವ ಖಗೋಲ ವಿದ್ಯಮಾನಗಳ ವೇಳೆಗಳನ್ನು ಕರಾರುವಾಕ್ಕಾಗಿ ಮುನ್ಸೂಚಿಸದಿರುವುದನ್ನೂ ಹಾಗೆ ಮುನ್ಸೂಚಿಸಲು ಕಾಲಕಾಲಕ್ಕೆ ಲೆಕ್ಕಾಚಾರಗಳನ್ನು ನವೀಕರಿಸಬೇಕಾದ ಅಗತ್ಯವನ್ನೂ ಮರೆಮಾಚದೆ ಹೇಳಿದ್ದರು. ಸ್ಥಳೀಯ ಖಗೋಲಜ್ಞರನ್ನು ಈ ದಿಸೆಗೆ ಸೆಳೆಯಲು ಗ್ರಹಣ, ಆಚ್ಛಾದನೆಗಳ ವಿವರಗಳನ್ನೂ ಅವರು ಒದಗಿಸಿದರು.

ಡಾ|| ಶೈಲಜಾ ಅವರು ಈ ಬರವಣಿಗೆಯ ಸಂದರ್ಭದಲ್ಲಿ ಹಲವು ಪರಿಣತರೊಡನೆ ಚರ್ಚಿಸಿದ್ದಾರೆ, ಶುಕ್ರ ಸಂಕ್ರಮದ ಬಗ್ಗೆ ಚಾರಿಯವರು ಬರೆದ ಕನ್ನಡ ಪಠ್ಯದ ಇಂಗ್ಲಿಷ್ ಅನುವಾದವನ್ನು ನೀಡಿದ್ದಾರೆ, ಇದಕ್ಕಾಗಿ ತಾಳ್ಮೆಯಿಂದ ಸಂಪಾದನೆ ಮತ್ತು ಸಂಶೋಧನೆ ನಡೆಸಿದ್ದಾರೆ. ಇವುಗಳಿಂದಾಗಿ ಚಾರಿಯವರ ಕನ್ನಡ ಪಠ್ಯದ ಓದು ಹೆಚ್ಚು ಸುಗಮವಾಗಿದೆ. ಚಾರಿಯವರು ವಿವರಿಸಿದ ಲಂಬನ ನಿರ್ಧಾರದ (ಎಲ್ಲಿಮೇಶನ್ ಆಫ್ ದಿ ಪ್ಯಾರಲಕ್ಸ್) ವಿಧಾನವನ್ನು ಓದುಗರಿಗೆ ಇನ್ನೂ ಹೆಚ್ಚಿನ ಅನುಕೂಲವಾಗುವಂತೆ ಲೇಖಕಿಯವರು ನಿರೂಪಿಸಿದ್ದಾರೆ. ಇಂಗ್ಲಿಷ್ ಅನುವಾದದಲ್ಲಿ ನೀಡಿರುವ ಅಡಿ ಟಿಪ್ಪಣಿಗಳೂ ಚಾರಿಯವರು ಬಳಸಿದ ತಾಂತ್ರಿಕ ಪದಗಳ ಇಂಗ್ಲಿಷ್ ಸಮಾನ ಪದಗಳೂ - ಇವು ಪುಸ್ತಕದ ಕೊನೆಯಲ್ಲಿವೆ – ಓದುಗರಿಗೆ ಅನುಕೂಲವಾಗಿವೆ. ಚಾರಿಯವರು ಬಳಸಿದ ಚಿತ್ರಗಳನ್ನೂ ಲೇಖಕಿಯವರು ನೀಡಿದ್ದಾರೆ. ಶುಕ್ರ ಸಂಕ್ರಮವು ಶುಕ್ರನಿಂದ ಉಂಟಾಗುವ ಸೂರ್ಯಗ್ರಹಣದ ಮತ್ತೊಂದು ಪರಿಯೆಂದೂ, ಲಂಬನ ಎಂದರೆ ಭೂ ಪರಿಸರದಲ್ಲಿಯೂ ನಡೆಯಬಹುದಾದ ವಿದ್ಯಮಾನವೆಂದೂ ವಿವರಿಸುವ ಚಿತ್ರಗಳು ಅಂತರ್ಗತ ಆಶಯಗಳಿಂದಾಗಿ ಗಮನಾರ್ಹವಾಗಿವೆ.

ಅನುಬಂಧ ರೂಪದಲ್ಲಾದರೂ ಪೂರ್ತಿಯಾಗಿದ್ದು, ಶುಕ್ರ ಸಂಕ್ರಮವನ್ನು ವಿವರಿಸುವ ಕನ್ನಡ ಪಠ್ಯವನ್ನು ನೋಡುತ್ತಿದ್ದಂತೆ 'ಇದು ಕನ್ನಡ ಪುಸ್ತಕವೂ ಹೌದಲ್ಲ' ಎಂದೆನಿಸುತ್ತದೆ.


**ಪ್ರೊ|| ಅಡ್ಯನಡ್ಕ ಕೃಷ್ಣಭಟ್**
'ಸಾರಸ', ನಂ. ೨೩೦೧, ೨ನೇ ಅಡ್ಡರಸ್ತೆ, ವಿಜಯನಗರ ೨ನೇ ಹಂತ, ಮೈಸೂರು - ೫೭೦ ೦೧೭

ಸಂದರ್ಶನ ಲೇಖನವನ್ನು ಸಿದ್ಧಪಡಿಸಿದವರು : **ಡಾ|| ಎನ್. ಗಾಯತ್ರಿ**

# ಅಪರೂಪದ ಕನ್ನಡ 'ಜೀವಿ'

'ಹೊಸತು' ಕಚೇರಿಯಲ್ಲಿ ಜುಲೈ ೮ರಂದು ಸಂಭ್ರಮ ಮನೆ ಮಾಡಿತ್ತು. ಸಂದರ್ಭ : ನೂರರ ವಸಂತಕ್ಕೆ ಕಾಲಿಡುತ್ತಿರುವ , ಕನ್ನಡ ಸಾರಸ್ವತ ಲೋಕಕ್ಕೆ 'ಜೀವಿ' ಎಂದೇ ಪರಿಚಿತರಾದ 'ಶಬ್ದ ಬ್ರಹ್ಮ' ಜಿ. ವೆಂಕಟಸುಬ್ಬಯ್ಯನವರ ಆಗಮನ. ಜೀವಿಯವರ ಮಾತುಗಳನ್ನು 'ಹೊಸತು' ಓದುಗರಿಗೆ ಉಣಬಡಿಸುವ ಉದ್ದೇಶದಿಂದ ಸಂಪಾದಕ ಮಂಡಲಿ ಅವರನ್ನು ಮಾತಿಗೆ ಎಳೆದಿತ್ತು. ಮಾತು ಮೊದಲಿಟ್ಟೊಡನೆ ಮೆದುದನಿಯಲ್ಲಿ ಬಿಚ್ಚಿಕೊಂಡವು ಅವರ ಬಾಲ್ಯದ ನೆನಪುಗಳು:

ಇಗೋ ಕನ್ನಡ ಎಂದು ಕನ್ನಡ ಭಾಷೆಯ ಭಂಡಾರವನ್ನು ಕನ್ನಡಿಗರ ಮನೆ, ಮನಗಳಿಗೂ ತಲುಪಿಸಿದ ಕನ್ನಡ ನಿಘಂಟುಗಳ ರಾಜ, 'ಜೀವಿ'ಯೆಂದೇ ಪ್ರಖ್ಯಾತರಾದ ಗಂಜಾಂ ವೆಂಕಟಸುಬ್ಬಯ್ಯನವರು ನೂರು ವಸಂತಗಳನ್ನು ಕಂಡ ಅಪರೂಪದ ಜೀವಿ. ಪ್ರಖ್ಯಾತ ಸಂಸ್ಕೃತ ಪಂಡಿತರಾದ ಶ್ರೀ ತಿಮ್ಮಣ್ಣಯ್ಯ ಮತ್ತು ಶ್ರೀಮತಿ ಸುಬ್ಬಮ್ಮನವರ ಒಂಭತ್ತು ಮಕ್ಕಳಲ್ಲಿ ಹಿರಿಯವನಾಗಿ ೧೯೧೨ರ ಆಗಸ್ಟ್ ೨೩ರಂದು ಜನಿಸಿದರು. ಹಲವಾರು ಸಂಸ್ಥೆಗಳಲ್ಲಿ ಅಧ್ಯಾಪನ ಮಾಡಿ ಕೊನೆಗೆ ಮತ್ತು ಮುಖ್ಯವಾಗಿ ಬೆಂಗಳೂರಿನ ವಿಜಯಾ ಕಾಲೇಜಿನಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಅಪಾರ ಶಿಷ್ಯಕೋಟಿಯನ್ನು ಹೊಂದಿದವರು. ಅವರು ಒಟ್ಟು ಹತ್ತು ನಿಘಂಟುಗಳನ್ನು ಸಂಗ್ರಹಿಸಿದ್ದಾರೆ. ಎಂಟು ಸಂಪುಟಗಳುಳ್ಳ ಅವರ ಕನ್ನಡ-ಕನ್ನಡ ನಿಘಂಟು ಕೆನರಾ ಬ್ಯಾಂಕಿನ ಬ್ರೈಲ್ ಟ್ರಾನ್ಸ್‌ಕ್ರಿಪ್ಷನ್ ಸೆಂಟರ್‌ನಿಂದ ಬ್ರೈಲ್ ಭಾಷೆಗೆ ತರ್ಜುಮೆಗೊಂಡಿದೆ. ಪ್ರಜಾವಾಣಿಯಲ್ಲಿ ಒಂದು ದಶಕಕ್ಕೂ ಮಿಕ್ಕಿ ಬರೆದ ಇವರ ಅಂಕಣ 'ಇಗೋ ಕನ್ನಡ' ನವಕರ್ನಾಟಕ ಪ್ರಕಾಶನದ ಪ್ರಕಟಣೆಯಾಗಿ ಕನ್ನಡಿಗರ ಮನೆ ಮಾತಾಗಿದೆ. ಸುವರ್ಣ ಕರ್ನಾಟಕ ವರ್ಷದಲ್ಲಿ ಪ್ರಕಟವಾದ ಅವರ 'ಕ್ಲಿಷ್ಟ ಪದಕೋಶ' ಕನ್ನಡ ಭಾಷಾ ಕಲಿಕೆಗೆ ಅತ್ಯುತ್ತಮ ಮಾದರಿಯಾಗಿದೆ. ಇವರು ೧೯೬೪ರಿಂದ ೬೯ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದರು. ೨೦೦೧ರಲ್ಲಿ ಬೆಂಗಳೂರಿನಲ್ಲಿ ನಡೆದ ೭೭ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಯನ್ನು ಅಲಂಕರಿಸಿದ ಜಿ. ವೆಂಕಟಸುಬ್ಬಯ್ಯನವರು ಹಲವಾರು ಪ್ರಶಸ್ತಿಗಳಿಂದ ಸನ್ಮಾನಿತರಾಗಿದ್ದಾರೆ: ಕನ್ನಡ ಸಾಹಿತ್ಯ ಅಕಾಡೆಮಿ ಪ್ರಶಸ್ತಿ , ರಾಜ್ಯೋತ್ಸವ ಪ್ರಶಸ್ತಿ , ನಾಡೋಜ ಗೌರವ, ಮಾಸ್ತಿ ಪ್ರಶಸ್ತಿ , ಆಳ್ವರ 'ನುಡಿ ಸಿರಿ' ಪ್ರಶಸ್ತಿ , ಇವು ಕೆಲವು.



**ಹೊಸತು :** ಸರ್, ನೀವು 'ಹೊಸತು' ಕಚೇರಿಗೆ ಬಂದಿರುವುದು ನಮಗೆಲ್ಲಾ ತುಂಬ ಸಂತೋಷದ ವಿಷಯ. ನಮಗೆ ಇದೊಂದು ಅಪರೂಪದ, ಅನನ್ಯ ಅವಕಾಶ. ನೂರು ವರ್ಷಗಳನ್ನು ಪೂರೈಸುತ್ತಿರುವ ಸಂದರ್ಭದಲ್ಲಿ ನಿಮಗೆ ನಮ್ಮ ಪತ್ರಿಕೆಯ ಮತ್ತು ನಮ್ಮೆಲ್ಲ ಓದುಗರ ಹೃತ್ಪೂರ್ವಕ ಅಭಿನಂದನೆಗಳು. ಈ ಸಂದರ್ಭದಲ್ಲಿ ನಿಮ್ಮ ಬದುಕಿನ ಬಗ್ಗೆ ನಿಮಗೇನನ್ನಿಸುತ್ತೆ ?

**ಜೀವಿ :** ನಿಜ ಹೇಳ್ಬೇಕಂದ್ರೆ, ನನಗೆ ಈ ನೂರು ವರ್ಷ ಅನ್ನೋದು ಒಂಥರಾ ಬೇಜಾರಾಗ್ತಿದೆ. ಎಷ್ಟು ಬೇಗ ಈ ನೂರು ವರ್ಷ ಆಗಿಹೋಯ್ತಲ್ಲಾ, ಅಂತ. ಇನ್ನೂ ಏನಾದರೂ ಮಾಡಬಹುದಿತ್ತಲ್ಲಾ ಅಂತ ಅನ್ನಿಸುತ್ತೆ. ಮತ್ತೊಂದು ಹೇಳಬೇಕಂದ್ರೆ, ನನಗೆ ಈ ನೂರು ಎನ್ನುವ ಹೆಸರಿನಲ್ಲಿ ನನ್ನ ಸುತ್ತ ಏನೇನು ನಡೀತಿದೆ !

**ಹೊಸತು :** ಈ ನೂರು ವರ್ಷಗಳಲ್ಲಿ ನಿಮ್ಮ ಹಲವಾರು ಸಂದರ್ಶನಗಳು ಬಂದಿವೆ. ಇವುಗಳಲ್ಲಿ ನೀವು ಹೇಳದೆ ಇರಬಹುದಾದ ವಿಚಾರ ಮತ್ತು ಅನುಭವಗಳನ್ನು ನಮ್ಮ ಓದುಗರಿಗಾಗಿ ಹಂಚಿಕೊಳ್ಳಿ.

**ಜೀವಿ :** ನಮ್ಮದು ಬಡ ಬ್ರಾಹ್ಮಣ ವಂಶ. ಹಿಂದಿನ ಕಾಲಕ್ಕೆ ಮಂಡ್ಯದ ಮುದುಗುಂದೂರು ಅನ್ನುವ ಗ್ರಾಮದಲ್ಲಿ ನಮ್ಮ ತಾತ ನರಸಿಂಹ ಜೋಯಿಸ್ ವಾಸವಾಗಿದ್ದರು. ಅಲ್ಲಿದ್ದ ನವಗ್ರಹ ದೇವಾಲಯದ ಅರ್ಚಕರಾಗಿದ್ದರು. ಅದರ ಜೊತೆಗೆ ಪೌರೋಹಿತ್ಯ, ಜ್ಯೋತಿಷ್ಯ ಎಲ್ಲವನ್ನೂ ಅವರು ನಡೆಸುತ್ತಿದ್ದರು. ಸ್ವಲ್ಪ ಜಮೀನು ಇತ್ತು. ಆ ಜಮೀನಿನಲ್ಲಿ ಜೋಳ, ರಾಗಿ – ಎಲ್ಲಾ ಬೆಳೆಯುತ್ತಿದ್ದರು. ಹೆಚ್ಚು ಬ್ರಾಹ್ಮಣ ಕುಟುಂಬಗಳೇ ಇದ್ದ ಊರದು. ಒಮ್ಮೆ ಅಲ್ಲಿ ಕ್ಷಾಮ ಬಂತಂತೆ. ಆಗ ಇದ್ದ ಜಮೀನೆಲ್ಲಾ ಮಾರಿ ಗುಳೆ ಹೊರಟು ಶ್ರೀರಂಗಪಟ್ಟಣದ ಹತ್ತಿರ ಟಿಪ್ಪು ಸೈನ್ಯ, ಕೋಟೆ ಎಲ್ಲಾ ಇತ್ತಲ್ಲ, ಆ ಗಂಜಾಂ ಎನ್ನುವ ಊರಿಗೆ ಬಂದರು. ಗಂಜಾಂ ಅನ್ನುವುದು ಪೇಟೆಯೇ. ಜಮೀನು ಮಾರಿ ತಂದಿದ್ದ ಹಣದೊಂದಿಗೆ ಅವರಿಗೆ ಮನೆ ಮಾತ್ರ ಕೊಂಡುಕೊಳ್ಳೋದಕ್ಕೆ ಸಾಧ್ಯ ಆಯಿತು. ಆದರೆ ಜೀವನಕ್ಕೆ ಏನೂ ಇರಲಿಲ್ಲ.

ತಾತ ಇದ್ದ ಆ ಮನೆ ಇನ್ನೂ ನನಗೆ ನೆನಪಿದೆ. ಮನೆಯ ಹತ್ತಿರ ಇದ್ದ ಸ್ನಾನ ಘಟ್ಟಗಳಲ್ಲಿ ದೇವಸ್ಥಾನಗಳು ಇರುತ್ತಿದ್ದುವು. ತಾತ ಆ ದೇವಸ್ಥಾನಗಳಲ್ಲಿ ಒಂದರ ಪೂಜಾರಿ. ಅದು ಗಣೇಶನ ದೇವಸ್ಥಾನ. ಅದಕ್ಕೆ ಅವರಿಗೆ ೫ ರೂಪಾಯಿ ಸಂಬಳ. ಆಗ ನಮ್ಮ ಮನೆಯಲ್ಲಿ ಲೋಹದ ಪಾತ್ರೆಯೇ ಇರಲಿಲ್ಲ. ಮಣ್ಣಿನ ಪಾತ್ರೆಗಳು, ಕಲ್ಲು ಮರಿಗೆಗಳು ಇರುತ್ತಿದ್ದವು. ಆಗ ಎಂತಹ ಬಡತನದ ಕಾಲ ಅಂದರೆ, ಅಜ್ಜಿ ಬೆಳಗ್ಗೆದ್ದು, 'ಇವತ್ತು ಅಡಿಗೆಗೆ ಏನೂ ಇಲ್ಲ', ಅಂತ ಹೇಳಿದರೆ, ಆಗ ತಾತ ಹೆಗಲ ಮೇಲೆ ಒಂದು ಟವೆಲ್ ಹಾಕ್ಕೊಂಡು, ಕೈಯಲ್ಲಿ ಒಂದು ಪಂಚಾಂಗ ಹಿಡಿದು, ಆ ಊರಿನ ರತ್ನಗಿರಿ ವ್ಯಾಪಾರಿಗಳ ಮನೆಗೆ ಜಾತಕ, ಭವಿಷ್ಯ ಹೇಳೋಕೆ ಹೋಗೋರು. ಆಗ ಅವರು ತಾತನಿಗೆ ಬೇಳೆ, ಅಕ್ಕಿ, ಮೆಣಸಿನಕಾಯಿ, ನಾಲ್ಕು ಕಾಸು ದಕ್ಷಿಣೆ ಕೊಡೋರು. ಅದನ್ನೆಲ್ಲಾ ಅವರ ಟವಲ್‌ನಲ್ಲಿ ತಾತ ಸುತ್ತಿಕೊಂಡು ಬರೋರು. ಹೀಗೆ ಏಳೆಂಟು ಮನೆಗಳನ್ನು ಸುತ್ತಿದ ಮೇಲೆ ನಾಲ್ಕೈದು ದಿನಗಳಿಗೆ ಸಾಕಾಗುವಷ್ಟು ಊಟ ಸಿಗುತ್ತಿತ್ತು. ಅವರು ಕೊಡುತ್ತಿದ್ದ ನಾಲ್ಕು ಕಾಸಿನಲ್ಲಿ ಅಡಿಗೆಗೆ ಬೇಕಾದ ಎಣ್ಣೆ ಬರುತ್ತಿತ್ತು. ಕೆಲವೊಮ್ಮೆ ತಾತ ಒಂದು ಉಪಾಯ ಮಾಡುತ್ತಿದ್ದರು. ದೇವರಿಗೆ ತಿಂಡಿ ಹಾರ ಹಾಕಿದರೆ ಭಕ್ತರ ಇಷ್ಟಾರ್ಥ ಸಿದ್ಧಿಸುತ್ತೆ, ಅವರಿಗೆ ಒಳ್ಳೇದಾಗತ್ತೆ, ಅಂತ ಹೇಳೋರು. ಸರಿ, ಕೋಡುಬಳೆ ಹಾರ ಹಾಕೋರು. ಆಂಬೋಡೆ ಹಾರ ಹಾಕೋರು. ಅದನ್ನು ಮಾಡಕ್ಕೆ ಅಂತ ದಿನಸಿ ಪದಾರ್ಥಗಳನ್ನು ತಂದುಕೊಡುತ್ತಿದ್ದರಲ್ಲಾ, ಅದರಿಂದ ಸ್ವಲ್ಪ ಸಹಾಯ ಆಗೋದು. ಆಗ ನಮ್ಮ ಮನೆಯಲ್ಲಿ ಅಡಿಗೆ, ಅನ್ನ, ಸಾರು ತಿನ್ನಲು ಇರದಿದ್ದರೂ ತಿಂಡಿಯಂತೂ ಬೇಕಾದಷ್ಟಿರೋದು. ಇದು ಭಿಕ್ಷೇನೇ ಆದರೂ ಅದಕ್ಕೆ ಆ ಪದ ಬಳಸ್ತಿರಲಿಲ್ಲ. 'ಉಪಾದಾನ' ಎನ್ನುತ್ತಿದ್ದರು. ಹೊಸ ಪದ ಹೀಗೆ ಹುಟ್ಟಿಕೊಂಡಿದ್ದು. ನಮ್ಮ ತಾತ ಹೀಗೆ ಬದುಕಿದ್ದರು.

ನಾನು ಹುಟ್ಟುವ ವೇಳೆಗೆ ಆ ಮನೆಗೆ ಸುಣ್ಣ-ಬಣ್ಣ ಎಲ್ಲವೂ ಆಗಿತ್ತು. ಅಲ್ಲೇ ಅಪ್ಪ , ಚಿಕ್ಕಪ್ಪ – ಎಲ್ಲಾ ಇದ್ದರು. ನಮ್ಮಪ್ಪ ಅಲ್ಲೇ ಗಂಜಾಂ ಶಾಲೆಯಲ್ಲಿ ೭ನೆಯ ಕ್ಲಾಸ್‌ವರೆಗೆ ಓದಿದ್ದರು. ಶಾಲೆಯಲ್ಲಿ ಓದುವಾಗಲೇ ಕೆಲವು ಪುಸ್ತಕಗಳ ಬಹುಮಾನ ಪಡೆದಿದ್ದರು. ರಾಜಶೇಖರ ವಿಳಾಸ, ಮತ್ತೊಂದು ಇನ್ನೇನೋ. ನನ್ನ ಬಳಿ ಆ ಪುಸ್ತಕಗಳು ಇನ್ನೂ ಇವೆ. ಅಪ್ಪರ್ ಸೆಕೆಂಡರಿ ಪಾಸ್ ಮಾಡಿದರೆ ಆಗ ಮೇಷ್ಟರ ಕೆಲಸ ಸಿಗುತ್ತಿತ್ತು. ಮೇಷ್ಟರಾಗಿ ಕೆಲಸ ಮಾಡುತ್ತಲೇ ಪಂಡಿತ್ ಪರೀಕ್ಷೆ ಪಾಸ್ ಮಾಡಿದರು. ಆಮೇಲೆ ಅವರಿಗೆ ಹೈಸ್ಕೂಲಿಗೆ ವರ್ಗವಾಯಿತು. ಆಗ ೩೫ ರೂಪಾಯಿ ಸಂಬಳ.

ನನಗೆ ಲೋಯರ್ ಸೆಕೆಂಡರಿವರೆಗೂ ಮನೆಯಲ್ಲೇ ಪಾಠ. ಬನ್ನೂರಿನಲ್ಲಿ ನಮ್ಮ ತಂದೆ ಹೆಡ್ ಮೇಷ್ಟರಾಗಿದ್ದಾಗ, ಅಲ್ಲೇ ನಾನು ಮೊದಲು ಸ್ಕೂಲಿಗೆ ಸೇರಿದ್ದು. ಆಗಲೇ ನಾನು ಪಾಣಿನಿಯ ಪಾಠ, ವೇದೋಪನಿಷತ್ತು, ಪೌರೋಹಿತ್ಯ, ಕರ್ಮಾದಿಗಳನ್ನು ಕಲಿತೆ. ನಮ್ಮ ತಂದೆ ಎಲ್ಲಿ ಹೋದರೂ ಕುಮಾರವ್ಯಾಸ ಭಾರತ, ಜೈಮಿನಿ ಎಲ್ಲವನ್ನೂ ವಾಚನ ಮಾಡುತ್ತಿದ್ದರು. ಅವರೊಡನೆ ಹೋಗುತ್ತಿದ್ದ ನನಗೂ ಇದರಿಂದ ಕನ್ನಡ ಪ್ರೇಮ, ತಿಳುವಳಿಕೆ ಬೆಳೆಯಿತು. ಇಲ್ಲಿ ನಾನು ಲೋಯರ್ ಸೆಕೆಂಡರಿ ಮುಗಿಸಿಯಾದ ಮೇಲೆ ತಂದೆಗೆ ಮಧುಗಿರಿಗೆ ವರ್ಗವಾಗಿತ್ತು. ಅಲ್ಲಿ ನಾನು ನಾಲ್ಕನೇ ಫಾರಂ ಪಾಸು ಮಾಡೋಕೆ ಮೊದಲು ಎಲ್ಲೆಸ್‌ನ ಒಂದು ಇಂಗ್ಲಿಷ್ ಪೇಪರ್ ಪಾಸು ಮಾಡಬೇಕಾಗಿತ್ತು. ತಂದೆಯ ಸ್ನೇಹಿತರೊಬ್ಬರು ಬಂದು ನನಗೆ ಎಬಿಸಿಡಿಯಿಂದ ಆರಂಭಿಸಿ ರೆನ್ ಅಂಡ್ ಮಾರ್ಟಿನ್‌ನಿಂದ ಅಭ್ಯಾಸಗಳನ್ನು ಮಾಡಿಸಿದರು. ಇದರಿಂದ ನನಗೆ ಎಸ್.ಎಸ್.ಎಲ್.ಸಿ. ಪಾಸು ಮಾಡೋಕೆ ಸುಲಭವಾಯಿತು.

ಎಸ್.ಎಸ್.ಎಲ್.ಸಿ. ಪಾಸಾಗುವ ಹೊತ್ತಿಗೆ ನಮ್ಮ ತಂದೆಗೆ ಮಧುಗಿರಿಯಿಂದ ಮೈಸೂರಿಗೆ ವರ್ಗವಾಯಿತು.





ನಾವು ಅದೇ ಊರಲ್ಲಿದ್ದಿದ್ದರೆ ನನ್ನ ವಿದ್ಯಾಭ್ಯಾಸ ಅಲ್ಲಿಗೆ ಮುಕ್ತಾಯವಾಗಿರುತ್ತಿತ್ತು. ಮೈಸೂರಿನಲ್ಲಿ ಇಂಟರ್ ಮೀಡಿಯೆಟ್‌ಗೆ ಸೇರಿಕೊಂಡೆ. ನಿಘಂಟು ಇಟ್ಕೊಂಡು ಶಬ್ದಮಣಿದರ್ಪಣ, ಜಗನ್ನಾಥ ವಿಜಯ – ಎಲ್ಲಾ ಓದಿಕೊಂಡೆ. ಆನರ್ಸ್ ಸೇರೋಕೂ ಮುಂಚೆ ನನಗೆ ಇವುಗಳ ಪಾಠ ಆಗಿಹೋಗಿತ್ತು. ಆಗ ಬಡ ವಿದ್ಯಾರ್ಥಿಗಳಿಗೆ ಇಂಟರ್‌ಮೀಡಿಯೆಟ್‌ನಲ್ಲಿ ಫ್ರೀಶಿಪ್ ಸಿಗುತ್ತಿತ್ತು. ನಾನು ಇಂಟರ್‌ಮೀಡಿಯೆಟ್‌ನಲ್ಲಿ ಪ್ರಾಚೀನ ಇತಿಹಾಸ, ತರ್ಕಶಾಸ್ತ್ರ, ಎರಡನೇ ಭಾಷೆಯಾಗಿ ಸಂಸ್ಕೃತ ಮತ್ತು ಮೊದಲನೇ ಭಾಷೆಯಾಗಿ ಕನ್ನಡ ಓದಿದೆ.

ಕಸ್ತೂರಿಯವರು ನಮ್ಮ ಮೇಷ್ಟರಾಗಿದ್ದರು. ಅವರು ಸೊಗಸಾಗಿ ಪಾಠ ಮಾಡುತ್ತಿದ್ದರು. ಥೂಸಿಡೈಡಿಸ್‌ನ ಗ್ರೀಕ್ ಚರಿತ್ರೆಯ ಪುಸ್ತಕ ನಮಗೆ ಓದಿಸಿದರು. ನಂತರ ನನಗೆ ಆನರ್ಸ್‌ನಲ್ಲಿ ಏನೂ ಕಷ್ಟವಾಗಲಿಲ್ಲ, ಆಗ ನನ್ನ ಸಹಪಾಠಿ ಎಚ್. ಎಂ. ಶಂಕರನಾರಾಯಣ ರಾವ್. ನಮ್ಮದು ಭಾರಿ ಸ್ನೇಹ. ನಾನು ಮಹಾರಾಜ ಕಾಲೇಜಿನಲ್ಲಿದ್ದಾಗ ಯೂನಿಯನ್ನಿನಲ್ಲಿ ತುಂಬ ಕ್ರಿಯಾಶೀಲವಾಗಿ ತೊಡಗಿ ಕೊಂಡಿದ್ದೆ. ಇನ್‌ಡೋರ್ ಗೇಮ್ಸ್ ನನ್ನ ಮೊದಲ ಆಸಕ್ತಿ. ಕೇರಂ, ಚೆಸ್ ಚಾಂಪಿಯನ್ ಆಗಿದ್ದೆ. ಇದರಿಂದ ನಾನು ಯೂನಿಯನ್ನಲ್ಲಿ ಹೆಚ್ಚು ಸಮಯ ಕಳೀತೀನಿ ಅನ್ನುವ ಅಭಿಪ್ರಾಯ ಕೆಲವು ಶಿಕ್ಷಕರಲ್ಲಿ ಮೂಡಿತ್ತು. ಅದರ ಫಲವಾಗಿ ನನಗೆ ಸ್ಕಾಲರ್‌ಶಿಪ್ ಸಿಗಲಿಲ್ಲ, ನನಗೆ ಕಷ್ಟ ಆಯಿತು. ಏಳು ಜನ ಅಣ್ಣ ತಮ್ಮಂದಿರು ಮತ್ತು ಇಬ್ಬರು ತಂಗಿಯರಿದ್ದ ಮನೆಯಲ್ಲಿ ನಾನೇ ಹಿರಿ ಮಗ. ಜವಾಬ್ದಾರಿ ನನ್ನ ಮೇಲೆ ಹೆಚ್ಚಿತ್ತು. ಬರಿ ಬುದ್ಧಿ, ತಿಳುವಳಿಕೆಯಿದ್ದರೆ ಮಾತ್ರ ಸಾಲದು, ಅದರ ಪ್ರದರ್ಶನವೂ ಬೇಕು ಅಂತ ಇದಾದ ನಂತರ ಬುದ್ಧಿ ಬಂತು.

ಎಂ.ಎ.ನಲ್ಲಿ ನನ್ನ ಸಾಮರ್ಥ್ಯ ತೋರಿಸಲು ಗಂಭೀರವಾಗಿ ಓದಿದೆ. ವಿಶ್ವವಿದ್ಯಾಲಯಕ್ಕೆ ಪ್ರಥಮ ರ್‍ಯಾಂಕ್, ಎರಡು ಪದಕಗಳನ್ನು ಪಡ್ಕೊಂಡೆ. ಆದರೆ ಇದರಿಂದ ನನಗೆ ಕೆಲಸವೇನೂ ಸಿಗಲಿಲ್ಲ, ಆಗ ಎರಡನೇ ಮಹಾಯುದ್ಧದ ಕಾಲ. ಎಲ್ಲೂ ಕೆಲಸಗಳು ಇರಲಿಲ್ಲ. ಆಗ ಟೀಚರ್ಸ್ ಕಾಲೇಜಿನ ಪ್ರೊ॥ ಸಿದ್ದಲಿಂಗಯ್ಯನವರು ನನಗೆ ಬಿ.ಟಿ. ಪಾಸು ಮಾಡಿಕೋ ಅಂತ ಹೇಳಿದರು. ನನಗೆ ಫೀಸು ಕೊಡೋಕೆ ಹಣ ಇಲ್ಲ, ಅಂತ ಹೇಳಿದೆ. ಅವರೇ ಫ್ರೀಶಿಪ್ ಕೊಡಿಸಿದರು. ಬಿ.ಟಿ.ನೂ ಪಾಸು ಮಾಡಿದೆ. ಒಳ್ಳೆ ಟೀಚರ್ ಅಂತ ಸರ್ಟಿಫಿಕೇಟ್ ಕೊಟ್ಟರು. ಕೊನೆಗೆ ನನಗೆ ಸಹಾಯ ಮಾಡಿದ್ದು ಇದೇನೆ. ನಂತರ ಮಂಡ್ಯದ ಮುನಿಸಿಪಲ್ ಶಾಲೆಯಲ್ಲಿ ಕನ್ನಡ ಮೇಷ್ಟರಾಗಿ ೭-೮ ತಿಂಗಳು ಕೆಲಸ ಮಾಡಿದೆ. ಆ ವೇಳೆಗೆ ಮೈಸೂರು ವಿಶ್ವವಿದ್ಯಾಲಯದಲ್ಲಿ ಎನ್. ಎಸ್. ಸುಬ್ಬರಾವ್ ವೈಸ್-ಚಾನ್ಸಲರ್ ಆಗಿದ್ದರು. ಕೆಲಸಕ್ಕಾಗಿ ಅವರನ್ನು ಹೋಗಿ ಭೇಟಿಯಾದೆ. ಆಗ ಮಹಾರಾಜ ಕಾಲೇಜಿನಲ್ಲಿದ್ದ ಕ. ವೆಂ. ರಾಘವಾಚಾರ್‌ರವರು ನಿಘಂಟು ಕೆಲಸಕ್ಕೆ ಹೋಗಿದ್ದರಿಂದ ತೆರವಾಗಿದ್ದ ಲೀವ್ ವೇಕೆನ್ಸಿಯಲ್ಲಿ ನಾಲ್ಕೂವರೆ ವರ್ಷ ಕೆಲಸ ಮಾಡಿದೆ. ಆಗ ಕನ್ನಡ ಲೆಕ್ಚರರ್‌ರ ಸಂಬಳ ೪೦ ರೂಪಾಯಿ. ಬೇರೆ ವಿಷಯಗಳಿಗೆ ೭೫ ರೂಪಾಯಿ. ಮುಂದೆ ಬಿ.ಎಂ.ಶ್ರೀ. ರಿಜಿಸ್ಟ್ರಾರ್ ಆಗಿ ಬಂದ ಮೇಲೆ ಕನ್ನಡಕ್ಕೂ ೭೫ ರೂಪಾಯಿಗಳಿಗೆ ಹೆಚ್ಚಿಸಿದರು. ಈ ಲೀವ್ ವೇಕೆನ್ಸಿ ಮುಗಿದ ಮೇಲೆ ಮತ್ತೆ ಕೆಲಸ ಇರಲಿಲ್ಲ, ಮಾಸ್ತಿಯವರನ್ನು ಸಹಾಯಕ್ಕಾಗಿ ಕೇಳಿದೆ. ಅವರು ಕರೆದು ವಾಡಿಯಾರವರನ್ನು ಭೇಟಿಯಾಗಲು ಹೇಳಿದರು. ವಾಡಿಯಾರವರು ದಾವಣಗೆರೆ ಹೈಸ್ಕೂಲ್‌ನಲ್ಲಿ ಒಂದು ಆರು ತಿಂಗಳ ಟೆಂಪೊರರಿ ಕೆಲಸ ಇದೆ ಹೋಗ್ತಿಯಾ ಅಂತ ಕೇಳಿದರು. ಆಗಲಿ, ಅಂತ ಹೊರಟೆ. ಅಲ್ಲಿ ಇಂಗ್ಲಿಷ್ ಪಾಠ ಮಾಡಬೇಕಿತ್ತು. ಸರಿ, ಮೊದಲ ದಿನದ ಪಾಠ ಮುಗಿದ ಮೇಲೆ ಆ ಊರಿನಲ್ಲಿದ್ದ ತರಳಬಾಳು ಮಠದ ಮ್ಯಾನೇಜರ್ ನನ್ನ ಹತ್ತಿರ ಬಂದು, ನಮ್ಮ ಮಠದ ಮಕ್ಕಳಿಗೆ ದಿನಾ ಒಂದು ಗಂಟೆ ಪಾಠ ಮಾಡ್ತೀರಾ ಅಂತ ಕೇಳಿದರು. ಅದಕ್ಕೆ ಸಂಬಳ ೭೫ ರೂಪಾಯಿ ಕೊಡ್ತೀವಿ ಅಂದ್ರು. ಆಯಿತು ಅಂತ ಖುಷಿಯಾಗಿ ಒಪ್ಪಿದೆ. ನನಗೆ ಸ್ಕೂಲಲ್ಲಿ ತಿಂಗಳಿಗೆ ಬರುತ್ತಿದ್ದ ಸಂಬಳ ೩೫ ರೂಪಾಯಿ. ಆರು ತಿಂಗಳು ಆಗಿ ನನ್ನ ಕೆಲಸ ಕೊನೆಯಾದ ಮೇಲೆ ಅವರಿಗೆ ಥ್ಯಾಂಕ್ಸ್ ಹೇಳಲು ಹೋದೆ. ಅವರು, ಹೋಗಬೇಡಿ, ನಿಮ್ಮ ಸ್ಕೂಲಿನ ಸಂಬಳಾನೂ ಸೇರಿಸಿ ಕೊಡ್ತೇವೆ. ಇಲ್ಲೇ ಇರಿ, ಅಂದ್ರು. ಆ ವೇಳೆಗಾಗಲೇ ನನಗೆ ಜಿ. ವಿ. ಲಕ್ಷ್ಮಿಯೊಡನೆ ಮದುವೆಯಾಗಿ ನನ್ನ ಹಿರಿ ಮಗಾನೂ ಹುಟ್ಟಿದ್ದ. ಮನೆಯಿಂದ ದೂರ ಇದ್ದು ಬೇಜಾರಾಗಿತ್ತು. ಅದಕ್ಕೆ ಏನೂ ಒಪ್ಪಿಕೊಳ್ಳದೆ ವಾಪಸ್ಸು ಬೆಂಗಳೂರಿಗೆ ಹಿಂತಿರುಗಿ ಬಂದೆ.

ಆಗ ಬೆಂಗಳೂರಿನಲ್ಲಿ ಬಿ.ಎಚ್.ಎಸ್. (ಬೆಂಗಳೂರು ಹೈಸ್ಕೂಲ್) ಶುರುವಾಗಿತ್ತು. ಸೆಂಟ್ರಲ್ ಕಾಲೇಜಿನಲ್ಲಿ ಪ್ರಿನ್ಸಿಪಾಲ್ ಆಗಿ ರಿಟೈರಾಗಿದ್ದ ಸಿ. ಆರ್. ನಾರಾಯಣರಾವ್ ಅನ್ನುವವರು ಇದರ ಅಧ್ಯಕ್ಷರಾಗಿದ್ದರು. ಅವರ ಮನೆಗೆ ಹೋಗಿ ನನ್ನ ಪರಿಚಯ ಹೇಳಿಕೊಂಡೆ. ಅವರು ಅವರ ಮನೆಯ ಮುಂದಿನ ಗಾರ್ಡನ್‌ನಲ್ಲಿ ನನ್ನನ್ನು ಕೂಡಿಸಿ ಎಲ್ಲ ವಿಚಾರಿಸಿದರು. ನಾನು ನನ್ನ ಕೆಲಸಕ್ಕೆ ಅಪ್ಲಿಕೇಷನ್ ಕೊಡೋಕೆ ಬಂದೆ ಅಂತ ಹೇಳ್ದೆ. ಅವರು, ''ಅಪ್ಲಿಕೇಷನ್ ಏಕೆ? ನಿಮ್ಮ ಇಂಟರ್‌ವ್ಯೂ ಆಯಿತು. ನಾಳೆಯಿಂದಲೇ ಕೆಲಸಕ್ಕೆ ಬನ್ನಿ,'' ಅಂತ ಹೇಳಿದರು. ಬಹಳ ಒಳ್ಳೆಯ ಮನುಷ್ಯ. ನನಗೋ ಆಶ್ಚರ್ಯ! ಎಲ್ಲರಿಗೂ ಸಂಬಳ ೪೦ ರೂಪಾಯಿ. ಆದರೆ ನನಗೆ ಸಂಬಳ ೪೮ ರೂಪಾಯಿ ಕೊಟ್ಟಿದ್ದರು. ಎರಡು ಇಂಕ್ರಿಮೆಂಟ್ ಕೊಟ್ಟಿದ್ದರು. ಅಲ್ಲಿಂದ ನನ್ನ ಬದುಕು ಸಲೀಸಾಯಿತು. ಆಮೇಲೆ ವಿಜಯಾ ಕಾಲೇಜು ಸೇರಿದೆ. ಉಳಿದಿದ್ದು, ನಿಮಗೆ ಗೊತ್ತಲ್ಲಾ...

**ಹೊಸತು :** ಸರ್, ನೀವು ವಿದ್ಯಾರ್ಥಿಯಾಗಿದ್ದ ಕಾಲ ದೇಶದಲ್ಲಿ ಸ್ವಾತಂತ್ರ್ಯ ಚಳುವಳಿ ತೀವ್ರವಾಗಿದ್ದ ಕಾಲ. ಆ ಸಂದರ್ಭದಲ್ಲಿ ನಿಮ್ಮ ಅನುಭವ ಹೇಗಿತ್ತು?

**ಜೀವಿ :** ನನ್ನ ವಿದ್ಯಾರ್ಥಿ ದೆಸೆಯ ಕಾಲ ಚೆನ್ನಾಗೇ ಇತ್ತು. ನನಗೆ ಎಲ್ಲ ಕಡೆಯೂ ಒಳ್ಳೆಯ ಶಿಕ್ಷಕರು ಮತ್ತು ಪ್ರಿನ್ಸಿಪಾಲರೇ ಸಿಕ್ಕಿದ್ದರು. ಚಳುವಳಿಯ ಕಾಲದ ಒಂದು ಘಟನೆ ನೆನಪಿನಲ್ಲಿದೆ. ಮೈಸೂರು ಮಹಾರಾಜ ಕಾಲೇಜಿನಲ್ಲಿ ಕ್ವಿಟ್ ಇಂಡಿಯಾ ಸಂದರ್ಭ, ಗಾಂಧಿ ಅರೆಸ್ಟ್ ಆಗಿದ್ದರು. ಆಗ ನಮ್ಮ ಪ್ರಿನ್ಸಿಪಾಲ್ ರಾಲೋರವರು ವಿದ್ಯಾರ್ಥಿಗಳನ್ನೆಲ್ಲಾ ಸೇರಿಸಿ ಭಾಷಣ ಮಾಡಿದರು : ನನ್ನ ಆತ್ಮೀಯ ಬಂಧುಗಳೇ, ನೀವು ಗಾಂಧಿಯ ಮಾತು ಕೇಳಿ ಮೂರ್ಖರಾಗಬೇಡಿ. ಈ ಗಾಂಧಿ ಅಹಿಂಸೆಯ ಮಾತನಾಡುತ್ತಾರೆ. ಆದರೆ ಅವರೇ ಹಿಂಸೆಯನ್ನು ಆಚರಿಸುತ್ತಾರೆ, ಅಂತ. ಸರಿಯಪ್ಪ, ಈ ಮಾತು ಕೇಳಿದ್ದೇ ತಡ ವಿದ್ಯಾರ್ಥಿಗಳೆಲ್ಲಾ ಓ ಅಂತ ಕೂಗುತ್ತಾ, ಅವರನ್ನು ವಿರೋಧಿಸಿ ಅವರು ಅಲ್ಲಿಂದ ಹೊರ ಹೋಗುವಂತೆ ಮಾಡಿದರು. ಈ ತರಹದ ಘಟನೆಗಳು ನಡೆಯುತ್ತಿದ್ದುವಾದರೂ ಮೈಸೂರು ಮಹಾರಾಜರ ಆಳ್ವಿಕೆಯಲ್ಲಿ ಜನ ನೆಮ್ಮದಿಯಾಗಿದ್ದರು.

**ಹೊಸತು :** ಭಾಷೆಯೊಂದರ ಶ್ರೇಷ್ಠತೆ ಇರುವುದು ಯಾವುದರಲ್ಲಿ? ಅದರ ಪ್ರಾಚೀನತೆಯಲ್ಲೋ ಅಥವಾ ಎಷ್ಟು ಜನರು ಆ ಭಾಷೆಯನ್ನು ಮಾತನಾಡುತ್ತಾರೆ ಇಲ್ಲವೆ ಆ ಭಾಷೆಯ ಎಷ್ಟು ಲೇಖಕರಿಗೆ ಪ್ರಶಸ್ತಿ, ಪುರಸ್ಕಾರಗಳು ದಕ್ಕಿವೆಯೆಂಬ ಕಾರಣದಿಂದಲೋ ?

**ಜೀವಿ :** ಇಂಡಿಯಾ ದೇಶ ತುಂಬ ದೊಡ್ಡ ದೇಶ. ಇಲ್ಲಿ ಎಷ್ಟೊಂದು ಭಾಷೆಗಳು. ಎಲ್ಲ ಭಾಷೆಗಳೂ ಸಂಸ್ಕೃತಿಯ ಆಗರ. ಆದ್ದರಿಂದ ಆಯಾ ಪ್ರಾಂತ್ಯದ ಭಾಷೆಯಲ್ಲಿ ಅಲ್ಲಿನ ಸಂಸ್ಕೃತಿಯು ವ್ಯಕ್ತವಾಗುತ್ತದೆ. ಮನೆ ಮಾತಾದ ಭಾಷೆಯೇ ಸರ್ಕಾರದ ಭಾಷೆಯೂ ಆದಾಗ ಸರ್ಕಾರ ಜನರ ನೋವು ನಲಿವಿಗೆ ಸ್ಪಂದಿಸತ್ತೆ. ಅವರ ನಡುವಿನ ಅಂತರ ಕಡಿಮೆಯಾಗುತ್ತೆ. ನೋಡಿ, ಜಗತ್ತಿನಲ್ಲಿರುವ ೧೦,೦೦೦ ಭಾಷೆಗಳಲ್ಲಿ ಕನ್ನಡದ ಸ್ಥಾನ ೨೯ನೇದೋ, ೩೦ನೇದೋ ಆಗಿದೆ. ಅಂದರೆ ಅದಕ್ಕೆ ಅಷ್ಟು ಸತ್ವ ಇದೆ. ಮೊದಲು ದೇಶಕ್ಕೆ ಒಂದೇ ಭಾಷೆ ಇರಲಿ ಅಂದ್ರು. ಅದು ಹಿಂದಿ ಅಂತ ಆಯಿತು. ಇಂಗ್ಲಿಷ್ ಭಾಷೆ ವ್ಯಾವಹಾರಿಕ ಬದುಕಿಗೆ, ಮತ್ತೊಂದು ಮಾತೃಭಾಷೆ. ಈ ತ್ರಿಭಾಷಾ ಸೂತ್ರ ಜಾರಿಗೆ ಬಂದಾಗ ಕನ್ನಡದವರು ತಪ್ಪು ಮಾಡಿದರು. ದಿವಾಕರ್ ಅಧ್ಯಕ್ಷರಾಗಿದ್ದಾಗ ಅ.ನ.ಕೃ. ಹಿಂದಿಯನ್ನು ಪ್ರತಿಭಟಿಸಿ ಹೊರನಡೆದರು. ಇದರಿಂದ ಎಲ್ಲ ಕನ್ನಡ ಸಾಹಿತಿಗಳೂ ಹಿಂದಿ ವಿರೋಧಿಗಳು, ಹಿಂದಿಯನ್ನು ವಿರೋಧಿಸುತ್ತಾರೆ,





ಎಂದಾಯಿತು. ಇದು ತಪ್ಪು ನಿರ್ಧಾರ ಅಂತ ಅನ್ನಿಸುತ್ತೆ. ಹಿಂದಿ ಸಿನಿಮಾ, ಟಿ.ವಿ., ಮಾರ್ಕೆಟ್ ಮೂಲಕ ಬಂದೇ ಬಂತು. ಯಾರೂ ತಡೆಯಕ್ಕಾಗಲಿಲ್ಲ. ಸಿನಿಮಾ ಅಂದ್ರೆ ಹಿಂದಿ ಮುಖ್ಯ ಆಯಿತು, ಮಾತು ಅಂದಾಗ ಇಂಗ್ಲಿಷ್ ಮುಖ್ಯ ಆಯಿತು. ಇದರಿಂದ ಮಾತೃಭಾಷೆ ಹಿಂದಕ್ಕೆ ಸರೀತು. ಯಾವಾಗ ಆಡು ಭಾಷೆ ಕಡಿಮೆ ಆಯಿತೋ, ಅದರ ಬೆಳವಣಿಗೇನೂ ಕುಂಠಿತವಾಯಿತು. ಬರೀ ಸಾಹಿತಿಗಳು ನಿನ್ನ ಪುಸ್ತಕ ಚೆನ್ನ, ನನ್ನದು ಚೆನ್ನ ಅಂತ ಅನ್ಕೊಂಡು ಅವರವರೇ ಕೂತರು.

**ಹೊಸತು :** ಇತ್ತೀಚೆಗೆ ಭಾಷಣವೊಂದರಲ್ಲಿ ಜ್ಞಾನಪೀಠ ಪ್ರಶಸ್ತಿ ಪಡೆದ ನಮ್ಮ ಲೇಖಕರಾದ ಅನಂತಮೂರ್ತಿಯವರು ಜನ ಹಳಗನ್ನಡ ಓದಬೇಕು, ಅದರಿಂದ ಭಾಷೆ ಗಟ್ಟಿ ಆಗುತ್ತೆ, ಅಂತ ಹೇಳುತ್ತಿದ್ದರು. ಇದರ ಬಗ್ಗೆ ನಿಮಗೆ ಏನನ್ನಿಸುತ್ತೆ?

**ಜೀವಿ :** ಹಳಗನ್ನಡದ ಓದಿನಿಂದ ಕನ್ನಡ ಬೆಳೆಯುತ್ತೆ ಅನ್ನೋದು ಬರೀ ಸುಳ್ಳು. ಯಾವ ಕಾರಣದಿಂದ ಈ ಮಾತು ಅವರು ಹೇಳಿದರೋ ಗೊತ್ತಿಲ್ಲ. ಏನೂ ಹಳಗನ್ನಡ ಓದದೆಯೇ ಇಂದಿನ ನಮ್ಮ ವಿದ್ಯಾರ್ಥಿಗಳು ಎಂ.ಎ. ಪಾಸ್ ಮಾಡ್ತಿದಾರೆ. ಹಳಗನ್ನಡದ್ದೇ ಬೇರೆ ಎಂ.ಎ. ಮಾಡಬೇಕೇನೋ. ಆದರೆ ಒಂದು ವಿಷಯ, ಇಂದಿನ ಆಧುನಿಕ ಕನ್ನಡವೂ ಅಷ್ಟೇ ಸಮೃದ್ಧವಾಗಿದೆ, ವೈವಿಧ್ಯಮಯವಾಗಿದೆ. ಬೆಂಗಳೂರಿನ ಕನ್ನಡ ಭಾಷೆ ನೋಡಿ ಕನ್ನಡ ಬೆಳೀತಿಲ್ಲ, ಅಂತ ದುಃಖ ಪಡಬೇಕಿಲ್ಲ. ಬೆಂಗಳೂರು ಭಾಷೆ ಮೊದಲು ಸ್ವಚ್ಛ ಆಗಬೇಕು. ಗ್ರಾಮೀಣ ಪ್ರದೇಶಗಳಲ್ಲಿ ಕನ್ನಡ ಜೀವಂತವಾಗಿದೆ.

**ಹೊಸತು :** ಇಂದು ಬಹಳಷ್ಟು ಜನ ಕಾಲೇಜು ಶಿಕ್ಷಕರೇ ಮಹಾಪ್ರಾಣದ ಬಳಕೆಯ ಬಗ್ಗೆ ವಿರೋಧ ವ್ಯಕ್ತಪಡಿಸುತ್ತಿದ್ದಾರೆ. ಕನ್ನಡಕ್ಕೆ ಅದರ ಅಗತ್ಯವಿಲ್ಲ, ಅಂತ. ಅದಕ್ಕೆ ನೀವು ಏನು ಹೇಳ್ತೀರಾ ?

**ಜೀವಿ :** ಹೌದು, ಇಂತಹ ಪ್ರವೃತ್ತಿಯೊಂದು ಈಗ ಕಂಡುಬರುತ್ತಿದೆ. ಮಹಾಪ್ರಾಣ ಬೇಡ ಅಂತ ಹೇಳೋದನ್ನು ನಾನು ಒಪ್ಪಲ್ಲ. ಕನ್ನಡದ ಸತ್ವಗಳಲ್ಲಿ ಮಹಾಪ್ರಾಣವೂ ಒಂದು. ಮಹಾಪ್ರಾಣ ಬಿಡಬೇಕು ಅನ್ನುವ ವಾದ ನಿಲ್ಲಬೇಕು. ಹಾಗಿದ್ದರೆ, ಎಷ್ಟೋ ಪ್ರಾಚೀನ ಕೃತಿಗಳನ್ನು ಓದುವುದಾದರೂ ಹೇಗೆ ? ಆಗ ಹಳಗನ್ನಡ ಸುಡಬೇಕಾಗುತ್ತದೆ.



**ಹೊಸತು :** ಲಿಪಿ ಸುಧಾರಣೆಯಾಗಬೇಕು, ಎನ್ನುವ ವಾದ ಮಂಡಿಸಿ ಕೆಲವು ಸ್ವರಗಳ ಜಾಗದಲ್ಲಿ ವ್ಯಂಜನಗಳನ್ನು ಬಳಸ್ತಾರಲ್ಲಾ, ಅದಕ್ಕೆ ಏನು ಹೇಳ್ತೀರಾ ?

**ಜೀವಿ :** ಹೌದು, ಸ್ವರಗಳ ಜಾಗದಲ್ಲಿ ವ್ಯಂಜನ ಬಳಸುವುದು, ಅಲ್ಪಪ್ರಾಣದ ಬದಲು ಮಹಾಪ್ರಾಣ ಬಳಸುವುದು ಒಪ್ಪಿತ ಅಭ್ಯಾಸವಾಗಿ ಬಳಕೆಗೆ ಬರುತ್ತಿದೆ. ಕೆಲವು ಕಾರಣಗಳಿಂದ ಎರಡು ರೂಪ ಇಟ್ಟುಕೊಳ್ಳುವುದು ಒಳ್ಳೆಯದು. ಎರಡು ರೂಪ ಇದೆ, ಎಂದು ಷರಾ ಹಾಕಿ ವ್ಯಾಕರಣದಲ್ಲಿ ಸೇರಿಸಿಬಿಡಬೇಕೇನೋ. ಈಗ ಇಂಗ್ಲಿಷಿನಲ್ಲಿ ಎರಡು ಸ್ಪೆಲ್ಲಿಂಗ್ ಇದೆ ಅನ್ನುವುದಾದರೆ, ಇದೂ ಇರಲಿ ಬಿಡಿ.

**ಹೊಸತು :** ಸರಿ, ಇಂದಿನ ಕೊಳೆತು ನಾರುತ್ತಿರುವ ರಾಜಕೀಯದ ಶುದ್ಧಿಗೆ ನಿಮ್ಮ ಸಲಹೆ ಏನು?

**ಜೀವಿ :** ಇವತ್ತಿನ ಸಂದರ್ಭ ತುಂಬ ಆತಂಕಕಾರಿಯಾಗಿದೆ. ನನಗೆ ಅನ್ನಿಸೋದು ಏನೆಂದರೆ ಯುವಜನತೆ ಬಂದು ಅಧಿಕಾರದ ನೇತೃತ್ವ ವಹಿಸಬೇಕು. ಹೊಸ ವಿಚಾರ, ಹೊಸ ಚಿಂತನೆ - ಎಲ್ಲವೂ ಮೂಡಿಬರಬೇಕಾದರೆ ಮೊದಲು ಹಿರಿಯ ತಲೆಗಳು ಕೆಳಗಿಳಿಯಬೇಕು.

**ಹೊಸತು :** ನಮ್ಮ ಪತ್ರಿಕೆಯ ಬಗ್ಗೆ ನಿಮ್ಮ ಅಭಿಪ್ರಾಯ ಏನು ?

**ಜೀವಿ :** 'ಹೊಸತು' ಶೀರ್ಷಿಕೆಯೇ ಎಷ್ಟೊಂದು ಅರ್ಥಪೂರ್ಣವಾಗಿದೆ. ಇದರ ಸಂಪಾದಕೀಯ ನನಗೆ ತುಂಬ ಇಷ್ಟ. ರಾಮಕೃಷ್ಣ ಅವರ ಸಂಪಾದಕೀಯಗಳಂತೂ ನೇರವಾಗಿರುತ್ತವೆ. ಅಚ್ಚುಕಟ್ಟಾಗಿ ಹೇಳುತ್ತಾರೆ. ಯಾವುದೇ ಹೆದರಿಕೆಯಿಲ್ಲದೆ ಬರೆಯುತ್ತಾರೆ. ಆಮೇಲೆ ಬಾಕಿ ಲೇಖನಗಳೂ ಅಷ್ಟೇ. ಭಾಷೆ ಚೆನ್ನಾಗಿದೆ. ಇಲ್ಲಿನ ಲೇಖಕರು ಹೊಸ ರೀತಿಯಲ್ಲಿ ಬರೆಯುತ್ತಾರೆ. ನಿಮ್ಮ ಪತ್ರಿಕೆ ಆಕರ್ಷಕವಾಗಿದೆ. ನಿಮ್ಮ ಪತ್ರಿಕೆಯ ಶೈಲಿಯೂ ಉಳಿದದ್ದಕ್ಕಿಂತ ಭಿನ್ನ. ಈ ಕಳೆದ ಹದಿನೈದು ವರ್ಷಗಳಲ್ಲಿ ಹೊಸ ಹೊಸ ಲೇಖಕರು ಬಂದಿದ್ದಾರೆ. ಹೊಸರೀತಿಯ, ಹೊಸತನದಲ್ಲಿ ಬರೆಯುತ್ತಿದ್ದಾರೆ, ಎನ್ನುವುದನ್ನು ಸೂಚಿಸುವ ಮಾದರಿ ಪತ್ರಿಕೆ ಇದಾಗಿದೆ. ಪತ್ರಿಕೆಗೆ ಒಳ್ಳೆಯದಾಗಲಿ.

**ಹೊಸತು :** ಸರ್, ಇಂದು ನಮ್ಮ ಪತ್ರಿಕೆಗೆ ಒಂದು ವಿಶೇಷವಾದ ದಿನ. ನೀವು ನಮ್ಮ ಕಚೇರಿಯವರೆಗೂ ಬಂದು ನಿಮ್ಮ ವಿಚಾರಗಳನ್ನು ನಮ್ಮ ಓದುಗರೊಂದಿಗೆ ಹಂಚಿಕೊಳ್ಳುತ್ತಿದ್ದೀರಲ್ಲ, ಅದಕ್ಕೆ ತುಂಬ ವಂದನೆಗಳು.

ನಮಸ್ಕಾರ.

**ಡಾ|| ಎನ್. ಗಾಯತ್ರಿ**

ನಂ. ೨೦೧, ಸ್ಕೈಲೈನ್, ಗೋಲ್ಡನ್ ರೇಸ್ ಅಪಾರ್ಟ್‌ಮೆಂಟ್ಸ್, ಛತ್ರಂ ಬ್ಲಾಕ್, ಗವೀಪುರ
ಬೆಂಗಳೂರು - ೫೬೦ ೦೧೯



# ಸ್ವತಂತ್ರ ಭಾರತದ ಪ್ರಜೆಗಳೇ...

ವಿಷ್ಣು ನಾಯ್ಕ

ಸ್ವತಂತ್ರ ಭಾರತದ ಪ್ರಜೆಗಳೇ... ಸಿಪಾಯಿ ದಂಗೆಯ (೧೮೫೭) ಸಂದರ್ಭವನ್ನು ನೆನಪು ಮಾಡಿಕೊಳ್ಳೋಣ. ಈ ದಂಗೆ ಸಂಭವಿಸುವವರೆಗೂ ಭಾರತೀಯರೆಲ್ಲ ಒಂದು ವ್ಯಾಪಾರೀ ಕಂಪೆನಿಯ ಒಡೆತನಕ್ಕೆ ಒಳಪಟ್ಟಿದ್ದರೆಂಬುದು ಕಹಿಸತ್ಯ. ಸಿಪಾಯಿ ದಂಗೆಯ ಬಿಸಿ ವಿಕ್ಟೋರಿಯ ರಾಣಿಯ ಖುರ್ಚಿಯ ತಳಕ್ಕೂ ಕಾವೇರಿಸಿದಾಗ, ಆ ಮಹಾರಾಣಿ ೧೮೫೮ರಲ್ಲಿ ಆದೇಶವೊಂದನ್ನು ಹೊರಡಿಸಿ, ಭಾರತದಲ್ಲಿಯ ಕಂಪನಿ ಆಡಳಿತವನ್ನು ಕೊನೆಗೊಳಿಸಿದಳು. ಒಂದು ಮಾರಿ ಹೋಗಿ, ಅದರ ಜಾಗೆಯಲ್ಲಿ ಇನ್ನೊಂದು ಹೆಮ್ಮಾರಿ ಬಂದಂತೆ, ಇಂಡಿಯಾದಲ್ಲಿದ್ದ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ಹೋಯಿತು, ಬ್ರಿಟಿಷ್ ಸರಕಾರದ್ದೇ ನೇರ ಆಡಳಿತ ಬಂತು! ಅಂದರೆ ಈಗ ಏನಾದಂತಾಯಿತು? ಬಾಣಲೆಯಿಂದ ಭಾರತೀಯರು ನೇರವಾಗಿ ಬೆಂಕಿಗೇ ಬಿದ್ದರು! ಇದಕ್ಕೆ ಕಾರಣಗಳು ಬೇರೆ ಬೇರೆ ಇರಬಹುದು. ಅವುಗಳಲ್ಲಿ ಒಂದು ಕಾರಣವಂತೂ ನಮ್ಮದೇ! – ಈ ದೇಶದಲ್ಲಿ ಆರ್ಥಿಕವಾಗಿ ಬಲಿಷ್ಠರಾದ ಒಂದಷ್ಟು ಸ್ವಾರ್ಥ ಸಾಧಕರು ಮೊದಲಿನಿಂದಲೂ ಬ್ರಿಟಿಷ್ ಆಡಳಿತಕ್ಕೆ ಪರವಾಗಿ ವರ್ತಿಸುತ್ತಿದ್ದರೆಂಬುದು ಸತ್ಯ! ಆಶ್ಚರ್ಯವೆಂದರೆ ಅಂದಿನ ಅಗತ್ಯವಾಗಿದ್ದ ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಥಾಪನೆಗೆ ಕೂಡ ಹಲವು ಬೆರಕಿ ಭಾರತೀಯರ ವಿರೋಧವಿತ್ತು. ಅದು ಪ್ರತ್ಯಕ್ಷವಾಗಿ ಕಾಣುತ್ತಿರಲಿಲ್ಲ, ಪರೋಕ್ಷವಾಗಿತ್ತು, ಅಷ್ಟೆ. ಬ್ರಿಟಿಷ್ ಅಧಿಕಾರಿಗಳಲ್ಲೇ ಅತ್ಯಂತ ಸುಧಾರಣಾವಾದಿಯೆನಿಸಿದ್ದ ಎ. ಒ. ಹ್ಯೂಮ್ ಅವರ ದಿಟ್ಟ ನಿಲುವು ಮತ್ತು ನಿರಂತರ ಪ್ರಯತ್ನದಿಂದಾಗಿ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಥಾಪನೆ (೧೮೮೫) ಸಾಧ್ಯವಾಗಿದ್ದು. ಈ ವೇದಿಕೆಯೇ ಮುಂದೆ ೧೯೪೭ರವರೆಗೆ ಈ ದೇಶದ ಬಿಡುಗಡೆಗೆ ಸಂಬಂಧಪಟ್ಟ ಎಲ್ಲ ಹೋರಾಟಗಳು ಚಿಂತನ ಕಮ್ಮಟವಾಗಿ ನಿಂತದ್ದು, ನಮ್ಮವರ-ಹೊರಗಿನವರ ತಪ್ಪು-ಒಪ್ಪುಗಳ ಮುಕ್ತ ಚರ್ಚೆಗೆ ವೇದಿಕೆಯಾದದ್ದು.

ಈ ಬರವಣಿಗೆಯ ಉದ್ದೇಶ ಭಾರತದ ಸ್ವಾತಂತ್ರ್ಯ ಹೋರಾಟದ ಚರಿತ್ರೆಯ ಸುರುಳಿ ಬಿಚ್ಚಿಡುವುದಲ್ಲ; ಲೋಕದ ಕಣ್ಣಿಗೆ ಸ್ವತಂತ್ರ ಭಾರತದ ಪ್ರಜೆಗಳಾದ ನಾವು ವಾಸ್ತವದಲ್ಲಿ ಸ್ವಾತಂತ್ರ್ಯದ ನಿಜ ನಿರೀಕ್ಷೆಗಳ ಸವಿಫಲವನ್ನು ಅನುಭವಿಸುತ್ತಿದ್ದೇವೆಯೇ, ಎಂಬುದನ್ನು ಸಂಕ್ಷಿಪ್ತವಾಗಿ ಪುನರ್ವಿಮರ್ಶೆಗೆ ಒಡ್ಡುವ ಪುಟ್ಟ ಪ್ರಯತ್ನ ಇಲ್ಲಿದೆ. ಆಗಸ್ಟ್ ೧೫ರಂದು ಮತ್ತು ಜನವರಿ ೨೬ರಂದು ಭಾರತದ ತ್ರಿವರ್ಣಧ್ವಜಕ್ಕೆ ರಾಷ್ಟ್ರದುದ್ದಗಲ ಸಿಗಬೇಕಾದ ಗೌರವ ಈಗ ಸಿಗುತ್ತಿದೆ. ದೇಶದ ಮತ್ತು ರಾಜ್ಯಗಳ ಆಡಳಿತ ಕೇಂದ್ರಗಳಲ್ಲಿ ಕೂಡ ನಮ್ಮ ರಾಷ್ಟ್ರದ ಲಾಂಛನಗಳಿಗೆ ಸಲ್ಲಬೇಕಾದ ಗೌರವ ನಿತ್ಯ-ನಿರಂತರ ಸಲ್ಲುತ್ತಿದೆ. ಇವೆಲ್ಲವೂ ಭೌತಿಕ ಸತ್ಯಗಳು. ಒಂದಷ್ಟು ಭಾವನಾತ್ಮಕ ಸತ್ಯವೂ ಕೂಡ.

ಆದರೆ ಇವುಗಳಾಚೆಯ ಒಂದು ಸತ್ಯ ಬೇರೆಯೇ ಇದೆ. ನಮ್ಮ ರಾಷ್ಟ್ರಕವಿ ಕುವೆಂಪು ಅವರು ಈ ನೆಲದ ರೈತನ ಕಣ್ಣಿಂದ ಭಾರತದ ಸ್ವಾತಂತ್ರ್ಯವನ್ನು ನೋಡಿ ಬರೆದ ಮಾತೊಂದಿದೆ :

*ಕತ್ತಿ ಪರದೇಶಿಯಾದರೆ ಮಾತ್ರ ನೋವೇ ?*
*ನಮ್ಮವರೇ ಹದಹಾಕಿ ತಿವಿದರದು ಹೂವೇ ?*

– ಈ ಸ್ವತಂತ್ರ ದೇಶದಲ್ಲಿ ಈ ಪ್ರಶ್ನೆಗೆ ಸಮರ್ಪಕ ಉತ್ತರವನ್ನು ಕಂಡುಕೊಳ್ಳಲು ಕಳೆದ ೬೦ ವರ್ಷಗಳಲ್ಲಿ ನಮ್ಮಿಂದ ಆಗಿಲ್ಲ. ಇದಕ್ಕೆ ಯಾರು ಹೊಣೆ ?... – ಹಾಗೆ ನೋಡಿದರೆ ನಮ್ಮನ್ನಾಳುವವರ ದಿನಚರಿಯಂತೂ ನೇಗಿಲ ಯೋಗಿಯ ನೆನಪಿನೊಂದಿಗೆ ಆರಂಭವಾಗಿ ಮುಕ್ತಾಯವೂ ಅವನ ಹೆಸರು ಹೇಳಿಯೇ ಆಗುತ್ತದೆ. ಆದರೆ ರೈತನ ಬಗ್ಗೆ, ಬಡವರ ಬಗ್ಗೆ ಇಷ್ಟೆಲ್ಲಾ ಸಹಾನುಭೂತಿಯುಳ್ಳ ದೇಶದಲ್ಲಿ, ರೈತನಿಗಾಗಿಯೇ ಪ್ರತ್ಯೇಕ ಬಜೆಟ್ ಮಂಡಿಸುವ ರಾಜ್ಯಗಳಿರುವಲ್ಲಿ ರೈತ ಇಂದು ಯಾವ ಹಂತಕ್ಕೆ ಬಂದು ನಿಂತಿದ್ದಾನೆ ಗೊತ್ತೇ ? 'ಹಾಳಾಗಲಿ ಈ ಮನೆ-ಮಠವೆಲ್ಲ' ಅಂದುಕೊಂಡು ಸದ್ದಿಲ್ಲದೆ, ಸುದ್ದಿಮಾಡದೆ ಬೆಳೆಗಳಿಗೆಂದು ತಂದ ಔಷಧಿಯನ್ನು ತಾನೇ ಕುಡಿದು ಕಾಲಾಧೀನನಾಗಿಬಿಡುತ್ತಾನೆ. ಮತ್ತೆ ಕೆಲವರು ಇರುವ ಜಮೀನನ್ನು ಯಾರ್ಯಾರಿಗೋ ಮಾರಾಟ ಮಾಡಿ ತಾವೇ ಹುಟ್ಟಿ ಬೆಳೆದ ಹಳ್ಳಿಬದುಕಿಗೆ ಬೆನ್ನು ತಿರುಗಿಸಿ ನಿಂತಿದ್ದಾರೆ !

ಈ ದೇಶದಲ್ಲಿ ಶೇಕಡ ೨೨ಕ್ಕಿಂತ ಹೆಚ್ಚು ದಲಿತ ಸಮುದಾಯವಿದೆ. ಇತ್ತೀಚೆಗೆ ಅಕ್ಷರಗಳನ್ನು ಅರಗಿಸಿಕೊಂಡು ಸುಧಾರಣೆಗೆ ಒಳಗಾದ ದಲಿತರ ವಿಚಾರ ಬಿಡೋಣ; ಅವರ ಸಂಖ್ಯೆ ಪ್ರತಿಶತ ಎರಡಕ್ಕಿಂತ ಹೆಚ್ಚಿರದು ಅಂದುಕೊಂಡಿದ್ದೇನೆ. ಬಹುಪಾಲು ದಲಿತರ ಬದುಕು ಹೇಗಿದೆ ಎಂಬುದನ್ನು ಇತ್ತೀಚೆಗೆ ಪ್ರಜಾವಾಣಿಯಲ್ಲಿ (ಏಪ್ರಿಲ್ ೧೪) ದೇವನೂರ ಮಹಾದೇವ ಅವರು ತುಂಬ ಧ್ವನಿಪೂರ್ಣವಾಗಿ ಚಿತ್ರಿಸಿದ್ದು ಹೀಗೆ :

*''ಭಾರತ ಗಾಯಗೊಂಡು ಬಿದ್ದಿದೆ. ಆದರ 'ಗಾಯ' ಅದಕ್ಕೆ 'ಗಾಯ' ಅನಿಸುತ್ತಿಲ್ಲ. ಅಸ್ಪೃಶ್ಯತೆ, ಜಾತಿ-ಮತೀಯತೆಯ ಗಾಯ ನಂಜಾಗಿ ಮಿದುಳಿಗೇರಿ ಭಾರತ ಹುಚ್ಚಾಗಿದೆ. ಈ ಗಾಯವನ್ನೇ, ಈ ಹುಚ್ಚನ್ನೇ ಸಮಾಜದಲ್ಲಿ 'ಸಂಸ್ಕೃತಿ' ಅಂತ, 'ಪರಂಪರೆ' ಅಂತ ಬಿಂಬಿಸಲಾಗಿದೆ. ಸಮಾಜವೂ ಹಾಗೇ ನಂಬಿಕೊಂಡಿದೆ. ಇಲ್ಲಿ ಹುಟ್ಟಿದ ವ್ಯಕ್ತಿಯ ಶಕ್ತಿ-ಸಾಮರ್ಥ್ಯದ ಅರ್ಧದಷ್ಟು ಭಾಗ ಈ ಹುಚ್ಚಿನೊಡನೆ ಹೆಣಗಿ ಸುಸ್ತಾಗುತ್ತಿದೆ.''*

ರಾಜಕೀಯ ಸ್ವಾತಂತ್ರ್ಯ ನಮ್ಮ ಕೈಗೆ ಬಂದು ೬೦ ವರ್ಷಗಳೇ ಕಳೆದುಹೋದವು. 'ಕಳೆದು ಹೋದವು' ಎಂಬ ಪದವನ್ನು ನಾನಿಲ್ಲಿ ಉದ್ದೇಶಪೂರ್ವಕವಾಗಿ ಬಳಸುತ್ತಿದ್ದೇನೆ. ಯಾವ ಸಮುದಾಯವನ್ನು 'ಗಾಯಗೊಂಡು ಮಲಗಿದ ವ್ಯವಸ್ಥೆಯ ಭಾಗ'ವೆಂದು ದೇವನೂರು ಹೇಳುತ್ತಾರೋ ಆ ಅದೇ ದಲಿತ ಸಮುದಾಯದ ಬಗ್ಗೆ ವಿಶೇಷ ಗಮನ ಕೊಡಲೆಂದೇ ಕೇಂದ್ರದಲ್ಲೂ, ರಾಜ್ಯಗಳಲ್ಲೂ ಸಮಾಜ ಕಲ್ಯಾಣ ಇಲಾಖೆಗಳಿವೆ. ಈ ವರ್ಗಕ್ಕಾಗಿ ಆ ಇಲಾಖೆಗಳಿಗೆ ಪ್ರತಿವರ್ಷ ಶೇಕಡ ೨೨ಕ್ಕಿಂತ ಹೆಚ್ಚು ಹಣವನ್ನು ಬಜೆಟ್ಟುಗಳಲ್ಲಿ ಮೀಸಲಿಡಲಾಗುತ್ತದೆ. ಸಮಾಜದ ಮುಖ್ಯವಾಹಿನಿಗೆ ಈ ದಮನಿತ ವರ್ಗ ಬರಬೇಕೆಂಬುದು ಯೋಜನೆ ರೂಪಿಸುವವರ ಮುಖ್ಯ ಕಾಳಜಿಯಾಗಿರುತ್ತದೆ. ಆದರೆ ನಿಜದಲ್ಲಿ ಇವರು ಇಂದು, ಅಂದರೆ ಸ್ವತಂತ್ರ ಭಾರತ ಸುವರ್ಣಮಹೋತ್ಸವ ಕಂಡಮೇಲೂ ಮುಖ್ಯವಾಹಿನಿಗೆ ಬಂದಿದ್ದಾರೆಯೇ ?... ಗ್ರಾಮೀಣ ಭಾರತವೇ ಇಂಡಿಯಾದ ನಿಜಶಕ್ತಿ ಎಂದು ನಾವು ಹೇಳುತ್ತೇವೆ. ನಮ್ಮ ಯೋಜನಾ ಆಯೋಗಗಳ ನಿಲುವೂ ಅದೇ ಆಗಿದೆ. ನಿಜದಲ್ಲಿ ಇಂದು ಗ್ರಾಮೀಣ ಭಾರತದ ಸ್ಥಿತಿಗತಿ ಹೇಗಿದೆ ಎಂಬುದರ ಒಂದು ಸರ್ವೇಕಾರ್ಯ - ನಿರ್ದಿಷ್ಟವೂ ನಿರ್ದುಷ್ಟವೂ ಆದ ಸರ್ವೇಕಾರ್ಯ ನಡೆದಲ್ಲಿ ಉಂಡುಟ್ಟು ಸುಖವಾಗಿ ಮಲಗುತ್ತಿರುವ ಭಾರತೀಯರೆಲ್ಲರೂ ನಾಚಿಕೆಯಿಂದ ತಲೆ ತಗ್ಗಿಸಬೇಕಾದ ಚಿತ್ರಣಗಳು ಹೊರಬಂದಾವು. ಇಂದಿಗೂ ಮುಕ್ಕಾಲುವಾಸಿ ದಲಿತ ಹೆಣ್ಣುಮಕ್ಕಳು ಹಗಲು ಸರಿದು ಕತ್ತಲಾವರಿಸುವವರೆಗೆ ನಮ್ಮ ಹಳ್ಳಿ ಭಾಗಗಳಲ್ಲಿ ಮಲವಿಸರ್ಜನೆಗೆ ಹೋಗುತ್ತಿಲ್ಲ ಎಂದರೆ ನಂಬುತ್ತೀರಾ ?... ಶೌಚಾಲಯದ ಸೌಲಭ್ಯ ಇರುವ ಮನೆಗಳೆಷ್ಟು? ಇಲ್ಲದವರ ಮನೆಗಳೆಷ್ಟು? – ಎಂಬ ಬಗ್ಗೆ ಪ್ರಾಮಾಣಿಕವಾದ ಸಮೀಕ್ಷೆ ನಡೆದಲ್ಲಿ ಸರಕಾರದಿಂದ ಈ ಉದ್ದೇಶಕ್ಕಾಗಿಯೇ ಹರಿದುಬಂದ ದುಡ್ಡು ಯಾವ ಉಸುಕಿನ ರಾಜ್ಯದಲ್ಲಿ ಇಂಗಿಹೋಯಿತು

ಈ ಬರವಣಿಗೆಯ ಉದ್ದೇಶ ಭಾರತದ ಸ್ವಾತಂತ್ರ್ಯ ಹೋರಾಟದ ಚರಿತ್ರೆಯ ಸುರುಳಿ ಬಿಚ್ಚಿಡುವುದಲ್ಲ; ಲೋಕದ ಕಣ್ಣಿಗೆ ಸ್ವತಂತ್ರ ಭಾರತದ ಪ್ರಜೆಗಳಾದ ನಾವು ವಾಸ್ತವದಲ್ಲಿ ಸ್ವಾತಂತ್ರ್ಯದ ನಿಜನಿರೀಕ್ಷೆಗಳ ಸವಿಫಲವನ್ನು ಅನುಭವಿಸುತ್ತಿದ್ದೇವೆಯೇ, ಎಂಬುದನ್ನು ಸಂಕ್ಷಿಪ್ತವಾಗಿ ಪುನರ್ವಿಮರ್ಶೆಗೆ ಒಡ್ಡುವ ಪುಟ್ಟ ಪ್ರಯತ್ನ ಇಲ್ಲಿದೆ. ಆಗಸ್ಟ್ ೧೫ರಂದು ಮತ್ತು ಜನವರಿ ೨೬ರಂದು ಭಾರತದ ತ್ರಿವರ್ಣಧ್ವಜಕ್ಕೆ ರಾಷ್ಟ್ರದುದ್ದಗಲ ಸಿಗಬೇಕಾದ ಗೌರವ ಈಗ ಸಿಗುತ್ತಿದೆ. ದೇಶದ ಮತ್ತು ರಾಜ್ಯಗಳ ಆಡಳಿತ ಕೇಂದ್ರಗಳಲ್ಲಿ ಕೂಡ ನಮ್ಮ ರಾಷ್ಟ್ರದ ಲಾಂಛನಗಳಿಗೆ ಸಲ್ಲಬೇಕಾದ ಗೌರವ ನಿತ್ಯ-ನಿರಂತರ ಸಲ್ಲುತ್ತಿದೆ. ಇವೆಲ್ಲವೂ ಭೌತಿಕ ಸತ್ಯಗಳು. ಒಂದಷ್ಟು ಭಾವನಾತ್ಮಕ ಸತ್ಯವೂ ಕೂಡ.
ಆದರೆ ಇವುಗಳಾಚೆಯ ಒಂದು ಸತ್ಯ ಬೇರೆಯೇ ಇದೆ.







ಎಂಬುದು ಗೊತ್ತಾದೀತು. ದಾಖಲೆಗಳಲ್ಲಿ ದಲಿತರಿಗೆ ಮನೆಗಳಿವೆ. ಬಡವರಿಗೆ ಗುಡಿಸಲುಗಳಿವೆ. ರಸ್ತೆ, ನೀರು, ಬೆಳಕು ಎಲ್ಲವೂ ಇವೆ. ಆ ಸ್ಥಳಗಳಿಗೆ ಹೋಗಿ ನೋಡಿದರೆ ಸಿಗಬಹುದಾದ ಚಿತ್ರಣವೇ ಬೇರೆ. ಗಂಡಸರು-ಮಕ್ಕಳು ರಸ್ತೆಯ ಇಕ್ಕೆಲಗಳನ್ನೇ ಶೌಚಾಲಯಗಳನ್ನಾಗಿ ಮಾರ್ಪಡಿಸಿಕೊಳ್ಳುತ್ತಿದ್ದಾರೆ ! ಗ್ರಾಮೀಣ ನೈರ್ಮಲ್ಯ ಯೋಜನೆಗಳು ನೂರಕ್ಕೆ ನೂರು ಅನುಷ್ಠಾನಗೊಂಡ ದಾಖಲೆಯಿರುವ ಹಳ್ಳಿಗಳಲ್ಲೂ ಈ ಚಿತ್ರಣವಿದೆ.

ಈ ದೇಶದಲ್ಲಿ ಇಂದು ೫೦ ಕೋಟಿಗೆ ಕಡಿಮೆ ಇಲ್ಲದಷ್ಟು ಯುವಕರಿದ್ದಾರೆ. ಇವರಲ್ಲಿ ಹೆಚ್ಚಿನವರು ಅಕ್ಷರದ ಬೆಳಕನ್ನು ಕಂಡವರು; ಆದರೆ ಅನುಭವಿಸಿದವರಲ್ಲ. ಯಾಕೆಂದರೆ ಅವರಲ್ಲಿ ಶೇಕಡ ೭೫ರಷ್ಟು ಮಂದಿ ಇಂದಿಗೂ ಉದ್ಯೋಗ ವಂಚಿತರು ! ಈ ಉದ್ಯೋಗ ವಂಚಿತತನಕ್ಕೆ ಅವರ ಕುಟುಂಬದ ಹಿರಿಯರ ತೀರ್ಮಾನಗಳೂ ಸೇರಿದಂತೆ ಹಲವಾರು ಕಾರಣಗಳಿವೆ. ನಾನು ಕೇಳುವುದು ಕೇವಲ ಜೆ.ಓ.ಸಿ. ಪದವೀಧರರ ಬಗ್ಗೆ. ಯಾವುದೇ ಒಂದು ಸ್ವತಂತ್ರ ದೇಶದಲ್ಲಿ ಯೋಜನೆ ರೂಪಿಸುವಾಗ, ಜಾಬ್ ಓರಿಯೆಂಟೆಡ್ ಕೋರ್ಸ್‌ಗಳಿಗೆ ಸೌಲಭ್ಯವನ್ನು ಕಲ್ಪಿಸುವಾಗ, ಅಂದರೆ ತರಬೇತಿಯ ಕೇಂದ್ರಗಳನ್ನು ಆರಂಭ ಮಾಡುವಾಗ ತನ್ನ ದೇಶಕ್ಕೆ ಸದ್ಯ ಬೇಕಾಗಿರುವ ವೃತ್ತಿ ತರಬೇತಿದಾರರು ಎಷ್ಟು? ಯಾವ ಯಾವ ವಿಭಾಗಕ್ಕೆ ಎಷ್ಟು? – ಎಂಬ ಬಗ್ಗೆ ಒಂದು ಸ್ಪಷ್ಟವಾದ ಅಂದಾಜು ಇರಲೇಬೇಕು. ನನಗೆ ತಿಳಿದಂತೆ ಈ ವಿಚಾರದಲ್ಲಿ ಭಾರತದಷ್ಟು ಬೇಜವಾಬ್ದಾರಿತನ ಬೇರೆಲ್ಲೂ ಕಾಣಸಿಗದು. ಒಂದು ತಾಂತ್ರಿಕ ಕಾಲೇಜಿನಲ್ಲಿ, ಒಂದು ಮೆಡಿಕಲ್ ಕಾಲೇಜಿನಲ್ಲಿ, ಒಂದು ಡಿಪ್ಲೋಮಾ ಕೇಂದ್ರದಲ್ಲಿ, ಬಿ.ಎಡ್., ಡಿ.ಎಡ್. ಕೇಂದ್ರಗಳಲ್ಲಿ ಎಷ್ಟು ಜನರಿಗೆ ಉದ್ಯೋಗ ನೀಡಲು ಸಾಧ್ಯವೋ ಅಷ್ಟೇ ಸೀಟುಗಳನ್ನು ಮೀಸಲಿಡಬೇಕು. ಆಯಾ ವೃತ್ತಿ ತರಬೇತಿ ಮುಗಿಸಿದ ಮರುದಿನವೇ ಅವರ ಕೈಗೆ ಕೆಲಸ ಸಿಗಬೇಕು. ಆದರೆ ಇಂದು ಈ ದೇಶದಲ್ಲಿ ನಡೆಯುತ್ತಿರುವುದೇನು ? ವೃತ್ತಿ ತರಬೇತಿ ಪಡೆದಂಥ ಒಂದು ಇಲಾಖೆಯ ೫೦ ಸಾವಿರದಷ್ಟು ಜನ ಇಂದು ಉದ್ಯೋಗಕ್ಕಾಗಿ ಕ್ಯೂ ನಿಂತಿದ್ದಾರೆ. ಅವರ ವೃತ್ತಿ ಕೌಶಲ್ಯವನ್ನು ಬಳಸಿಕೊಳ್ಳುವಲ್ಲಿ ಸೋತ ವ್ಯವಸ್ಥೆಯೇ ಬೇಕಾಬಿಟ್ಟಿಯಾಗಿ ಹೊಸ ಹೊಸ ಕಾಲೇಜುಗಳನ್ನು, ತರಬೇತಿ ಕೇಂದ್ರಗಳನ್ನು ತೆರೆಯುತ್ತಿದೆ. ನಿರುದ್ಯೋಗಿಗಳನ್ನು ಹಡೆಯುವ ಕೇಂದ್ರಗಳಾಗಿ ಇಂದು ಜೆ.ಓ.ಸಿ. ಕೇಂದ್ರಗಳು ಮಾರ್ಪಟ್ಟಿವೆ. ಇನ್ನು ಜನರಲ್ ಎಜುಕೇಷನ್ ಪಡೆದವರ ಕಥೆ ಯಾರಿಗೂ ಬೇಡ. ಅವರ ಮನಸ್ಸಿನಲ್ಲಿ ತಾನು ಶಿಕ್ಷಣ ಪಡೆದದ್ದು ಕೇವಲ ನೌಕರಿಗಾಗಿ ಎಂಬ ನಂಬಿಕೆಯ ಬೀಜ ಬಿತ್ತಲಾಗಿದೆ. ಓದಿದವರಿಗೆಲ್ಲ ನೌಕರಿ ಸಾಧ್ಯವಿಲ್ಲ. ಅವರವರ ಕ್ಷೇತ್ರಗಳಲ್ಲಿ ಪರಿಣತಿ ಪಡೆಯುವುದಕ್ಕಾಗಿ, ಸ್ವಂತ ಕಾಲಮೇಲೆ ನಿಲ್ಲಬಲ್ಲ ಆತ್ಮವಿಶ್ವಾಸ ಬೆಳೆಸಿಕೊಳ್ಳುವುದಕ್ಕಾಗಿ ಎಂಬುದನ್ನು ಬಿಂಬಿಸುವಲ್ಲಿ ನಮ್ಮ ಪಠ್ಯಕ್ರಮವೂ ಸೋತುಹೋದಂತಿದೆ. ಹೀಗಾಗಿ ಶಿಕ್ಷಣ ಪಡೆಯುವುದು ಪ್ರತಿಯೊಬ್ಬನ ಮೂಲಭೂತ ಹಕ್ಕಾಗಿರುವ ಈ ಸಂದರ್ಭದಲ್ಲಿ ಇಂದು ನಮ್ಮ ಸುಶಿಕ್ಷಿತ ಹೊಸ ತಲೆಮಾರು ಶಿಕ್ಷಣ ಪಡೆದ ಕಾರಣಕ್ಕಾಗಿ ಕುಟುಂಬದ ಪರಂಪರೆಯ ಕೆಲಸ ಕಾರ್ಯಗಳಿಗೆಲ್ಲ ಬೆನ್ನು ತಿರುಗಿಸಿದ ಪ್ರಯುಕ್ತ ಪ್ರತಿ ಹಳ್ಳಿಗಳಲ್ಲೂ ಹತಾಶ ಮನಸುಗಳ ಶೋಚನೀಯ ಕತೆಗಳು ಕಣ್ಣಿಗೆ ರಾಚುತ್ತವೆ.



ಅಂಬೇಡ್ಕರ್ ಹೇಳಿದ್ದರು : **ಶ್ರೀಮಂತರ ಸಿರಿತನವು ದರಿದ್ರರ ಬಡತನದಲ್ಲಿದೆ** ಎಂದು ! ಒಂದು ಮನೆಯಲ್ಲಿ ಇಂದು ಹೊಸದಾಗಿ ಹುಟ್ಟುವ ಭಾರತೀಯ ಮಗು ತನ್ನದಲ್ಲದ ತಪ್ಪಿಗಾಗಿ ೫ ಸಾವಿರ ರೂಪಾಯಿ ಸಾಲವನ್ನು ಹುಟ್ಟುವಾಗಲೇ ತನ್ನ ತಲೆಯ ಮೇಲೆ ಹೊತ್ತುಕೊಳ್ಳುವಂತಾದುದು ಯಾರಿಂದಾಗಿ, ಎಂಬ ಪ್ರಶ್ನೆಗೆ ಉತ್ತರ ಬೇಕಿದ್ದರೆ, ಅಂಬೇಡ್ಕರರ ಮೇಲಿನ ಹೇಳಿಕೆಯ ಬಗ್ಗೆ ವಿಸ್ತೃತ ಚರ್ಚೆ ನಡೆಯಬೇಕಾಗುತ್ತದೆ. ರಾಜಕೀಯದಲ್ಲಿ ಧರ್ಮ ಬೆರೆಸಬಾರದು ಎಂದು ಹೇಳುತ್ತದೆ ನಮ್ಮ ಸಂವಿಧಾನ. ರಾಜಕೀಯದಲ್ಲಿ ಜಾತಿಯನ್ನು ತರಬಾರದು ಎಂದೂ ಅದು ಹೇಳುತ್ತದೆ. ಆದರೆ ಇವೆರಡೇ ಇಂದು ಪ್ರಮುಖವಾಗಿ ಈ ದೇಶದ ಎಲ್ಲ ರಾಜ್ಯಗಳ ಚುನಾವಣೆಗಳಲ್ಲಿ ಪ್ರಧಾನ ಪಾತ್ರ ವಹಿಸುತ್ತಿರುವುದನ್ನು ವಿವೇಕಿಗಳಾದವರು ಅಲ್ಲಗಳೆಯಲಾರರು. ಇವೆರಡರ ಜೊತೆಗೆ ದುಡ್ಡಿನ ಬಲವೂ ಸೇರಿ ಚುನಾವಣೆ ಎಂಬುದು ಶಕ್ತಿಪ್ರದರ್ಶನದ ಸ್ಪರ್ಧೆಯಾಗಿದೆ.

ಹೀಗೆ ಹತ್ತು ಹಲವು ಮುಳ್ಳುಗಳ ಮಂಚದ ಮೇಲೆ ಭಾರತದ ಜನತಂತ್ರ ವ್ಯವಸ್ಥೆ ನೋವನ್ನು ಅನುಭವಿಸುತ್ತ ಮಲಗಿದ ಚಿತ್ರಣ ಕಣ್ಮುಂದೆ ಬರುತ್ತದೆ. ಇಷ್ಟೆಲ್ಲ ಗೋಜಲುಗಳ ಮಧ್ಯೆಯೂ ನಾನು ಆಶಾವಾದಿಯಾಗಿದ್ದೇನೆ. ನಮ್ಮ ಸುಶಿಕ್ಷಿತ ವರ್ಗ ಇಂದು ಅವರನ್ನು ಆವರಿಸಿರುವ ಭ್ರಮಾಲೋಕದಿಂದ ನಿಸ್ಸಂದೇಹವಾಗಿಯೂ ಹೊರಗೆ ಬಂದೇ ಬರುತ್ತಾರೆ ಎಂಬ ನಂಬಿಕೆ ನನ್ನದು. ವಿಶೇಷವಾಗಿ ವಾಸ್ತವವನ್ನು ಜೀರ್ಣಿಸಿಕೊಳ್ಳಲು ಯಶಸ್ವಿಯಾದ ಯುವಕ-ಯುವತಿಯರು ಇಂದಲ್ಲ ನಾಳೆ ಈಗಿರುವ ಅನಿಷ್ಟ ಪರಂಪರೆಗಳನ್ನು ಮೆಟ್ಟಿ ನಿಲ್ಲುತ್ತಾರೆ. ಬಹುರಾಷ್ಟ್ರೀಯ ಕಂಪನಿಗಳ ವ್ಯಾಮೋಹದಿಂದ, ಜಾಗತೀಕರಣವೆಂಬ ಮಾಯಾಜಾಲದಿಂದ ಬಿಡಿಸಿಕೊಳ್ಳುತ್ತಾರೆ. ಪಶ್ಚಿಮವನ್ನು ಮರೆತು ಪೂರ್ವಕ್ಕೆ ಮುಖ ಮಾಡುತ್ತಾರೆ. ಭಾರತವನ್ನು ಅತ್ಯಂತ ಹಿತವಾಗಿ ವಂಚಿಸುತ್ತಿರುವ ಪಾಶ್ಚಾತ್ಯ ರಾಷ್ಟ್ರಗಳಿಗೆ ಸೆಡ್ಡು ಹೊಡೆದು ಈ ನೆಲದಲ್ಲೇ ನಿಂತು ಈ ದೇಶವನ್ನು ಮತ್ತೆ ಕಟ್ಟುತ್ತಾರೆ. ಏನಂತೀರಿ ?...

**ವಿಷ್ಣು ನಾಯ್ಕ**
'ಪರಿಮಳ', ಅಂಬಾರಕೊಡ್ಲ, ಅಂಕೋಲಾ - ೫೮೧ ೩೧೪ ಉತ್ತರ ಕನ್ನಡ ಜಿಲ್ಲೆ




# ಸಂಜೆಗೊಂದು ಮುಂಜಾವಿಗೊಂದು - ಜೋಡಿಗಳು

ಆಗಸ್ಟ್ ಎಂದೊಡನೆ ಪರ್ಸೈಯೈಡ್ ಉಲ್ಕಾವೃಷ್ಟಿ ನೆನಪಾಗುವುದು. ಅಂದರೆ ೯ರಿಂದ ೧೩ರವರೆಗೂ 'ಬೆಂಕಿ ಮಳೆ' ಸುರಿಸುವುದು. ಸ್ವಿಫ್ಟ್-ಟಟಲ್ ಎಂಬ ಧೂಮಕೇತು ಬಿಟ್ಟುಹೋದ ಈ ಕಣಗಳು ಪ್ರತಿವರ್ಷ ಭೂಮಿಯ ಮೇಲೆ ಇದೇ ತಾರೀಖುಗಳಲ್ಲಿ ಸುರಿಯುವುವು. ಗಂಟೆಗೆ ೬೦ಕ್ಕೂ ಹೆಚ್ಚು ಉಲ್ಕೆಗಳು ಕಾಣುವ ಸಂಭವವಿರುತ್ತದೆ. ೧೨ರಂದು ಗರಿಷ್ಠ ಮುಟ್ಟುತ್ತದೆ. ಈ ಬಾರಿ ಮಧ್ಯರಾತ್ರಿಯ ನಂತರ ಉದಯಿಸುವ ಚಂದ್ರನ ಬೆಳಕು ಅಷ್ಟೇನೂ ಅಡ್ಡಿಪಡಿಸುವುದಿಲ್ಲ. ಆದ್ದರಿಂದ ಮೋಡಗಳು ಬಿಡುವು ಕೊಟ್ಟರೆ ಒಳ್ಳೆಯ ನೋಟ ದೊರಕಲಿದೆ. ಇದರ ವೀಕ್ಷಣೆಗೆ ಪೂರ್ವ ಸಿದ್ಧತೆ ಏನೂ ಬೇಕಿಲ್ಲ. ಬೆಳಗಿನ ಜಾವ ತಾರಸಿಗೆ ಹೋಗಿ ಚಾಪೆಯ ಮೇಲೆ (ಕಣ್ಣು ಬಿಟ್ಟುಕೊಂಡು) ಅಡ್ಡಾದರೆ ಸಾಕು. ದುರ್ಬೀನು, ದೂರದರ್ಶಕ ಏನೂ ಬೇಕಿಲ್ಲ. ಫೋಟೋ ತೆಗೆಯುವವರೆಗೂ ಇದು ಕಷ್ಟವೇ. ಏಕೆಂದರೆ ಒಂದೊಂದು ಕಾಣಿಸಿಕೊಂಡು ಆಟವಾಡಿಸುತ್ತವೆ. ಫಿಷ್-ಐ ಲೆನ್ಸ್ ಇರುವವರು ಕ್ಯಾಮರಾ ತೆರೆದಿಟ್ಟು ತಮ್ಮ ವೀಕ್ಷಣೆ ಮುಂದುವರೆಸಿಕೊಂಡರೆ ಒಳ್ಳೆಯದು.

ಈ ತಿಂಗಳಲ್ಲಿ ಐದೂ ಗ್ರಹಗಳನ್ನು ನೋಡುವ ಅವಕಾಶವಿದೆ. ಅಷ್ಟೇ ಅಲ್ಲ, ಅವು ಜೊತೆಗೂಡುವುದನ್ನೂ ನೋಡಬಹುದು. ಸಂಜೆಯ ಆಕಾಶದಲ್ಲಿ ತಿಂಗಳ ಆರಂಭದಲ್ಲಿ ಒಂದೇ ಸರಳರೇಖೆಯ ಮೇಲಿಟ್ಟ ಚುಕ್ಕೆಗಳಂತೆ ಮಂಗಳ, ಶನಿ ಮತ್ತು ಚಿತ್ರಾ ನಕ್ಷತ್ರ ಕಾಣುವುವು. ತಿಂಗಳ ಕೊನೆಗೆ ಮಂಗಳ ಮುಂದೆ ಸರಿಯುವ ಕಾರಣ ಪುಟ್ಟ ತ್ರಿಕೋಣದಂತೆ ಕಾಣುವುವು. ೨೨ರಂದು ಚಂದ್ರನೂ ಈ ಗುಂಪಿಗೆ ಸೇರುವನು.

ಬೆಳಗಿನ ಜಾವದಲ್ಲಿ ಗುರು ಮತ್ತು ಶುಕ್ರ ಜೋಡಿಯಾಗುವುವು. ಪಕ್ಕದಲ್ಲಿ ರೋಹಿಣಿ ನಕ್ಷತ್ರವೂ ಇರುವುದರಿಂದ ಈ ಗುಂಪು ವೈವಿಧ್ಯ ಆಕಾರದ ತ್ರಿಕೋಣಗಳಾಗಿ ಮಾರ್ಪಡುವುದನ್ನು ಪ್ರತಿ ಮುಂಜಾವಿನಲ್ಲೂ ಗಮನಿಸಬಹುದು.

೧೧ರಂದು ಚಂದ್ರ ಗುರುಗ್ರಹವನ್ನು ಹಾದುಹೋಗುವ ಆಚ್ಛಾದನೆ ನಡೆಯಲಿದೆ. ಈ ಘಟನೆ ನಮಗೆ ಕಾಣುವುದಿಲ್ಲ. ಆದರೆ, ಮಧ್ಯರಾತ್ರಿಯ ನಂತರ ಉದಯಿಸುವ ಚಂದ್ರನಿಗೆ ಅಂಟಿಕೊಂಡಂತೆ ಗುರುಗ್ರಹವೂ ಉದಯಿಸುವುದನ್ನು ಕಾಣಬಹುದು.

ಎರಡು ದಿನಗಳ ತರುವಾಯ ಶುಕ್ರಗ್ರಹವನ್ನೂ ಚಂದ್ರ ಮರೆಮಾಡುವುದು. ಇದೂ ನಮಗೆ ನೋಡಲು ಸಿಗುವುದಿಲ್ಲ. ಶುಕ್ರನನ್ನು ಹುಡುಕಲು ಕಷ್ಟಪಡಬೇಕಿಲ್ಲ. ಅದು ಇಷ್ಟು ಹೊತ್ತಿಗಾಗಲೇ ಸಾಕಷ್ಟು ಎತ್ತರಕ್ಕೆ ತಲುಪಿರುತ್ತದೆ. ೧೫ರಂದು ೪೫ ಡಿಗ್ರಿಗಳ ಗರಿಷ್ಠ ಕೋನದಲ್ಲಿ ಕಾಣುವುದು. ಇನ್ನೊಂದು ಗ್ರಹ ಬುಧವೂ ೧೬ರಂದು ಗರಿಷ್ಠ ಎತ್ತರ ತಲುಪುವುದು. ಇದು ೧೮ ಡಿಗ್ರಿ ಮಾತ್ರ. ಆದ್ದರಿಂದ, ಸೂರ್ಯೋದಯಕ್ಕೆ ಸ್ವಲ್ಪ ಮುಂಚೆ ಇದನ್ನು ನೋಡಬಹುದು. ಅಮಾವಾಸ್ಯೆಯ ಹಿಂದಿನ ದಿನ ಚಂದ್ರನ ಪಕ್ಕದಲ್ಲಿಯೇ ಕಾಣುವುದೆಂಬುದನ್ನು ಬಳಸಿ ಪತ್ತೆ ಹಚ್ಚಬಹುದು.

ಮೇ ತಿಂಗಳಲ್ಲಿ 'ಅತಿ ದೊಡ್ಡ ಚಂದ್ರ'ನ ಗುಲ್ಲು ಎದ್ದಿದ್ದುದು ನೆನಪಿರಬಹುದು. ಹುಣ್ಣಿಮೆಯ ದಿನವೇ ಚಂದ್ರ ಪುರಭೂ ಬಿಂದುವಿನಲ್ಲಿ - ಅಂದರೆ, ಭೂಮಿಯಿಂದ ಕನಿಷ್ಠ ದೂರದಲ್ಲಿ ಇತ್ತು. ಈಗ ಕ್ರಮೇಣ ಪುರಭೂ ಬಿಂದು ಹುಣ್ಣಿಮೆಯಿಂದ ದೂರ ಸರಿದಿದೆ ಎಂಬುದನ್ನು ತಿಳಿಯುವ ಕಾಲ ಬಂದಿದೆ. ಆಗಸ್ಟ್ ೧೦ರಂದು ಚಂದ್ರ-ಭೂಮಿ ನಡುವೆ ಅಂತರ ಕನಿಷ್ಠ. ಆ ದಿನ ಅರ್ಧ ಚಂದ್ರನನ್ನು ಬೆಳಗಿನ ಜಾವ ಕಾಣಬಹುದು. ಮುಂದೆ ೨೩ರಂದು, ಈ ಅಂತರ ಗರಿಷ್ಠವಾಗುವುದು. ಆಗ ಅರ್ಧ ಚಂದ್ರ ಸಂಜೆ ಕಾಣುವುದು. ಈ ಎರಡೂ ತಾರೀಖುಗಳಂದು ಅರ್ಧ ಚಂದ್ರಗಳನ್ನು ಒಂದೇ ಕ್ಯಾಮೆರಾ ಉಪಯೋಗಿಸಿ ಫೋಟೋ ತೆಗೆದರೆ ಎರಡರ ನಡುವಿನ ಅಳತೆಯ ವ್ಯತ್ಯಾಸ ಸ್ಪಷ್ಟವಾಗಿ ಕಾಣುವುದು. ತೆಳ್ಳನೆಯ ಮೋಡವಿದ್ದರೂ ಮಾಡಬಹುದಾದ ಸುಲಭ ಪ್ರಯೋಗ ಇದು.

ಯಾವುದೇ ಸಂಜೆ ಮೋಡ ಬಿಡುವು ಕೊಟ್ಟಾಗ ಸುಂದರವಾದ ಆಕಾಶಗಂಗೆಯ ದರ್ಶನ ಪಡೆಯಬಹುದು. ವೃಶ್ಚಿಕ, ಧನು ರಾಶಿಗಳ ಮೂಲಕ ಹಾಯುವ ಭಾಗದಲ್ಲಿ ನಕ್ಷತ್ರಗಳ ದಟ್ಟಣೆ ಕಾಣುವುದು. ಉತ್ತರಕ್ಕೆ ಹಾಯುವ ಭಾಗ ಗರುಡ (ಅಕ್ವಿಲಾ), ರಾಜಹಂಸ (ಸಿಗ್ನಸ್) ಮತ್ತು ವೀಣಾ (ಲೈರಾ) ಮೂಲಕ ಹಾಯುತ್ತದೆ. ವಾಯುವ್ಯದಲ್ಲಿ ಸಪ್ತರ್ಷಿಮಂಡಲ ಕೆಳಗಿಳಿಯುತ್ತಿರುತ್ತದೆ. ಉರಗಧರ, ಮಕರ, ತುಲಾ, ಕನ್ಯಾ ಇವು ಕ್ಷೀಣ ಪುಂಜಗಳು. ನೆತ್ತಿಯ ಮೇಲೆ ಕೆಂಪು ನಕ್ಷತ್ರ ಸ್ವಾತಿ ಅದರ ಪಕ್ಕ ಉತ್ತರ ಕಿರೀಟಿ ಎಂಬ ಪುಂಜ ಕಾಣುತ್ತವೆ. ಸ್ವಾತಿ ಇರುವುದು ಸಹದೇವ (ಬೂಟಿಸ್) ಎಂಬ ಪುಂಜದಲ್ಲಿ. ದಕ್ಷಿಣದಂಚಿನಲ್ಲಿ ತ್ರಿಶಂಕು (ಕ್ರಕ್ಸ್), ಕಿನ್ನರ (ಸೆಂಟಾರಸ್) ಮತ್ತು ಶಶ (ಲೆಪಸ್) ಪುಂಜಗಳು ಕಾಣುವುವು. ಇವೆಲ್ಲಾ ಪ್ರಕಾಶಮಾನವಾದವು. ನೆತ್ತಿಯ ಮೇಲೆಯೇ ಇರುವ ಭೀಮ ಮಾತ್ರ ಕ್ಷೀಣವಾದದ್ದು. ಹುಡುಕಲು ಕಷ್ಟಪಡಬೇಕು !

ಉ
ಪೂ
ಪ
ದ
ಸಪ್ತರ್ಷಿ ಮಂಡಲ
ರಾಜಹಂಸ
ವೀಣಾ
ಸಹದೇವ
ಭೀಮ
ಉತ್ತರ ಕಿರೀಟಿ
ಗರುಡ
ಉರಗಧರ
ಶನಿ
ಮಂಗಳ
ಚಿತ್ರಾ
ಮಕರ
ತುಲಾ
ಧನು
ವೃಶ್ಚಿಕ
ಶಶ
ಕಿನ್ನರ
ತ್ರಿಶಂಕು

**ಖಗೋಳ ದಿನಚರಿ**

ಆಗಸ್ಟ್ ೨ ಹುಣ್ಣಿಮೆ ೦೮:೫೭ಕ್ಕೆ
೩ ಗುರುಗ್ರಹದ ಪಕ್ಕ ರೋಹಿಣಿ*
೯ ಚಾಂದ್ರಮಾಸದ ಕೊನೆಯ ಪಾದ, ಚಂದ್ರೋದಯ ನಡುರಾತ್ರಿಗೆ
೯ ರಿಂದ ೧೩ ಪರ್ಸೈಯೈಡ್ ಉಲ್ಕಾವೃಷ್ಟಿ*
೧೦ ಚಂದ್ರ-ಭೂಮಿ ನಡುವೆ ಕನಿಷ್ಠ ಅಂತರ
೧೧ ಗುರು-ಚಂದ್ರ ಜೋಡಿ* (ಮುಂಜಾವು - ಆಚ್ಛಾದನೆ ನಮಗೆ ಕಾಣುವುದಿಲ್ಲ)
೧೩ ಮಂಗಳ-ಚಿತ್ರಾ ಜೋಡಿ (ಸಂಜೆ)*
ಶುಕ್ರ-ಚಂದ್ರ ಜೋಡಿ* (ಮುಂಜಾವು - ಆಚ್ಛಾದನೆ ನಮಗೆ ಕಾಣುವುದಿಲ್ಲ)
೧೫ ಶುಕ್ರದ ಗರಿಷ್ಠ ಕೋನೋನ್ನತಿ*
೧೬ ಚಂದ್ರ-ಬುಧ ಜೋಡಿ*. ಬುಧ ಗ್ರಹದ ಗರಿಷ್ಠ ಕೋನೋನ್ನತಿ
೧೭ ಮಂಗಳ-ಶನಿ ಜೋಡಿ
೨೨ ಮಂಗಳ-ಶನಿ-ಚಂದ್ರ ಪುಟ್ಟ ಗುಂಪು
೨೪ ಚಾಂದ್ರಮಾಸದ ಮೊದಲ ಪಾದ; ಚಂದ್ರಾಸ್ತ ನಡುರಾತ್ರಿಗೆ
೩೧ ಹುಣ್ಣಿಮೆ ೧೯:೨೮ಕ್ಕೆ (* ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

**'ನೀಲಿ' ಚಂದ್ರ**

ಒಂದೇ ತಿಂಗಳಲ್ಲಿ (ಅಂದರೆ ಜನವರಿ, ಫೆಬ್ರುವರಿ – ಈ ತಿಂಗಳುಗಳು) ಎರಡು ಹುಣ್ಣಿಮೆಗಳು ಉಂಟಾದರೆ ಎರಡನೆಯದನ್ನು ನೀಲಿ ಚಂದ್ರ ಎಂದು ಕರೆಯುತ್ತಾರೆ. ಇದರಲ್ಲಿ ವಿಶೇಷವೇನೂ ಇಲ್ಲದಿದ್ದರೂ ಮಾಧ್ಯಮಗಳು ಹೈಪ್ ಮಾಡುವ ಸಾಧ್ಯತೆ ಇದೆ.



ಆಗಸ್ಟ್ ೧೦ ಮತ್ತು ೨೩ರಂದು ಒಂದೇ ಕ್ಯಾಮೆರಾ ಬಳಸಿ ಚಿತ್ರ ತೆಗೆದರೆ ಚಂದ್ರನ ಗಾತ್ರದಲ್ಲಿ ವ್ಯತ್ಯಾಸ ಕಾಣಬಹುದು

ವಿದ್ಯಾರ್ಥಿಯಾಗಿದ್ದಾಗಲೇ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿ, ಸ್ವಾತಂತ್ರ್ಯಾನಂತರವೂ ಪಡೆದ ಸಾತಂತ್ರ್ಯವನ್ನು ಜನಸಾಮಾನ್ಯರಿಗೆ ತಲುಪಿಸಲು ನಿರಂತರ ಹೋರಾಡುತ್ತಿರುವ ಶ್ರೀ ಎಚ್. ಎಸ್. ದೊರೆಸ್ವಾಮಿಯವರಿಗೆ ಈಗ ೯೪ರ ಪ್ರಾಯ. ಅಂದು ತಮ್ಮ ಬದುಕನ್ನೇ ಸ್ವಾತಂತ್ರ್ಯ ಹೋರಾಟಕ್ಕೆ ಮುಡಿಪಾಗಿಟ್ಟ ಈ ಹಿರಿಯ ಜೀವ ಇಂದು 'ನಮಗೆ ಸ್ವಾತಂತ್ರ್ಯವೇ ಬರಲಿಲ್ಲ' ಎಂದು ಹೇಳುತ್ತಾರೆ. ಈ ಮಾತು ಹೇಳಬೇಕಾದರೆ ಆ ಜೀವ ಅದೆಷ್ಟು ನೊಂದಿರಬಹುದು.

ಅಂದು ಬ್ರಿಟಿಷ್ ವಸಾಹತುಶಾಹಿಯ ವಿರುದ್ಧ ಹೋರಾಡಿದ ದೊರೆಸ್ವಾಮಿಗಳು ಇಂದು ಸ್ವತಂತ್ರ ಭಾರತದ ಸರಕಾರಗಳ ಭ್ರಷ್ಟಾಚಾರದ ವಿರುದ್ಧ ಹೋರಾಡುತ್ತಿದ್ದಾರೆ. ನಮ್ಮ ಕೇಂದ್ರ, ರಾಜ್ಯ ಸರಕಾರಗಳು ದಿನಕ್ಕೊಂದು ಹಗರಣಗಳಲ್ಲಿ ಸಿಲುಕಿ ದೇಶದ ಘನತೆ, ಗೌರವಗಳನ್ನು ಮಣ್ಣುಪಾಲು ಮಾಡುತ್ತಿರುವ ಈ ಸನ್ನಿವೇಶದಲ್ಲಿ, ದೇಶದ ಬಡಜನ ಕನಿಷ್ಠ ಬದುಕಿಗಾಗಿ ಪರದಾಡುತ್ತಿರುವ ಈ ಪರಿಸ್ಥಿತಿಯಲ್ಲಿ, ರಾಜಕಾರಣವನ್ನು ವ್ಯಾಪಾರವನ್ನಾಗಿಸಿ, ದೇಶವನ್ನು ಮತ್ತೆ ಬಹುರಾಷ್ಟ್ರೀಯ ಕಂಪನಿಗಳಿಗೆ ಒತ್ತೆ ಇಡುತ್ತಿರುವ ರಾಜಕೀಯ ದಲ್ಲಾಳಿಗಳು ಪ್ರಜಾಸತ್ತೆಯನ್ನು ನಾಶಮಾಡುತ್ತಿರುವ ಇಂದಿನ ಸಂದರ್ಭದಲ್ಲಿ ದೊರೆಸ್ವಾಮಿಗಳು ಮತ್ತೆ ಜನರತ್ತ ನೋಡುತ್ತಾರೆ. ನಮ್ಮ ಜನರನ್ನು ಜಾಗೃತಗೊಳಿಸುವುದು ನಮ್ಮ ಜವಾಬ್ದಾರಿ, ಆ ಜವಾಬ್ದಾರಿಯನ್ನು ನಾವು ಸರಿಯಾಗಿ ನಿರ್ವಹಿಸಿಲ್ಲ ಎನ್ನುತ್ತಾರೆ. ಜನಜಾಗೃತಿಗಾಗಿ ಈ ವಯಸ್ಸಿನಲ್ಲೂ ಅದೇ ಸ್ವಾತಂತ್ರ್ಯ ಸಂಗ್ರಾಮದ ದಿನಗಳಲ್ಲಿದ್ದ ಕೆಚ್ಚಿನಿಂದಲೇ ಬೀದಿಗಿಳಿಯುತ್ತಾರೆ. ಅಂಥ ಚಿರಯುವಕನ ಸಂದರ್ಶನದ ಆಯ್ದಭಾಗಗಳನ್ನು 'ಹೊಸತು' ಆಗಸ್ಟ್ ಸಂಚಿಕೆಯಲ್ಲಿ ಪ್ರಕಟಿಸುತ್ತಿದ್ದೇವೆ.

**ಹೊಸತು :** ಸ್ವಾತಂತ್ರ್ಯೋತ್ಸವದ ಈ ಸಂದರ್ಭದಲ್ಲಿ ಸ್ವಾತಂತ್ರ್ಯ ಹೋರಾಟಗಾರರಾದ ನಿಮಗೆ 'ಹೊಸತು' ಪರವಾಗಿ ಅಭಿನಂದನೆಗಳು. ಅಂದು ಪಡೆದ ಸ್ವಾತಂತ್ರ್ಯವನ್ನು ಜನಸಾಮಾನ್ಯರಿಗೆ ತಲುಪಿಸಲು ಇಂದಿಗೂ ಹೋರಾಡುತ್ತಿದ್ದೀರಿ. ನಿಮ್ಮ ಅನುಭವ, ಅನಿಸಿಕೆ ಏನು ?

**ದೊರೆಸ್ವಾಮಿ :** ನಮಗೆ ಸ್ವಾತಂತ್ರ್ಯವೇ ಬಂದಿಲ್ಲ. ಸ್ವಾತಂತ್ರ್ಯ ಶಾಸಕರಿಗೆ, ಸಂಸದರಿಗೆ, ಸರಕಾರ ನಡೆಸುವವರಿಗೆ ಬಂದಿರಬಹುದು. ಜನರಿಗೆ ಅದರಲ್ಲೂ ಬಡಜನರಿಗೆ ಸ್ವಾತಂತ್ರ್ಯವೇ ಬಂದಿಲ್ಲ. ನಮ್ಮ ಸರಕಾರಗಳನ್ನು ನಡೆಸುವವರಿಗೆ ಬಡವರ ಬಗೆಗೆ ಕಾಳಜಿ ಇಲ್ಲ. ಬಡತನ ಕಳೆಯಲು ಸ್ವಾತಂತ್ರ್ಯ ಬೇಕು ಎಂದು ಗಾಂಧೀಜಿಯವರು ಹೇಳಿದ್ದರು. ಅಂದು ಬಡವರ ಬಗ್ಗೆ ನಿಜವಾದ ಕಾಳಜಿ ಇದ್ದವರು ಗಾಂಧೀಜಿ ಮತ್ತು ಮಾವೋ ನಮ್ಮ ಮುಂದಿದ್ದರು. ಆದರೆ ಸ್ವಾತಂತ್ರ್ಯ ಬಂದು ೬೫ ವರ್ಷಗಳಾದರೂ ನಮ್ಮ ಬಡತನ ತೊಲಗಲಿಲ್ಲ. ಕೊನೇ ಮನುಷ್ಯನಿಗೆ ಸ್ವಾತಂತ್ರ್ಯ ಬರಲೇ ಇಲ್ಲ. ಎಲ್ಲಾ ರೀತಿಯ ಸರಕಾರಗಳು ಹಾಗೂ ೧೨ ಪಂಚವಾರ್ಷಿಕ ಯೋಜನೆಗಳು ಬಂದುಹೋಗಿವೆ. ಕೋಟಿ ಕೋಟಿ ಹಣ ಪಂಚವಾರ್ಷಿಕ ಯೋಜನೆಗಳಿಗೆ ಖರ್ಚಾಗಿದೆ. ಆದರೆ ಬಡವರು ಇನ್ನೂ ಬಡವರಾಗಿದ್ದಾರೆ. ಶ್ರೀಮಂತರು ಮತ್ತಷ್ಟು ಶ್ರೀಮಂತರಾಗಿದ್ದಾರೆ. ಇಂದು ದೇಶದಲ್ಲಿ ಪ್ರತಿಶತ ೭೫ ಜನ ಬಡವರಿದ್ದಾರೆ. ಬಡತನ ನೀಗಿಲ್ಲ. ಅದರ ಬಗ್ಗೆ ಯಾರಿಗೂ ಕಾಳಜಿ ಇಲ್ಲ. ಎರಡು ಪಂಚವಾರ್ಷಿಕ ಯೋಜನೆಗಳನ್ನು ಬಡತನ ನೀಗಿಸಲಿಕ್ಕಾಗಿಯೇ ಮೀಸಲಿಡಬೇಕು.



# ನಮಗೆ ಸ್ವಾತಂತ್ರ್ಯವೇ ಬಂದಿಲ್ಲ

**ಸಂದರ್ಶಕರು**

**ಸಂ. ಡಾ|| ಸಿದ್ದನಗೌಡ ಪಾಟೀಲ**

**ಬಿ. ದೇವದಾಸ ರಾವ್**

**ಡಿ. ವಿಜಯಭಾಸ್ಕರ**

**ಸಾತಿ ಸುಂದರೇಶ್**

**ಚಿತ್ರಗಳು : ಸಾತಿ ಸುಂದರೇಶ್**



**ಹೊ :** ನಿಮಗೆ ಆ ಕಾಲದಲ್ಲಿ ಎಂತಹ ಸ್ವಾತಂತ್ರ್ಯದ ನಿರೀಕ್ಷೆ ಇತ್ತು ?

**ದೊ :** ನಮಗೆ ಇಷ್ಟು ಕೆಡುತ್ತದೆ ಅಂತ ನಿರೀಕ್ಷೆ ಇರಲಿಲ್ಲ. ನಮ್ಮ ಮುಂದಿನ ಜನಾಂಗ ಅಲ್ಲವೇ ಆಡಳಿತ ನಡೆಸೋದು. ಇವರು ಬುದ್ಧಿವಂತರು ಇರ್ತಾರೆ, ತಿಳುವಳಿಕಸ್ಥರು ಇರ್ತಾರೆ, ಬಡವರ ಬಗ್ಗೆ ದೇಶದ ಬಗ್ಗೆ ಕಾಳಜಿ ಹೊಂದಿರುತ್ತಾರೆ ಅನ್ನುವ ನಿರೀಕ್ಷೆ ಇತ್ತು. ಆದರೆ ಈಗ ನೋಡಿದರೆ ಬರೀ ಖುರ್ಚಿ ಹಿಡಿಯೋದು, ಅಧಿಕಾರ ಹಿಡಿಯೋದರ ಕಡೆಗೆ ಮಾತ್ರ ಅವರ ಗಮನ ಇದೆ. ಯಾವ ಪಕ್ಷ ಬಂದರೂ ಅದೇ ಸ್ಥಿತಿ. ಹೀಗಾಗಿ ನಮ್ಮ ಮೂಲಭೂತ ಸಮಸ್ಯೆಗಳು ಹಾಗೇ ಉಳಿದಿವೆ. ಸ್ವಾತಂತ್ರ್ಯ ಬಂದ ನಂತರ ಎರಡು ಮೂರು ರಿಜಿಮ್‌ಗಳಲ್ಲಿ ಕೆಲ ನಾಯಕರಿಗೆ ಸ್ವಲ್ಪ ಕಾಳಜಿ ಇತ್ತು. ಜನರ ಕೆಲಸ ಮಾಡಬೇಕು, ಆದರ್ಶವಾಗಿ ಬಾಳಬೇಕು ಅಂತ ಇತ್ತು. ಅವರಿಗೆ ಆಸೆಗಳಿರಲಿಲ್ಲ ಅಂತ ಅಲ್ಲ, ದುರಾಸೆಗಳಿರಲಿಲ್ಲ, ಸಂಕೋಚ ಇತ್ತು. ಎರಡು ಮೂರು ಅವಧಿಯ ನಂತರ ಇಂದಿನ ರಾಜಕಾರಣಿಗಳನ್ನು ನೋಡಿದರೆ ಅಸಹ್ಯ ಆಗುತ್ತೆ. ಸಂಪೂರ್ಣ ಕಮರ್ಷಿಯಲ್ ಆಗಿದ್ದಾರೆ. ಇಂದಿನ ಪರಿಸ್ಥಿತಿಯಲ್ಲಿ ಪಾರ್ಲಿಮೆಂಟ್, ಅಸೆಂಬ್ಲಿ ಮೆಂಬರ್ ಆಗುವಂಥವರು ಪಕ್ಷಕ್ಕೆ ಹಣಕೊಟ್ಟು ತಮ್ಮ ಕ್ಯಾಂಡೀಡೇಚರ್‌ನ ಗಟ್ಟಿಮಾಡಿಕೊಳ್ತಾರೆ. ಆಮೇಲೆ ಹಣಕೊಟ್ಟು ಶಾಸಕರನ್ನು ಖರೀದಿಸ್ತಾರೆ. ಹೀಗಾಗಿ ತುಂಬ ಭ್ರಷ್ಟಾಚಾರ ಬಂದಿದೆ. ನಾವು ಏನನ್ನು ನಿರೀಕ್ಷೆ ಮಾಡಿದ್ದೇವೋ ಅದಕ್ಕೆ ವಿರುದ್ಧವಾದ ಸ್ಥಿತಿ ಇವತ್ತಿದೆ.

**ಹೊ :** ಇಂದು ಭ್ರಷ್ಟಾಚಾರದ ವಿರುದ್ಧದ ಹೋರಾಟದಲ್ಲಿ ತಾವು ತೊಡಗಿಸಿಕೊಂಡಿದ್ದೀರಿ. ಅಣ್ಣಾ ಹಜಾರೆ ಹೋರಾಟಕ್ಕೆ ಕರ್ನಾಟಕದಲ್ಲಿ ನಾಯಕತ್ವ ಕೊಟ್ಟಿದ್ದೀರಿ. ಅಣ್ಣಾ ಹಜಾರೆ ಅವರ ತಂಡದ ಮೇಲೆ ಆರೋಪಗಳು ಬಂದಿವೆ, ತಂಡದಲ್ಲಿ ಬಿರುಕು ಬಂದಿದೆ, ಇಂಥ ಸಂದರ್ಭದಲ್ಲಿ ನಿಮ್ಮ ಮುಂದಿನ ಹೋರಾಟದ ವಿಧಾನ ಯಾವುದು ?

**ದೊ :** ಅಣ್ಣಾ ಹಜಾರೆಯವರು ಜನರನ್ನು ಬಡಿದೆಬ್ಬಿಸಿದ್ದಾರೆ. ಅಷ್ಟೇ ನಾನು ನೋಡೋದು. ಆ ಜನಾನ ಹಾಗೇ ಉಳಿಸಿಕೊಳ್ಳಬೇಕು. ನಿದ್ದೆ ಮಾಡದ ಹಾಗೆ ಹಾಗೇ ಉಳಿಸಿಕೊಳ್ಳಬೇಕು. ಅಣ್ಣಾ ಹಜಾರೆ ಅವರೇನು ಗಾಂಧಿ ಅಲ್ಲ, ಅವರು ಹಾಗೆ ಅಂದುಕೊಂಡೂ ಇಲ್ಲ. ಅವರ ಜೊತೆ ಹೋರಾಟಕ್ಕೆ ಬೆಂಬಲಿಸಿ ಕೆಲವರು ಬಂದಿದ್ದಾರೆ. ಹಾಗೆ ಬಂದವರಿಗೆ ಯಾವ ಚಳುವಳಿಯ ಅನುಭವವಿಲ್ಲ. ಅವರಿಗೆ ದೇಶದ ಸಮಸ್ಯೆಗಳ ಬಗ್ಗೆ ಸಂಪೂರ್ಣ ಅರಿವಿದೆ ಅಂತಾ ಅನಿಸ್ತಾ ಇಲ್ಲ. ಅಣ್ಣಾ ಹಜಾರೆ ಅವರ ಹಿಂದಿರುವವರು ಯಾವುದ್ಯಾವುದೋ ರೀತೀಲಿ ರಾಜಕೀಯ ಮಾಡೋಕೆ ಹೋಗ್ತಾರೆ. ಇದು ಬೇಸರವಾಗುತ್ತದೆ. ಈ (ಬಾಬಾ) ರಾಮದೇವ್ ಅಂತೂ ಸತ್ಯಾಗ್ರಹಕ್ಕೆ ಯೋಗ್ಯನೇ ಅಲ್ಲ ಅಂತ ನನ್ನ ಭಾವನೆ. ಅವನು ಬರೀ ಮಾತಾಡ್ತಾನೆ. ಸತ್ಯಾಗ್ರಹಿಗೆ ಇದು ಭೂಷಣ ಅಲ್ಲ. ರಾಮದೇವ್ ಮಾತಾಡಿ ಮಾತಾಡಿ ಕೆಟ್ಟ. ಗಳಿಗೆಗೊಂದು ಮಾತಾಡ್ತಾನೆ. ಮಂತ್ರಿ ಮಾನ್ಯರನ್ನೊಮ್ಮೆ ಹಾಡಿ ಹೊಗಳ್ತಾನೆ. ಮತ್ತೊಮ್ಮೆ ತೆಗಳ್ತಾನೆ. ಅವರು ನಡೆಸಿದ ಹೋರಾಟದ ಸಂದರ್ಭದಲ್ಲಿ ಬುರ್ಖಾ ಹಾಕಿಕೊಂಡು ಓಡಿಹೋಗಿದ್ದು ನಾಚಿಕೆಗೇಡಿನ ಸಂಗತಿ. ಇದು ಸತ್ಯಾಗ್ರಹಿಯ ಲಕ್ಷಣ ಅಲ್ಲ. ಮತ್ತು ಓಡಿಹೋಗೋದು ನಾಯಕತ್ವದ ಗುಣ ಅಲ್ಲ. ಇಂದು ನಾವು ಹೋರಾಟ ನಡೆಸಿದ್ದೇವೆ. ಅಣ್ಣಾ ಹಜಾರೆಯವರ ಹೋರಾಟದಲ್ಲಿ ಕೆಲವು ತಪ್ಪುಗಳಾಗಿರಬಹುದು. ಆದರೆ ಅವರು ಜನರನ್ನು ಬಡಿದೆಬ್ಬಿಸಿದ್ದಾರೆ. ತಪ್ಪುಗಳೇನಾದ್ರೂ ಇದ್ರೆ ಅವುಗಳನ್ನು ಸರಿಪಡಿಸಿಕೊಂಡು ಈ ಹೋರಾಟ ಮುಂದುವರಿಸಬೇಕು. ಹಲವಾರು ಪ್ರಯೋಗಗಳು ನಡೆಯುತ್ತಿವೆ. ಪ್ರಯೋಗ ತಪ್ಪಲ್ಲ.

**ಹೊ :** ಆರ್ಥಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಒಂದು ಪರ್ಯಾಯ ದೃಷ್ಟಿಕೋನವಿಲ್ಲದೆ ಈ ಭ್ರಷ್ಟಾಚಾರ ವಿರೋಧಿ ಹೋರಾಟ ಯಶಸ್ವಿಯಾಗಬಲ್ಲದೆ ?

**ದೊ :** ಸಂಪೂರ್ಣ ಭ್ರಷ್ಟಾಚಾರ ನಿರ್ಮೂಲನೆ ಕಷ್ಟ. ಜಟಿಲವಾದ ವಿಷಯ. ಈಗ ನಾವು ಮಾಡ್ತಾ ಇರೋದು ರಾಜಕೀಯ ಭ್ರಷ್ಟಾಚಾರವನ್ನು ತಡೆಯೋ ಕೆಲಸ. ಉನ್ನತ ಹಂತದಲ್ಲಿ ನಡೆಯೋ ಭ್ರಷ್ಟಾಚಾರದ ಮೇಲೆ ದಾಳಿ ನಡೆದ್ರೆ ಕೆಳಹಂತದ ಭ್ರಷ್ಟರಿಗೆ ಭಯ ಬರ್‍ತದೆ. ಕೆಳಹಂತದ ಅಧಿಕಾರಿಗಳ ಮೇಲೆ ಭ್ರಷ್ಟಾಚಾರದ ಕೇಸ್ ಹಾಕಿದ್ರೆ ಮೇಲ್ಮಟ್ಟದಲ್ಲಿರೋ ಭ್ರಷ್ಟರು ಅವರ್‍ನ ರಕ್ಷಣೆ ಮಾಡ್ತಾರೆ. ಮುಖ್ಯಮಂತ್ರಿ, ಮಂತ್ರಿ, ಅವರ ಬಂಧುಗಳು ಭ್ರಷ್ಟಾಚಾರದಲ್ಲಿ ತೊಡಗಿದ್ರೆ ಅವರ್‍ನ ಬಂಧಿಸಿ ಶಿಕ್ಷೆಗೊಳಪಡಿಸಬೇಕು. ಈ ಸಂದರ್ಭದಲ್ಲಿ ಲೋಕಪಾಲ, ಲೋಕಾಯುಕ್ತಗಳ ಮೂಲಕ ಕ್ರಮಗಳನ್ನು ಜರುಗಿಸಿ ಭ್ರಷ್ಟಾಚಾರವನ್ನು ಸ್ವಲ್ಪ ಪ್ರಮಾಣದಲ್ಲಿ ತಡೆಹಿಡಿಯಬಹುದು ಅಂತ ಕಾಣುತ್ತೆ.

* ನಮಗೆ ಸ್ವಾತಂತ್ರ್ಯ ಬಂದೇ ಇಲ್ಲ.
* ಇಷ್ಟು ಕೆಡುತ್ತದೆ ಅಂತ ನಿರೀಕ್ಷೆ ಇರಲಿಲ್ಲ.
* ಶಾಸಕ, ಸಂಸದರಾಗುವವರು ಪಕ್ಷಕ್ಕೆ ದುಡ್ಡು ಕೊಟ್ಟು ತಮ್ಮ ಕ್ಯಾಂಡಿಡೇಚರ್ ಗಟ್ಟಿ ಮಾಡಿಕೊಳ್ತಾರೆ.
* ಅಣ್ಣಾ ಹಜಾರೆ ಜನರನ್ನು ಬಡಿದೆಬ್ಬಿಸಿದ್ದಾರೆ. ಆ ಜನಾನ ಹಾಗೇ ಉಳಿಸಿಕೊಳ್ಳಬೇಕು.
* ಅಣ್ಣಾ ಹಜಾರೆಯವರ ಹಿಂದಿರುವವರು ಯಾವುದ್ಯಾವುದೋ ರಾಜಕೀಯ ಮಾಡಲು ಹೋಗುತ್ತಾರೆ. ಬೇಸರವಾಗ್ತದೆ.
* (ಬಾಬಾ) ರಾಮದೇವ್ ಸತ್ಯಾಗ್ರಹಕ್ಕೆ ಯೋಗ್ಯನೇ ಅಲ್ಲ, ಅವನದು ಸತ್ಯಾಗ್ರಹಿಯ ಲಕ್ಷಣ ಅಲ್ಲ.
* ಕಾಂಗ್ರೆಸ್‌ನ ಭ್ರಷ್ಟಾಚಾರ ವಿರೋಧಿಸಲು ಬಿ.ಜೆ.ಪಿ. ಜೊತೆ ಸೇರೋದು ತಪ್ಪು.
* ಯು.ಪಿ.ಎ. ಇರಲಿ, ಎನ್.ಡಿ.ಎ. ಇರಲಿ ನಮ್ಮ ದೇಶದ ಬಜೆಟ್ ಐ.ಎಂ.ಎಫ್., ವಿಶ್ವ ಬ್ಯಾಂಕ್‌ನ ನಿರ್ದೇಶನದಂತೆ ತಯಾರಾಗ್ತದೆ. ಮನಮೋಹನ ಸಿಂಗ್, ಅಹ್ಲುವಾಲಿಯಾ ಅವುಗಳ ಏಜೆಂಟರಂತೆ ಕೆಲಸ ಮಾಡುತ್ತಾರೆ.
* ಬಿಜೆಪಿಯವರು ತಮ್ಮದೇ ಭ್ರಷ್ಟಾಚಾರದ ಹೊರೆ ಹೊತ್ಕೊಂಡಿರೋದ್ರಿಂದ ಕಾಂಗ್ರೆಸ್‌ಗೆ ಹೇಳುವ ನೈತಿಕತೆ ಕಳೆದುಕೊಂಡಿದ್ದಾರೆ.
* ಬಿ.ಜೆ.ಪಿ.ಯ ಕೋಮುವಾದಿ ಅಜೆಂಡಾ ತಡೆಯಲು ಜನಜಾಗೃತಿ ಯೊಂದೇ ದಾರಿ.
* ಜನಜಾಗೃತಿಯಾಗೋದು ಯಾವ ಪಕ್ಷಕ್ಕೂ ಬೇಕಿಲ್ಲ.
* ಧರ್ಮ ಗುರುಗಳನ್ನು ರಾಜಕಾರಣದ ಹತ್ತಿರ ಬಿಟ್ಟುಕೊಳ್ಳಬಾರದು.
* ಎಲ್ಲವೂ ಕುಲಗೆಟ್ಟಾಗಲೇ ನಾವು ಹೋರಾಡಬೇಕು.
* ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಕಾರ್ಮಿಕರ ಪಾತ್ರ ದೊಡ್ಡದು. ಇಂದಿನ ಸರಕಾರಗಳು ಕಾರ್ಮಿಕರ ಶಕ್ತಿಯನ್ನೇ ನಾಶಮಾಡಿವೆ.
* ಸ್ವಯಂಸೇವಾ ಸಂಘಟನೆಗಳು ಮತ್ತು ಬಹುರಾಷ್ಟ್ರೀಯ ಕಂಪನಿಗಳು ಲೋಕಪಾಲ್ ವ್ಯಾಪ್ತಿಗೆ ಬರಬೇಕು.
* ಪ್ರಜಾಸತ್ತೆಯನ್ನು ಉಳಿಸಲು ಪ್ರಜೆಗಳೇ ಹೋರಾಡಬೇಕು.



**ಹೊ :** ವಿಶ್ವದಲ್ಲಿ, ಪ್ರಮುಖವಾಗಿ ಅಮೇರಿಕಾ, ಯೂರೋಪಿನಲ್ಲಿ ಆರ್ಥಿಕ ಮುಗ್ಗಟ್ಟು ತಲೆದೋರಿದೆ. ಪರಿಣಾಮವಾಗಿ ರಾಜಕೀಯ ಏರುಪೇರುಗಳಾಗಿವೆ. ಇದರ ಪರಿಣಾಮ ಭಾರತದ ಮೇಲೂ ಆಗಿದೆ. ದೇಶದಲ್ಲಿ ಯುಪಿಎ ಹಾಗೂ ಎನ್‌ಡಿಎ ರಾಜಕೀಯ ಬಣಗಳೆರಡೂ ಸಾಮ್ರಾಜ್ಯಶಾಹಿ ಪರ ನಿಲುವನ್ನು ಹೊಂದಿವೆ. ಈ ಸಂದರ್ಭವನ್ನು ಗಾಂಧೀವಾದಿಯಾಗಿ ನೀವು ಹೇಗೆ ವಿಶ್ಲೇಷಿಸುತ್ತೀರಿ ?

**ದೊ :** ನನಗನ್ನಿಸೋದು, ಈ ಎರಡೂ ಬಣಗಳ ಬಜೆಟ್ ನೋಡಿ. ಇವು ಐ.ಎಂ.ಎಫ್ ಇಲ್ಲ ವರ್ಲ್ಡ್ ಬ್ಯಾಂಕ್‌ಗಳ ಅಣತಿಯಂತೆ ತಯಾರಾಗ್ತವೆ. ಯಡಿಯೂರಪ್ಪನೂ ಫಾರ್ಮ್ ಮಾಡೋದಿಲ್ಲ ವಾಜಪೇಯಿನೂ ಫಾರ್ಮ್ ಮಾಡೋದಿಲ್ಲ, ಅಲ್ಲಿಂದ ಏನು ನಿರ್ದೇಶನ ಬರುತ್ತೆ ಅದೇ ರೀತಿಯಲ್ಲಿ ಅದು ಇರುತ್ತೆ. ಹಿಂದೆ ಒಮ್ಮೆ ಚುನಾವಣೆ ನಡೆದಾಗ ಕಾಂಗ್ರೆಸ್ ಅಧಿಕಾರಕ್ಕೆ ಬಂತು. ಆಗಿನ ಸಂದರ್ಭದಲ್ಲಿ ಫ್ರಾನ್ಸ್ ದೇಶದ ಪತ್ರಿಕೆಯೊಂದು ಭಾರತದಲ್ಲಿ ಯಾರೇ ಅಧಿಕಾರಕ್ಕೆ ಬರಲಿ ಮನಮೋಹನ ಸಿಂಗ್ ಅವರೇ ಅರ್ಥಮಂತ್ರಿ ಆಗ್ತಾರೆ ಅಂತ ಬರೆಯಿತು. ಅದೇರೀತಿ ಅಂದಿನ ಪ್ರಧಾನಿ ನರಸಿಂಹರಾವ್ ಅವರು ಪ್ರಧಾನಿಯಾಗಿ ಮನಮೋಹನ್ ಸಿಂಗ್ ಅವರನ್ನೇ ಅರ್ಥಮಂತ್ರಿ ಮಾಡಿದರು. ಮನಮೋಹನ ಸಿಂಗ್ ಐ.ಎಂ.ಎಫ್., ವಿಶ್ವ ಬ್ಯಾಂಕಿನ ಏಜೆಂಟ್‌ರಂತೆ ಕೆಲಸ ಮಾಡುತ್ತಾರೆ. ಮನಮೋಹನ್ ಸಿಂಗ್, ಅಹ್ಲುವಾಲಿಯಾ ಇಬ್ಬರೂ ಅವರ ಪರವಾಗಿ ಕೆಲಸ ಮಾಡುತ್ತಿದ್ದಾರೆ. ಇದರಲ್ಲಿ ಯಾವ ಅನುಮಾನವೂ ಇಲ್ಲ. ಮನಮೋಹನ ಸಿಂಗ್‌ರಿಗೆ ದೇಶದ ಆಡಳಿತ ನಡೆಸುವ ಶಕ್ತಿ ಇಲ್ಲ. ಇಷ್ಟೊಂದು ಸ್ಕ್ಯಾಮ್‌ಗಳು ನಡೆದರೂ ತಮಗೆ ಸಂಬಂಧವಿಲ್ಲದಂತೆ ಮಾತನಾಡುತ್ತಾರೆ. ಪ್ರಧಾನಿಯಾಗಿ ದೇಶ ನಡೆಸೋ ಶಕ್ತಿ ಇಲ್ಲದಿದ್ದರೆ ಅಲ್ಲೇಕೆ ಕೂತಿದ್ದೀರಿ ಅಂತ ಕೇಳಬೇಕಾಗುತ್ತೆ.

**ಹೊ :** ಇತ್ತೀಚೆಗೆ ಉತ್ತರ ಭಾರತದಲ್ಲಿ ನಡೆದ ಚುನಾವಣೆಗಳಲ್ಲಿ ಅಣ್ಣಾ ತಂಡದವರು ಬಹಿರಂಗವಾಗಿ ಕಾಂಗ್ರೆಸ್ ವಿರುದ್ಧ ಪ್ರಚಾರ ಮಾಡಿದ್ರು. ಅದೇ ಅಣ್ಣಾ ಹಜಾರೆ ಅವರು ಮತ್ತು ತಂಡದವರು ಬೆಂಗಳೂರಿಗೆ ಬಂದಾಗ ಇಲ್ಲಿನ ಬಿ.ಜೆ.ಪಿ. ಭ್ರಷ್ಟಾಚಾರದ ವಿರುದ್ಧ ಸ್ಪಷ್ಟವಾಗಿ ಮಾತನಾಡಲಿಲ್ಲ, ಇದರಲ್ಲಿ ರಾಜಕೀಯ ಇದೆ ಅಂತ ಅನ್ನಿಸೋದಿಲ್ವೆ ?

**ದೊ :** ಈ ಬಗ್ಗೆ ನಾನು ಅವರ ಜೊತೆ ಮಾತಾಡ್ದೆ. ಏನಾಗಿದೆ, ಅವರು ಲೋಕಪಾಲ್ ವಿಷಯವನ್ನು ಮಾತ್ರ ಗಮನದಲ್ಲಿ ಇಟ್ಟುಕೊಂಡಿದಾರೆ. ಆ ಸಂದರ್ಭದಲ್ಲಿ ನಮ್ಮ ರಾಜ್ಯದಲ್ಲಿ ಲೋಕಾಯುಕ್ತರಿಗೆ ಸಮಸ್ಯೆ ಆಗಿತ್ತು. ಆಗ ಲೋಕಾಯುಕ್ತರಿಗೆ ಹೆಚ್ಚಿನ ಅಧಿಕಾರ ಇರಲಿಲ್ಲ. ಇವರು ಬಂಧಿಸಿದವರನ್ನು ಬಿಡುಗಡೆ ಮಾಡುವುದು ಅಂಥವರಿಗೆ ಬಡ್ತಿ ಕೊಡುವುದು ನಮ್ಮ ರಾಜ್ಯದ ಬಿ.ಜೆ.ಪಿ. ಸರಕಾರದಲ್ಲಿ ನಡೆದಿತ್ತು. ಇಂಥ ವಿಷಯಗಳಲ್ಲಿ ನೀವೇನಾದ್ರೂ ಮಾಡ್ತೀರಾ, ಅಂತ ನಾನು ಅಣ್ಣಾ ಹಜಾರೆಯವರ್ನ ಕೇಳ್ದೆ. ಅವರು ನೋಡಪ್ಪಾ ನಾನೀಗ ಈ ಲೋಕಪಾಲ್ ವಿಷಯ ಕೈಗೆತ್ತಿಕೊಂಡಿದ್ದೇನೆ. ಈಗ ಅದೂ ಇದೂ ಎಲ್ಲಾ ಸೇರಿಸಿ ನಡೆಸೋಕಾಗೋದಿಲ್ಲಾ, ನೀವು ಹೋರಾಟ ಮಾಡ್ತಾ ಇದ್ದೀರಿ ಮಾಡಿ. ಅದನ್ನು ಒಂದು ಘಟ್ಟಕ್ಕೆ ತಗೊಂಡು ಬನ್ನಿ ಆಮೇಲೆ ನೋಡೋಣ ಅಂತ ಹೇಳಿದ್ರು.

**ಹೊ :** ಅವರು ಬಿ.ಜೆ.ಪಿ. ಸರಕಾರದ ಬಗ್ಗೆ ಒಂದು ಅಭಿಪ್ರಾಯನಾದ್ರೂ ಹೇಳಬಹುದಾಗಿತ್ತು ?

**ದೊ :** ಇದು ಡಿಬೇಟಬಲ್. ಇದನ್ನು ನಾನು ಹೇಳಲಾರೆ. ಯಾಕೆ ಅವರು ಸ್ಪಷ್ಟವಾಗಿ ಹೇಳ್ಲಿಲ್ಲ ಅನ್ನೋದು ನನಗೆ ಗೊತ್ತಿಲ್ಲ. ಬಿ.ಜೆ.ಪಿ.ಯವರ್ನ ಅವರು (ಅಣ್ಣಾ ಮತ್ತು ತಂಡ) ಕಟ್ಟಿಕೊಂಡಿದ್ದಾರೆ ಅಂತ ನಾನು ಅನ್ಕೊಂಡಿಲ್ಲ, ಈಗ್ಲೂ ಅನ್ಕೊಂಡಿಲ್ಲ, ರಾಮದೇವ್ ಜೊತೆ ಕೂಡಿಕೊಂಡಿದ್ರಿಂದ ನನಗೂ ಅನಿಸ್ತದೆ ಅವರೇನಾದ್ರೂ ಬಿ.ಜೆ.ಪಿ.ನ ಜೊತೆಗಿಟ್ಕೊಳ್ತಾರೇನೋ ಅಂತ. ಈಗ ಅವರು ಎಲ್ಲಾ ಪಕ್ಷದೋರ್ನ ಭೆಟ್ಟಿ ಆದ್ರೆ ತಪ್ಪಿಲ್ಲ, ಆದ್ರೆ ಬಿ.ಜೆ.ಪಿ. ಜೊತೆ ಮಾತ್ರ ಹೋದ್ರೆ ತಪ್ಪು. ಬಿ.ಜೆ.ಪಿ. ಅಲ್ದೆ ಇದ್ರೂ ಅವರ ಯಾವುದ್ಯಾವ್ದೋ ಮುಖವಾಡದ ಸಂಸ್ಥೆಗಳಿವೆಯಲ್ಲ, ಅವು ಇದನ್ನು ಎಕ್ಸ್‌ಪ್ಲಾಯಿಟ್ ಮಾಡ್ಕೋತಾವೆ. ಇದರಲ್ಲಿ ಸಂದೇಹವೇ ಇಲ್ಲ, ಅವರು ಇದನ್ನು ಕಬ್ಜ್ ಮಾಡುವಂತ ಕೆಲಸಾ ಮಾಡ್ತಾ ಇದ್ದಾರೆ. ರಾಮದೇವ್ ಜೊತೆ ಪ್ಲಾಟ್‌ಫಾರ್ಮ್ ಹಂಚಿಕೊಂಡಿದ್ದು ತಪ್ಪು. ಅದು ಚರ್ಚೆಯಾಗಬೇಕು. ರಾಮದೇವ್ ಪ್ರತ್ಯೇಕವಾಗಿ ಹೋರಾಟ ಮಾಡ್ಲಿ. ಅಂತಹ ನೂರು ಸಂಘಟನೆಗಳು ಬರ್ಲಿ. ಆದರೆ ರಾಮದೇವ್ ರಂಥವರ ಜೊತೆಕೂಡಿ ಹೋರಾಡೋದು ಸರಿ ಅಲ್ಲ.

**ಹೊ :** ಕಾಂಗ್ರೆಸ್ ನಾಯಕತ್ವದ ಇಂದಿನ ಸರಕಾರದ ಹೊಣೆಗೇಡಿತನವನ್ನು ಬಯಲಿಗೆಳೆಯಲು ವಿರೋಧ ಪಕ್ಷವಾದ ಬಿ.ಜೆ.ಪಿ.ಯ ಪಾತ್ರ ಹೇಗಿದೆ ?

**ದೊ :** ವಿರೋಧ ಪಕ್ಷವಾಗಿ, ನೀವು ಲಾಯಕ್ಕಿಲ್ಲ ಕೆಳಗಿಳಿಯಿರಿ ಎಂದು ಕಾಂಗ್ರೆಸ್‌ನವರಿಗೆ ಹೇಳಬೇಕಾಗಿತ್ತು. ಅವರು ತಮ್ಮದೇ ಆದ ಭ್ರಷ್ಟಾಚಾರದ ಹೊರೆ ಇಟ್ಕೊಂಡಿರೋದ್ರಿಂದ ಅವರೇನು ಮಾಡ್ತಾರೆ. ನೋಡಿ ಕೇಂದ್ರದವರು ಪೆಟ್ರೋಲ್ ಬೆಲೆ ಏರಿಸಿದರು. ನಮ್ಮ ರಾಜ್ಯದ ಬಿ.ಜೆ.ಪಿ. ಸರಕಾರ ಕಾಂಗ್ರೆಸ್‌ಅನ್ನು ದೂರುವುದ್ರಲ್ಲೇ ಕಾಲ ಕಳೆದ್ರು. ತಮ್ಮ ಪಾಲಿನ ಹೊರೆಯನ್ನಾದ್ರೂ ಕಡಿಮೆ ಮಾಡಬಹುದಿತ್ತು. ರಾಜ್ಯ ಸರಕಾರ ತನ್ನ ವ್ಯಾಪ್ತಿಯ ತೆರಿಗೆ ತೆಗೆದುಹಾಕಿ ಕೇಂದ್ರದ ವಿರುದ್ಧ ಕೂಗಾಡಿದ್ರೆ ಅದಕ್ಕೆ ಅರ್ಥ ಬರುತ್ತಿತ್ತು. ತಾವು ಏನೂ ಮಾಡದೆ ಬೇರೆಯವರನ್ನು ದೂರುವುದು ಖಂಡನೀಯ. ಬಿ.ಜೆ.ಪಿ.ಗೆ ಯಾವುದೇ ನೈತಿಕ ಹಕ್ಕಿಲ್ಲ.

**ಹೊ :** ವಿರೋಧ ಪಕ್ಷವಾಗಿ ವಿಫಲವಾಗಿರುವ ಬಿ.ಜೆ.ಪಿ. ಮುಂದಿನ



ಚುನಾವಣೆಯಲ್ಲಿ ಮತ್ತೆ ತನ್ನ ಕೋಮುವಾದಿ ಅಜೆಂಡಾ ಜಾರಿಗೆ ತರುವ ಹುನ್ನಾರ ನಡೆಸಿದೆ. ನಿಮ್ಮ ಅಭಿಪ್ರಾಯವೇನು ?

**ದೊ :** ಇದಕ್ಕೆ ಜನರನ್ನು ಜಾಗೃತ ಮಾಡಬೇಕು. ಆ ಕೆಲಸವನ್ನು ನಾವು ಮಾಡಿಲ್ಲ, ಜನ ದುಡ್ಡು ತಗೋಬಹುದು, ಮತ ಹಾಕಬಹುದು. ಆದರೆ ಜನತೆಗೆ ತಿಳುವಳಿಕೆ ಕೊಡತಕ್ಕಂತಹ ಕೆಲಸ ನಾವು ಮಾಡಬೇಕು. ಯಾವ ಪಕ್ಷವೂ ಇದನ್ನು ಮಾಡಿಲ್ಲ, ಎಲ್ಲ ಪಾರ್ಟಿಗಳಿಗೂ ಜನರಿಗೆ ತಿಳುವಳಿಕೆ ಕೊಡುವ ಉದ್ದೇಶ ಇದ್ದಂತಿಲ್ಲ, ಚುನಾವಣೆ ಸಂದರ್ಭದಲ್ಲಿ ರಾಜಕೀಯ ಪಕ್ಷಗಳು ಜವಾಬ್ದಾರಿಯುತವಾಗಿ ಕೆಲಸ ಮಾಡಬೇಕು. ಜನರನ್ನು ಪ್ರಜಾಸತ್ತಾತ್ಮಕವಾಗಿ ತಯಾರು ಮಾಡಬೇಕು. ಜನಜಾಗೃತಿ ಮುಖ್ಯ.




**ಹೊ :** ಜಗದ್ಗುರುಗಳು ರಾಜಕೀಯ ಮಾಡುತ್ತಿದ್ದಾರೆ, ನಿಮ್ಮ ಅನಿಸಿಕೆ ಏನು ?

**ದೊ :** ನಾವು ಹೇಳ್ತೇವೆ ನಮ್ಮದು ಸೆಕ್ಯೂಲರಿಸಂ ಅಂತ. ಬಿ.ಜೆ.ಪಿ.ಯವರು ಹೇಳ್ತಾರೆ ನಮ್ಮದು ಸೂಡೋ ಸೆಕ್ಯೂಲರಿಸಂ ಅಂತ. ಸೆಕ್ಯೂಲರಿಸಂಅನ್ನು ಅವರು ಹೇಗೆ ಅರ್ಥಮಾಡಿಕೊಂಡಿದ್ದಾರೋ ತಿಳಿಯದು. ನನ್ನ ಅಭಿಪ್ರಾಯ ಇಷ್ಟೆ. ರಾಜಕೀಯಕ್ಕೆ ಧರ್ಮಗುರುಗಳನ್ನು ಬೆರೆಸಬೇಡಿ. ಧರ್ಮದ ಹೆಸರಲ್ಲಿ ರಾಜಕಾರಣ ಮಾಡುವವರನ್ನು ದೂರ ಇಡಬೇಕು. ಧರ್ಮದ ಕೆಲಸವನ್ನು ಅವರು ಸಮಾಜದಲ್ಲಿ ಮಾಡಿಕೊಳ್ಳಲಿ. ರಾಜಕೀಯದಲ್ಲಿ ಅದನ್ನು ತರಬಾರದು. ಸಮಾನ ಅಂತರವನ್ನು ಕಾಯ್ದುಕೊಳ್ಳಬೇಕು. ರಾಜಕೀಯಕ್ಕೆ ಅವರ ಪ್ರವೇಶ ಇರಕೂಡದು. ಇಂದು ಲಿಂಗಾಯತ, ಬ್ರಾಹ್ಮಣ, ಒಕ್ಕಲಿಗ ಅಂತ ಗುಂಪುಗಳನ್ನಾಗಿ ಮಾಡಿ ಎಲ್ಲ ಜಾತಿಯವರು ಜಾತಿಯ ಹಿನ್ನೆಲೆಯಲ್ಲಿ ದೇಶ ಒಡೆಯುತ್ತಾರೆ. ಸರಕಾರ ಜಾತಿ, ಧರ್ಮಗುರುಗಳಿಗೆ ದುಡ್ಡು ಕೊಡುವುದು ಸರಿಯಲ್ಲ, ಧರ್ಮಗುರುಗಳು ಸರಿಯಾಗಿದ್ದರೆ ಜನರೇ ಅವರಿಗೆ ದುಡ್ಡು ಕೊಡುತ್ತಾರೆ. ಇದೆಲ್ಲ ಸರಿಯಲ್ಲ.

**ಹೊ :** ಬಂಡವಾಳಶಾಹಿ ವ್ಯವಸ್ಥೆ ಬಿಕ್ಕಟ್ಟಿನಲ್ಲಿದೆ. ಅದನ್ನು ಮುಚ್ಚಿಕೊಳ್ಳಲು ಅದು ಸಮಾಜವನ್ನು ನೈತಿಕವಾಗಿ ಕುಸಿಯುವಂತೆ ಮಾಡುತ್ತಿದೆ. ಇದನ್ನು ತಡೆಯಲು ನಿಮ್ಮ ಸೂಚನೆಗಳೇನು ?

**ದೊ :** ಹೋರಾಟ ಮಾಡಬೇಕು. ಹಿಂದೆ ಸ್ವಾತಂತ್ರ್ಯ ಹೋರಾಟ ಸಂದರ್ಭದಲ್ಲಿ ಎಲ್ಲ ಸರಿ ಇತ್ತೇ? ಎಲ್ಲವೂ ಕುಲಗೆಟ್ಟಿದ್ದಾಗಲೇ, ಎಲ್ಲವೂ ಅಯೋಮಯವಾಗಿದ್ದಾಗಲೇ ನಾವು ಹೋರಾಟ ಮಾಡಲು ಮುಂದಾಗಬೇಕು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಗಾಂಧೀಜಿಯವರು ಜಮೀನ್ದಾರರಿಂದ ಟಾಟಾ, ಬಿರ್ಲಾರಿಂದಲೂ ಹಣ ತೆಗೆದುಕೊಳ್ಳುತ್ತಿದ್ದರು, ಏಕೆಂದ್ರೆ ಜನರ ಕೆಲಸವಾಗಬೇಕಲ್ಲವೆ ? ಸ್ವಾತಂತ್ರ್ಯ ಬಂದಮೇಲೆ ಜಮೀನ್ದಾರಿ ಪದ್ಧತಿ ನಿಷೇಧ ಮಸೂದೆ ತಂದರು. ಆಗ ಜಮೀನ್ದಾರರು 'ನಾವು ಹಾವುಗಳನ್ನು ಸಾಕಿದ್ದೆವು. ಅವು ನಮ್ಮ ವಿರುದ್ಧ ಬುಸುಗುಡುತ್ತಿವೆ' ಅಂದರು. ನಾವು ನೈತಿಕವಾಗಿ ಸರಿಯಿದ್ದರೆ ಭ್ರಷ್ಟರಿಗೆ ಹೆದರಬೇಕಾಗಿಲ್ಲ, ಆದರೆ ಸಂಘಟನೆ ಭದ್ರವಾಗಿರಬೇಕು. ಸ್ವಾತಂತ್ರ್ಯ ಹೋರಾಟದಲ್ಲಿ ಕಾರ್ಮಿಕ ಸಂಘಟನೆಗಳು ಬಹಳ ಕೆಲಸ ಮಾಡಿದವು. ೪೨ರ ಚಳುವಳಿಯಲ್ಲಿ ಎಲ್ಲಾ ನಾಯಕರು ಬಂಧನಕ್ಕೊಳಗಾಗಿದ್ದರು. ಕೆಲವೇ ಜನ ನಾವು ಹೊರಗಿದ್ದೆವು. ನಾಲ್ಕು ತಿಂಗಳು ವಿದ್ಯಾರ್ಥಿಗಳನ್ನು ಕರೆದುಕೊಂಡು ಚಳುವಳಿ ನಡೆಸಿದೆವು. ಅದನ್ನು ಇನ್ನೂ ಮೇಲ್ಮಟ್ಟಕ್ಕೆ ತೆಗೆದುಕೊಂಡು ಹೋಗಬೇಕಾದಾಗ ಕಾರ್ಮಿಕರ ಸಹಾಯ ಕೇಳಿದೆವು. ಬಹುತೇಕ ಕಮ್ಯುನಿಸ್ಟ್ ನಾಯಕರು ಜೈಲಿನಲ್ಲಿದ್ದರು. ಆಗ ಜೈಲಿನಿಂದ ಬಿಡುಗಡೆಯಾದ ಕಾರ್ಮಿಕ ನಾಯಕ ಎನ್.ಡಿ. ಶಂಕರ ಅವರ ಜೊತೆ ಚರ್ಚಿಸಿ ಕಾರ್ಮಿಕರನ್ನು ಬೀದಿಗಿಳಿಸಿದೆವು. ಆಗ ೧೪ ದಿನ ಕಾರ್ಮಿಕ ವರ್ಗ ಮುಷ್ಕರ ಹೂಡಿತು. ಇದರ ಪ್ರಭಾವ ರಾಜ್ಯದ ಇತರ ಕಡೆಗೂ ಆಯಿತು. ಮೈಸೂರು, ದಾವಣಗೆರೆ, ಕೆ.ಜಿ.ಎಫ್. ಎಲ್ಲ ಕಡೆ ಚಳುವಳಿ ನಡೆಯಿತು. ಕಾರ್ಮಿಕರು ಸಾಕಷ್ಟು ತ್ಯಾಗ ಮಾಡಿದ್ದಾರೆ. ಅಂಥ ಕಾರ್ಮಿಕರ ಶಕ್ತಿಯನ್ನು ಇಂದು ಕಳೆದುಕೊಂಡಿದ್ದೇವೆ. ಸರಕಾರಗಳು ನಮ್ಮ ಕೈಗಾರಿಕೆಗಳನ್ನು ಮುಚ್ಚಿ ವಿದೇಶಿ ಕಂಪನಿಗಳನ್ನು ತಂದಿದ್ದಾರೆ. ಇದು ದೊಡ್ಡ ಟ್ರಾಜಿಡಿ.

**ಹೊ :** ಸ್ವಯಂ ಸೇವಾ ಸಂಸ್ಥೆಗಳ ಮತ್ತು ಬಹುರಾಷ್ಟ್ರೀಯ ಕಂಪನಿಗಳ ಭ್ರಷ್ಟಾಚಾರ ತಡೆಯಲು ನಿಮ್ಮ ಸಲಹೆ ಏನು ?

**ದೊ :** ಅವರನ್ನೂ ಲೋಕಪಾಲ ವ್ಯಾಪ್ತಿಗೆ ತರಬೇಕು. ಬಹುರಾಷ್ಟ್ರೀಯ ಕಂಪನಿಗಳು ಬರುವುದೇ ಲಾಭ ಮಾಡಲಿಕ್ಕೆ. ಅವರು ನಮ್ಮ ಉದ್ಧಾರಕ್ಕೆ ಬರುವುದಿಲ್ಲ, ಅವರು ಬಂದು ನಮ್ಮ ರೈತರ ಭೂಮಿ ಪಡೆಯುತ್ತಾರೆ. ನೂರು ಎಕರೆ ಬೇಕಾದ್ರೆ ಸಾವಿರ ಎಕರೆ ಭೂಮಿ ಪಡೆಯುತ್ತಾರೆ. ಅವರ ಕಂಪನಿ ಮುಚ್ಚಿಹೋದರೂ ಭೂಮಿ ಮಾರಿ ಲಾಭ ಮಾಡಿಕೊಳ್ಳುತ್ತಾರೆ. ಅವರು ಬಂದು ಭ್ರಷ್ಟಾಚಾರ ಹೆಚ್ಚಿಸುತ್ತಾರೆ. ಅವರಿಗೆ ಐದು ವರ್ಷ ತೆರಿಗೆ ರಿಯಾಯಿತಿ ಇದೆ. ಇದನ್ನೆಲ್ಲ ಅವರಿಗೆ ಕೊಡಬೇಕಾದ್ರೆ ನಮ್ಮ ರಾಜಕಾರಣಿಗಳು ಸುಮ್ನೆ ಕೊಡ್ತಾರೆಯೇ ? ದುಡ್ಡು ತಿಂದೇ ಕೊಡ್ತಾರೆ. ಆ ಕಾರಣ ಅವರನ್ನೂ ಲೋಕಪಾಲ್ ವ್ಯಾಪ್ತಿಗೆ ತರಬೇಕು. ಇನ್ನು ಎನ್.ಜಿ.ಓ.ಗಳೇನು ಕಡಿಮೆ ಅಲ್ಲ, ನಮ್ಮ ಸಂತೋಷ ಹೆಗ್ಡೆಯವರು ಹೇಳ್ತಾ ಇದ್ರು, ದೇಶದಲ್ಲಿ ಪಂಚಾಯಿತಿಗಳಿಗೆ ಸಂಬಂಧಿಸಿದ ಯೋಜನೆಗಳನ್ನು ಜಾರಿಗೆ ತರಲು ಎನ್.ಜಿ.ಓ.ಗಳಿಗೆ ೧೫,೦೦೦ ಕೋಟಿ ದುಡ್ಡು ಕೊಡಲಾಯಿತು. ಆದರೆ ಇನ್ನೂ ಎನ್.ಜಿ.ಓ. ಗಳು ಪಡೆದ ಹಣಕ್ಕೆ ಲೆಕ್ಕ ಕೊಟ್ಟಿಲ್ಲ ಅಂತ. ಇದೆಲ್ಲ ನಡೀತಾಯಿದೆ. ಸ್ವಯಂಸೇವಾ ಸಂಸ್ಥೆಗಳನ್ನೂ ಲೋಕಪಾಲ್ ವ್ಯಾಪ್ತಿಗೆ ತರಬೇಕು. ಅಲ್ಲಿಯೂ ನಡೆಯುತ್ತಿರುವ ಭ್ರಷ್ಟಾಚಾರವನ್ನು ತಡೆಯಬೇಕು.

**ಹೊ :** ಕೊನೆಯದಾಗಿ, ಸ್ವಾತಂತ್ರ್ಯ ಹೋರಾಟಗಾರರಾಗಿ ಜನತೆಗೆ ನಿಮ್ಮ ಸಂದೇಶವೇನು ?

**ದೊ :** ಜನ ಹೋರಾಟಕ್ಕೆ ಮುಂದಾಗಬೇಕು. ತಾವು ಹಾಕುವ ಮತ ಅಮೂಲ್ಯವಾದದ್ದು, ನಿಜವಾದ ಸ್ವಾತಂತ್ರ್ಯ ಪಡೆಯಲು, ಪ್ರಜಾಪ್ರಭುತ್ವವನ್ನು ಗಟ್ಟಿಗೊಳಿಸಲು ಶ್ರಮಿಸಬೇಕು. 'ಹೊಸತು' ಪತ್ರಿಕೆ ಒಳ್ಳೆಯ ಕೆಲಸ ಮಾಡುತ್ತಿದೆ. ನಾನು ಆರಂಭದ ಸಂಚಿಕೆಯ ಬಿಡುಗಡೆಗೆ ಬಂದಿದ್ದೆ. ಅದು ಕೆಲವು ತತ್ವನೀತಿಗಳನ್ನು ಪಾಲಿಸಿಕೊಂಡು ಬಂದಿದೆ. ಜನಸಾಮಾನ್ಯರೂ ಓದುವ ರೀತಿಯಲ್ಲಿ 'ಹೊಸತು' ಬೆಳೆಯಲೆಂದು ಆಶಿಸುತ್ತೇನೆ.



ಸಂದರ್ಶನ : **ಡಾ|| ಸಿದ್ದನಗೌಡ ಪಾಟೀಲ**
'ಹೊಸತು' ಕಚೇರಿ, ಬೆಂಗಳೂರು



೧೯೪೧ರಲ್ಲಿ ಜನಿಸಿದ ಟೆರಿ ಈಗಲ್‌ಟನ್ ಮೂಲತಃ ಐರ್ಲೆಂಡಿನ ಒಂದು ಕುಟುಂಬದವನು. ಆದರೆ ಹುಟ್ಟಿದ್ದು, ವಿದ್ಯಾಭ್ಯಾಸ ಪಡೆದಿದ್ದು ಮತ್ತು ಕೆಲಸ ಮಾಡಿದ್ದು ಇಂಗ್ಲೆಂಡಿನಲ್ಲಿ, ಕೇಂಬ್ರಿಜ್, ಆಕ್ಸ್‌ಫರ್ಡ್, ಮ್ಯಾಂಚೆಸ್ಟರ್ ಮತ್ತು ಲೆಸ್ಟರ್ ವಿಶ್ವವಿದ್ಯಾನಿಲಯಗಳೊಡನೆ ಅವನದು ಐವತ್ತಕ್ಕೂ ಹೆಚ್ಚು ವರ್ಷಗಳ ಸಂಬಂಧ. ವ್ಯಾಸಂಗ ಕೇಂಬ್ರಿಜ್‌ನಲ್ಲಿ, ಆದರೆ ಪ್ರಾಧ್ಯಾಪಕನಾಗಿದ್ದುದು ಲೆಸ್ಟರ್‌ನಲ್ಲೇ ಹೆಚ್ಚು. ಬೇರೆ ಎರಡು ವಿಶ್ವವಿದ್ಯಾನಿಲಯಗಳಲ್ಲೂ ಬೋಧನೆ ಮತ್ತು ಸಂಶೋಧನೆ ನಡೆಸಿದ್ದಾನೆ. ಸಾಹಿತ್ಯ, ಇತಿಹಾಸ ಮತ್ತು ತತ್ತ್ವಶಾಸ್ತ್ರ ಅವನ ಆಸಕ್ತಿಯ ಕ್ಷೇತ್ರಗಳು. ಸಾಹಿತ್ಯ ಮೀಮಾಂಸೆ ಮತ್ತು ವಿಮರ್ಶೆಯಲ್ಲಿ ಆತನ ಕೃಷಿ ಅತ್ಯಂತ ಮೌಲಿಕವಾದ್ದು. ಆದಕ್ಕೆ ವಿಶೇಷ ಮಾನ್ಯತೆ ಲಭ್ಯವಾಗಿದೆ. ಮಾರ್ಕ್ಸ್‌ವಾದಿ ಸಿದ್ಧಾಂತದ ಬಗೆಗಿನ ಅವನ ತಿಳಿವು ಕೇವಲ ಅಧ್ಯಯನದಿಂದ ಬಂದಿದ್ದಲ್ಲ, ಅವನೊಬ್ಬ ಖ್ಯಾತ ಸಂಘಟಕ ಮತ್ತು ಹೋರಾಟಗಾರ ಕೂಡ. ಅಮೆರಿಕಾದಲ್ಲಿ ಇರುವ ಯೇಲ್ ವಿಶ್ವವಿದ್ಯಾನಿಲಯ ೨೦೧೧ರಲ್ಲಿ "ಮಾರ್ಕ್ಸ್ ಹೇಳಿದ್ದು ಏಕೆ ಸರಿ ?" ಎಂಬ ಅವನ ೨೪೦ ಪುಟಗಳ ಪುಸ್ತಕವನ್ನು ಪ್ರಕಟಿಸಿತು. ಮಾರ್ಕ್ಸ್‌ವಾದವನ್ನು ಖಂಡಿಸುವವರು ಸಾಮಾನ್ಯವಾಗಿ ಎತ್ತುತ್ತಲೇ ಬಂದಿರುವ ಆಕ್ಷೇಪಗಳನ್ನು ಪರೀಕ್ಷಿಸಿ ಸತ್ವಯುತವಾದ ವಿಮರ್ಶೆ ಮಾಡುವುದು ಅವನ ಉದ್ದೇಶ. ಈ ಪುಸ್ತಕವನ್ನು ಅನುಸರಿಸಿ ಡಾ॥ ಜಿ. ರಾಮಕೃಷ್ಣ ಅವರು ಸಂಗ್ರಹ ರೂಪದಲ್ಲಿ ಈಗಲ್‌ಟನ್‌ನ ಪ್ರತಿಪಾದನೆಯನ್ನು ಪರಿಚಯಿಸಿದ್ದಾರೆ. ಹತ್ತು ಕಂತುಗಳಲ್ಲಿ ಅದನ್ನು 'ಹೊಸತು' ಪ್ರಕಟಿಸಲು ಹರ್ಷಿಸುತ್ತದೆ. ಇದು ಎರಡನೆಯ ಕಂತು.

# ಮಾರ್ಕ್ಸ್‌ವಾದದಿಂದ ಸ್ವಾತಂತ್ರ್ಯದ ವಿಸ್ತರಣೆ

**ಪಾ**ಶ್ಚಿಮಾತ್ಯ ದೇಶಗಳ ಜನ ರಕ್ತಪಾತದಿಂದ ಅಧಿಕಾರಕ್ಕೆ ಬಂದಿರುವವರನ್ನು ಬೆಂಬಲಿಸುವುದುಂಟು. ಉದಾಹರಣೆಗೆ, ಕ್ರೈಸ್ತಧರ್ಮೀಯರು. ಉದಾರವಾದಿಗಳು ಹಾಗೂ ಸಂಪ್ರದಾಯವಾದಿಗಳು ಈ ದೇಶಗಳಲ್ಲಿ ರಕ್ತದ ಮಡುವಿನಲ್ಲಿ ಮುಳುಗಿರುವ ನಾಗರಿಕತೆಗಳನ್ನು ಪೋಷಿಸುವುದೂ ಉಂಟು. ಆಧುನಿಕ ಬಂಡವಾಳಶಾಹಿ ದೇಶಗಳ ಉಗಮದ ಚರಿತ್ರೆಯಲ್ಲಿ ಗುಲಾಮಗಿರಿ, ಜನಾಂಗಹತ್ಯೆ, ಹಿಂಸೆ, ಶೋಷಣೆ, ಎಲ್ಲಾ ಇವೆ. ಹಾಗಿದ್ದರೂ ದೂಷಣೆಗೆ ಮಾವೋನ ಚೀಣಾ ಮತ್ತು ಸ್ಟಾಲಿನ್ನನ ರಷ್ಯವನ್ನು ಮಾತ್ರ ಗುರಿ ಮಾಡುವುದು ಒಂದು ವಿಲಕ್ಷಣ ಪ್ರವೃತ್ತಿ. ಬಂಡವಾಳಶಾಹಿಯು ರಕ್ತದಲ್ಲಿ ಮಿಂದು ಬಂದಿದೆ; ಆದರೆ ಅದು ಬಹುಕಾಲ ಬಾಳಿಬಿಟ್ಟಿರುವುದರಿಂದ ಅದರ ಭೀಕರತೆಯನ್ನು ಮರೆಯಲಾಗಿದೆ. ಆದರೆ ಸ್ಟಾಲಿನ್ ಮತ್ತು ಮಾವೋ ಇತ್ತೀಚಿನವರು. ಮಾರ್ಕ್ಸ್ ಬಗ್ಗೆ ಅಂತಹ ಆಪಾದನೆ ಇಲ್ಲದಿರುವುದಕ್ಕೆ ಕಾರಣ ಅವನ ಕಾಲದಲ್ಲಿನ್ನೂ ಚಳುವಳಿಯು ಆರಂಭದ ಅವಸ್ಥೆಯಲ್ಲಿದ್ದುದು.

ಮೈಕ್ ಡೇವಿಸ್ 'ವಿಕ್ಟೋರಿಯಾ ಉತ್ತರಕಾಲೀನ ವಿಧ್ವಂಸಗಳು' ಎಂಬ ಕೃತಿ ಬರೆದಿದ್ದಾನೆ. ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಭಾರತ, ಆಫ್ರಿಕ, ಚೀಣಾ, ಬ್ರೆಜ಼ಿಲ್, ಕೊರಿಯ, ರಷ್ಯ ಮುಂತಾದೆಡೆ ಕ್ಷಾಮ-ಡಾಮರಗಳಿಂದ, ರೋಗರುಜಿನಗಳಿಂದ, ಸಹಸ್ರಾರು ಜನ ಸತ್ತಿದ್ದನ್ನು ಅವನು ದಾಖಲಿಸಿದ್ದಾನೆ. ಸಾವಿಗೆ ಕಾರಣ ಮಾರುಕಟ್ಟೆಯ ಹಟಮಾರಿ ಸಿದ್ಧಾಂತಗಳು : ಆಹಾರಧಾನ್ಯಗಳ ಗಗನಕ್ಕೇರಿದ ಬೆಲೆ. ಜನಸಾಮಾನ್ಯರಿಗೆ ಆಹಾರ ಕೊಳ್ಳಲಾಗುತ್ತಿರಲಿಲ್ಲ. ಆಹಾರವೇನೋ ಇತ್ತು, ಆದರೆ ಕೈಗೆ ಎಟುಕಲಿಲ್ಲ. ೧೯೮೦-೨೦೦೦ದ ಅವಧಿಯಲ್ಲಿ ದಿನಂಪ್ರತಿ ನೂರು ರೂಪಾಯಿಗಳಿಗೂ ಕಡಿಮೆ ಆದಾಯದಲ್ಲಿ ಜೀವಿಸಬೇಕಾಗಿದ್ದವರ ಸಂಖ್ಯೆಯೇನು ಕಡಿಮೆಯೆ ? ಈಗಲೂ ಬ್ರಿಟನ್ನಿನಲ್ಲಿ ಮೂರು ಮಕ್ಕಳ ಪೈಕಿ ಒಂದು ಮಗು ಅಪೌಷ್ಟಿಕತೆಗೆ ತುತ್ತಾಗಿದೆ, ಆದರೆ ಬ್ಯಾಂಕುಗಳ ನೇತಾರರು ಲಕ್ಷಗಟ್ಟಲೆ ಪೌಂಡುಗಳ ಬೋನಸ್ ಜೇಬಿಗೆ ತುಂಬಿಕೊಳ್ಳುತ್ತಾರೆ. ಒಂದು ಲಕ್ಷ ಪೌಂಡ್ ಕಡಿಮೆಯಾದರೆ ಏನೋ ಅನಾಹುತವಾಯಿತೆಂದು ಚಡಪಡಿಸುತ್ತಾರೆ.

ಇಂತಹ ಹೊಲಸನ್ನು ಬಿತ್ತಿರುವ ಬಂಡವಾಳಶಾಹಿಯು ಕೆಲವು ಪ್ರಶಸ್ತ ಉಡುಗೊರೆಗಳನ್ನು ನಮಗೆ ನೀಡಿದೆ. ಮಧ್ಯಮ ವರ್ಗವನ್ನು ಮಾರ್ಕ್ಸ್ ಶ್ಲಾಘಿಸುತ್ತಿದ್ದ. ಆ ವರ್ಗವಿಲ್ಲದೆ ಸ್ವಾತಂತ್ರ್ಯ, ಪ್ರಜಾಪ್ರಭುತ್ವ, ನಾಗರಿಕ ಹಕ್ಕುಗಳು, ಸ್ತ್ರೀವಾದ, ವೈಜ್ಞಾನಿಕ ಪ್ರಗತಿ ಇತ್ಯಾದಿಗಳೆಲ್ಲಾ ಬರಲು ಸಾಧ್ಯವಿತ್ತೆ? ಆದರೆ ಅವುಗಳ ಜೊತೆ ನಮಗೆ ಮಾರುಕಟ್ಟೆಯ ಕುಸಿತ, ಬಾಲಕಾರ್ಮಿಕರ ದುಡಿಮೆ, ಫ್ಯಾಸಿಸ್ಟ್ ದಬ್ಬಾಳಿಕೆ, ಅಹ್ಲುವಾಲಿಯ, ಇತ್ಯಾದಿಗಳೂ ಬಂದು ಬಡಿದಿವೆ. ಆರ್ಥಿಕ ಹಿಂದುಳಿಯುವಿಕೆಯಿಂದ ಆಧುನಿಕ ಔದ್ಯಮಿಕ ಸಮಾಜದತ್ತ ದಾಪುಗಾಲು



ಹಾಕಲು ಚೀಣಾ ಮತ್ತು ಸೋವಿಯೆತ್ ಒಕ್ಕೂಟ ತೆತ್ತ ಬೆಲೆ ಕಡಿಮೆಯೆ? ಅಲ್ಲಿ ಮಾನವಜೀವವು ತಿಂದ ಪೆಟ್ಟಿಗೆ ಪಾಶ್ಚಿಮಾತ್ಯ ಬಂಡವಾಳಶಾಹಿಯ ಹಗೆತನವೂ ದೊಡ್ಡ ಕಾರಣ. ಆ ಹಗೆತನವು ಸೋವಿಯೆತ್ ಒಕ್ಕೂಟವನ್ನು ಶಸ್ತ್ರ ಪೈಪೋಟಿಗೆ ನೂಕಿ ಅದರ ಆರ್ಥಿಕತೆಯನ್ನು ಹಾಳುಮಾಡಿತು, ಕಡೆಗೆ ವಿನಾಶಕ್ಕೆ ದೂಡಿತು. ಹಾಗೆ ನಶಿಸುವ ಮುನ್ನ ಅದು ಸಾಧಿಸಿದ್ದ ಪ್ರಗತಿ ಅಗಾಧವಾದ್ದು: ಕಡಿಮೆ ಬೆಲೆಗೆ ವಸತಿಗೃಹಗಳು, ಇಂಧನ, ಸಾರಿಗೆ, ಸಂಸ್ಕೃತಿ, ಪೂರ್ಣಾವಧಿಯ ಉದ್ಯೋಗ, ಆಶ್ಚರ್ಯವೆನಿಸುವಷ್ಟು ಸಾಮಾಜಿಕ ಸೇವೆಗಳು, ಇತ್ಯಾದಿ. ಪೂರ್ವ ಯೂರೋಪ್ ಮತ್ತು ಸೋವಿಯೆತ್ ಒಕ್ಕೂಟದ ಪ್ರದೇಶದಲ್ಲಿ ಹಿಂದೆಂದೂ ಅಂತಹ ಉತ್ತಮ ಸೌಲಭ್ಯಗಳು, ಭೌತಿಕ ಜೀವನದಲ್ಲಿ ಸಮಾನತೆ, ಇದ್ದುದಿಲ್ಲ. ಪೂರ್ವ ಜರ್ಮನಿಯಲ್ಲಿ ಮಕ್ಕಳ ಆರೈಕೆಗೆ ಸಮನಾದ್ದು ವಿಶ್ವದಲ್ಲಿ ಬೇರೆಲ್ಲೂ ಇರಲಿಲ್ಲ. ಸೋವಿಯೆತ್ ಒಕ್ಕೂಟವು ಹಿಟ್ಲರನ ಫ್ಯಾಸಿಸ್ಟ್ ಸೈನ್ಯವನ್ನು ಎಷ್ಟು ಅದ್ಭುತವಾಗಿ ಹಿಮ್ಮೆಟ್ಟಿಸಿತ್ತು! ಜೊತೆಗೆ, ವಸಾಹತುಶಾಹಿಯು ಕೊನೆಗೊಳ್ಳಲು ಸಹ ಆ ದೇಶವು ಉತ್ತಮ ಕಾಣಿಕೆ ನೀಡಿತ್ತು. ಜನತೆಯ ನಡುವೆ ಎಂತಹ ಸೌಹಾರ್ದತೆ ಮೂಡಿದ್ದಿತು! ಪಾಶ್ಚಿಮಾತ್ಯ ದೇಶಗಳು ಬೇರೆ ದೇಶಗಳ ಜನರನ್ನು ಕೊಲ್ಲುವಾಗ ಮಾತ್ರ ಅಂತಹ ಸೌಹಾರ್ದತೆಯನ್ನು ತಮ್ಮಲ್ಲಿ ಮೂಡಿಸಿಕೊಳ್ಳುತ್ತವೆ.

ಅಂದರೆ, ಇದೆಲ್ಲಾ ಸ್ವಾತಂತ್ರ್ಯಕ್ಕೆ ಪರ್ಯಾಯಗಳೆಂದು ಅರ್ಥವಲ್ಲ. ಪ್ರಜಾಪ್ರಭುತ್ವವೂ ಬೇಕು, ಅಂಗಡಿಗಳಲ್ಲಿ ಸುಲಭ ಬೆಲೆಗೆ ತರಕಾರಿಯೂ ದೊರಕಬೇಕು. ಸೋವಿಯೆತ್ ದೇಶದ ಬಣಕ್ಕೆ ಪಾಶ್ಚಿಮಾತ್ಯರ ಅರ್ಥದ ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯ ಪ್ರವೇಶಿಸುವಾಗ ಅಲ್ಲಿಯ ಆರ್ಥಿಕತೆಯಲ್ಲಿ ಅರಾಜಕತೆಯನ್ನು ತುಂಬಿತು. ಖಾಸಗಿತನದ ಹೆಸರಲ್ಲಿ ಸಾರ್ವಜನಿಕ ಸಂಪತ್ತಿನ ದರೋಡೆ, ಲಕ್ಷಗಟ್ಟಲೆ ಜನರ ನಿರುದ್ಯೋಗ, ಎಂದೂ ಕಂಡಿರದಷ್ಟು ಬಡತನ ಮತ್ತು ಅಸಮಾನತೆ, ಮಕ್ಕಳ ಪುಕ್ಕಟೆ ಪಾಲನಾಕೇಂದ್ರಗಳ ರದ್ದತಿ, ಮಹಿಳಾ ಹಕ್ಕುಗಳ ನಿರೋಧ, ಹೀಗೆ ಹಿಂದಿನ ಸಮಾಜ ಕಲ್ಯಾಣದ ಅಂಶಗಳೆಲ್ಲಾ ಇಲ್ಲವಾದುವು.

ಕಮ್ಯುನಿಸ್ಟ್ ಅಧಿಕಾರದಿಂದ ಉಂಟಾದ ಲಾಭ-ನಷ್ಟಗಳ ಪಟ್ಟಿಯಲ್ಲಿ ಯಾವುದು ಅಧಿಕವೆಂಬುದಷ್ಟೇ ಮುಖ್ಯವಲ್ಲ. ಸೋವಿಯೆತ್ ಒಕ್ಕೂಟವು ಅಸ್ತಿತ್ವಕ್ಕೆ ಬಂದಾಗಿನ ಸನ್ನಿವೇಶವು ಒಂದು ರೀತಿಯ ಸರ್ವಾಧಿಕಾರವನ್ನು ಅನಿವಾರ್ಯವಾಗಿಸಿತು. ಆದರೆ ಅದು ಸ್ಟಾಲಿನ್-ಮಾದರಿ ಸರ್ವಾಧಿಕಾರ ಆಗಬೇಕಿರಲಿಲ್ಲ. ಮಾವೋ ಮತ್ತು ಸ್ಟಾಲಿನ್ ಒಂದು ರೀತಿಯಲ್ಲಿ ಸಮಾಜವಾದಕ್ಕೆ ಮಸಿ ಬಳಿದರು. ಸಮಾಜವಾದದಿಂದ ಅನನ್ಯ ಪ್ರತಿಫಲ ಬಯಸುತ್ತಿದ್ದ ಅನೇಕ ದೇಶಗಳ ಜನರಿಗೆ ಇದೊಂದು ಆಘಾತವಾಯಿತೆಂದರೂ ನಡೆಯುತ್ತದೆ. ಆದರೆ ಬಂಡವಾಳಶಾಹಿಯು ಕಳಂಕರಹಿತವೆ? ಅದು ನೀಡಿರುವ ಅಪೂರ್ವ ಕೊಡುಗೆ ಎಂಥದು? ಪ್ರಸ್ತುತ, ಪಾಶ್ಚಿಮಾತ್ಯ ದೇಶಗಳಲ್ಲಿ ನಿರುದ್ಯೋಗವು ಕೋಟಿಗಟ್ಟಲೆ ಜನರನ್ನು ತಟ್ಟಿದೆ ಮತ್ತು ಇನ್ನೂ ಹೆಚ್ಚುತ್ತಿದೆ. ಬಂಡವಾಳಶಾಹಿ ಆರ್ಥಿಕತೆ ತಾನು ಉಸಿರಾಡುತ್ತಿರಲು ಕೋಟಿಗಟ್ಟಲೆ ಡಾಲರುಗಳನ್ನು ಹಲವು ದೇಶಗಳ ಪ್ರಜೆಗಳಿಂದ ಸೆಳೆದುಕೊಳ್ಳುತ್ತಿದೆ, ಲೂಟಿ ಮಾಡುತ್ತಿದೆ. ಮೊದಲೇ ದುರ್ಭರ ಜೀವನ ನಡೆಸುತ್ತಿರುವವರ ಮೇಲೆ ಈ ದೌರ್ಜನ್ಯದ ಬರೆ ಬೇರೆ! ಇನ್ನು ಬ್ಯಾಂಕರುಗಳು, ಆರ್ಥಿಕ ವಹಿವಾಟು ನಡೆಸುವ ಮುತ್ಸದ್ದಿಗಳು, ಏನು ಮಾಡುತ್ತಿದ್ದಾರೆ? ವಿಶ್ವದ ಆರ್ಥಿಕತೆಯನ್ನು ಪಾತಾಳಕ್ಕೆ ನೂಕಿ ತಾವು ಸೌಂದರ್ಯವರ್ಧನೆ ಮಾಡಿಕೊಳ್ಳಲು ಸಾಲುಗಟ್ಟಿ ನಿಂತಿದ್ದಾರೆ. ತಮ್ಮ ನಿಜರೂಪವನ್ನು ಮುಚ್ಚಿಕೊಳ್ಳುವ ಹುನ್ನಾರ ಇದು. ಹಾಗೆ ಮುಚ್ಚಿಕೊಳ್ಳದಿದ್ದರೆ ಹಾದಿಬೀದಿಗಳಲ್ಲಿ ಜನ ಅವರ ಕಾಲು-ಕೈ ಮುರಿದು ತಲೆಗಳನ್ನು ಚೆಂಡಾಡಿಯಾರು!

ವಿಶ್ವದ ಕೆಲ ವಿಭಾಗಗಳಲ್ಲಿ ಬಂಡವಾಳಶಾಹಿಯು ಏಳಿಗೆಯನ್ನು ತಂದಿದೆ; ಆ ಅರ್ಥದಲ್ಲಿ ಅದು ಉಪಯುಕ್ತವೇ ಹೌದು. ಸ್ಟಾಲಿನ್ ಮತ್ತು ಮಾವೋ ಸಹ ಅದನ್ನು ಮಾಡಿದ್ದಾರೆ. ಎರಡರಲ್ಲೂ ಮಾನವ ದಂಡ ತೆತ್ತಿದ್ದಾನೆ. ಬಂಡವಾಳಶಾಹಿಯ ವಿಚಾರ ಕೇವಲ ಜನಾಂಗ ಹತ್ಯೆ, ಗುಲಾಮರ ಮಾರಾಟ, ಸಾಮ್ರಾಜ್ಯಶಾಹಿ ಉಪಟಳ, ಕ್ಷಾಮ, ಮುಂತಾದುವಕ್ಕೆ ಸೀಮಿತವಲ್ಲ. ಅದರ ದೊಡ್ಡ ನ್ಯೂನತೆ ಇದು: ಶ್ರೀಮಂತಿಕೆಯನ್ನು ಸೃಷ್ಟಿಸುವಾಗೆಲ್ಲಾ ಅದು ಜೊತೆಜೊತೆಯಲ್ಲೇ ಕೊಳೆಗೇರಿಗಳನ್ನು, ಹಾನಿಯನ್ನು, ಸೃಷ್ಟಿಸಿದೆ. ಅದೇನು ಮಹಾ, ಬಿಡಿ, ಎನ್ನಬಹುದೇನೊ; ಏಕೆಂದರೆ, ಬಂಡವಾಳಶಾಹಿ ಜೀವನಕ್ರಮವು ಇಡೀ ಭೂಮಂಡಲವನ್ನು ವಿನಾಶದ ಅಂಚಿಗೆ ತಂದು ನಿಲ್ಲಿಸಿದೆ. ಒಬ್ಬ ಪಾಶ್ಚಾತ್ಯ ಅರ್ಥಶಾಸ್ತ್ರಜ್ಞ ಹೇಳುತ್ತಾನೆ, ''ವಾಯುಮಂಡಲದ ಬದಲಾವಣೆಯು ಇತಿಹಾಸದಲ್ಲಿ ಕಂಡುಬಂದಿರುವ ಮಾರುಕಟ್ಟೆಯ ವೈಫಲ್ಯಗಳಲ್ಲಿ ಅತ್ಯುಗ್ರವಾದುದು,'' ಎಂದು.

ಬಡತನದ ಸನ್ನಿವೇಶದಲ್ಲಿ ಸಮಾಜವಾದವು ಸಾಧ್ಯವೆಂದು ಎಂದೂ ಮಾರ್ಕ್ಸ್ ಬಗೆದಿರಲಿಲ್ಲ. ಅಂತಹ ಯೋಜನೆ ಸರ್ವಥಾ ಅಸಾಧ್ಯ : ಮಧ್ಯಯುಗದಲ್ಲಿ ಇಂಟರ್‌ನೆಟ್ ಇರಬೇಕಿದ್ದಿತೆಂದು ಆಗ್ರಹಿಸುವುದರಷ್ಟೇ ಅಸಾಧ್ಯದ ಮಾತಿದು. ಲೆನಿನ್, ಟ್ರಾಟ್ಸ್ಕಿ, ಅಥವಾ ಬೇರೆ ಬಾಲ್ಶೆವಿಕರಾರೂ ಅದು ಸಾಧ್ಯವೆಂದು ನಿರೀಕ್ಷಿಸಿರಲಿಲ್ಲ. ಆದರ ಪ್ರಯೋಗ ಮಾಡಹೊರಟವರಲ್ಲಿ ಸ್ಟಾಲಿನ್ ಮೊದಲಿಗ. ಸಂಪತ್ತು ಅತಿ ಕಡಿಮೆ ಮಟ್ಟದಲ್ಲಿದ್ದರೆ ಅದನ್ನು ಸರ್ವರಿಗೂ ಉಪಯೋಗವಾಗುವಂತೆ ಹಂಚುವುದಾದರೂ ಹೇಗೆ! ದುರ್ಭಿಕ್ಷವು ತಾಂಡವ ವಾಡುತ್ತಿದ್ದರೆ ಸಾಮಾಜಿಕ ವರ್ಗಗಳನ್ನು ರದ್ದುಗೊಳಿಸಲು ಸಾಧ್ಯವೆ? ಸೀಮಿತವಾದ ಮಿಗುತಾಯವು ಎಲ್ಲರ ಅವಶ್ಯಕತೆಗಳನ್ನೂ ಪೂರೈಸಲಾರದು, ಆದ್ದರಿಂದ ಸಂಘರ್ಷಗಳು ಮತ್ತೆ ಅನಿವಾರ್ಯವಾಗಿ ನೆಲೆಗೊಳ್ಳುತ್ತವೆ. ಅಂತಹ ಹಿನ್ನೆಲೆಯಲ್ಲಿ ಕ್ರಾಂತಿಯಾದರೆ ''ಅದೇ ಹಳೆಯ ಕೊಳಕು ವ್ಯವಹಾರ'' ಆರಂಭವಾಗುತ್ತದೆ ಎಂದು ''ದ ಜರ್ಮನ್ ಐಡಿಯಾಲಜಿ'' ಎಂಬ ಗ್ರಂಥದಲ್ಲಿ ಮಾರ್ಕ್ಸ್ ಉದ್ಗರಿಸಿದ್ದಾನೆ. ದುರ್ಭಿಕ್ಷೆಯನ್ನು ಸಮಾನವಾಗಿ ಹಂಚಬಹುದು, ಅಷ್ಟೆ. ಏನೂ ಇಲ್ಲದ ಸ್ಥಿತಿಯಿಂದ ಬಂಡವಾಳದ ಶೇಖರಣೆಯತ್ತ ಹೋಗಬೇಕಾದರೆ ಮತ್ತೆ ಮೃಗೀಯ ಲಾಭದ ಆಸೆ ಮರುಕಳಿಸೀತು. ಸ್ವ-ಹಿತ ಎಂಬುದು ಹಿಮಾಲಯದಷ್ಟು ಸಂಪತ್ತನ್ನು ಒಗ್ಗೂಡಿಸಬಹುದು, ಆದರೆ ಅದರೊಟ್ಟಿಗೆ ಅತ್ಯಂತ ದಾರುಣವಾದ ಬಡತನವೂ ಹೊಮ್ಮುತ್ತದೆ.

ಯಾವುದೋ ಒಂದು ದೇಶದಲ್ಲಿ ಮಾತ್ರವೇ ಸಮಾಜವಾದವು ಸ್ಥಿರವಾಗಿ ನೆಲೆಗೊಳ್ಳಬಹುದೆಂದು ಸಹ ಮಾರ್ಕ್ಸ್‌ವಾದಿಗಳು ಭಾವಿಸಲಿಲ್ಲ. ಆ ಚಳುವಳಿಯು ಅಂತರರಾಷ್ಟ್ರೀಯವಾಗಿಯೇ ತೀರಬೇಕು. ಇದೇನೋ ಭಾವನಾತ್ಮಕ ನಿಲುವಲ್ಲ, ವಸ್ತುಸ್ಥಿತಿ ಇರುವುದೇ ಹಾಗೆ. ಒಂದು ಸಮಾಜವಾದಿ ರಾಷ್ಟ್ರಕ್ಕೆ ಅಂತರರಾಷ್ಟ್ರೀಯ ಬೆಂಬಲ ದೊರಕದಿದ್ದರೆ ದುರ್ಭಿಕ್ಷವನ್ನು ನೀಗಿಸಲು

ಬೇಕಾದ ಜಾಗತಿಕ ಸಂಪನ್ಮೂಲಗಳು ಅದಕ್ಕೆ ಲಭ್ಯವಾಗುವುದಿಲ್ಲ. ಉತ್ಪಾದನೆಯು ಸಂಕೀರ್ಣವಾಗಿದ್ದು, ಅದು ದೇಶದೇಶಗಳಲ್ಲಿ ಚದುರಿಹೋಗಿರುವಾಗ, ಸಮಾಜವಾದದ ಬೇರು ಅಂತರರಾಷ್ಟ್ರೀಯವೇ ಆಗಿರಬೇಕು; ಒಂದು ನಿರ್ದಿಷ್ಟ ದೇಶದ ಉತ್ಪಾದನಾ ಸಾಮರ್ಥ್ಯವು ಸಾಲುವುದಿಲ್ಲ. ೧೯೨೦ರ ದಶಕದಲ್ಲಿ 'ಒಂದು ದೇಶದಲ್ಲಿ ಸಮಾಜವಾದ' ಎಂಬ ಪ್ರಯೋಗವನ್ನು ಸ್ಟಾಲಿನ್ ಮಾಡಹೊರಟಿದ್ದು ಸೋವಿಯೆತ್ ದೇಶದ ಬೆಂಬಲಕ್ಕೆ ಬೇರೆ ದೇಶಗಳು ಮುಂದಾಗಲಿಲ್ಲ ಎಂಬ ಕಾರಣಕ್ಕಾಗಿ, ಅಷ್ಟೆ. ಸಮಾಜವಾದಿ ಕ್ರಾಂತಿಗಳು ಎಲ್ಲಾದರೂ ಒಂದೆಡೆ ಆರಂಭವಾಗಬೇಕು, ಆದರೆ ಆ ದೇಶದ ಎಲ್ಲೆಗಳ ನಡುವೆಯೇ ಅದು ಪೂರ್ಣಗೊಳ್ಳಲಾರದು. ಒಂದು ಪ್ರತ್ಯೇಕ ಒಂಟಿ ದೇಶದಲ್ಲಿ ಅದರ ಸಾಧನೆಯನ್ನು ನೋಡಿ ಸಮಾಜವಾದದ ಬಗ್ಗೆ ತೀರ್ಮಾನಕ್ಕೆ ಬರಬಾರದು. ಎಲ್ಲೋ ಒಂದು ಫ್ಲಾರಿಡಾದ ಉನ್ಮತ್ತರನ್ನು ನೋಡಿ ಮಾನವ ಜನಾಂಗದ ಲಕ್ಷಣಗಳನ್ನು ಸಾಮಾನ್ಯೀಕರಿಸಿ ಹೇಳಲಾಗುವುದಿಲ್ಲವಲ್ಲ, ಹಾಗೆ.

ಕನಿಷ್ಠ ಮಟ್ಟದಿಂದ ಆರ್ಥಿಕತೆಯ ಅಭಿವೃದ್ಧಿ ಎಂಬುದು ಮೈಮುರಿಯುವ ಕೆಲಸ, ಎಷ್ಟೋ ಬಾರಿ ಹುಮ್ಮಸ್ಸು ಅಡಗಿಹೋಗಬಹುದು. ಎಲ್ಲ ಜನರೂ ಏಕಕಾಲಕ್ಕೆ ಹಾಗೆ ಕಷ್ಟಕ್ಕೆ ಸಮರ್ಪಿಸಿಕೊಳ್ಳುವುದು ಊಹಾತೀತ. ಆದ್ದರಿಂದ, ಏನಿದ್ದರೂ ಸಮಾಜವಾದಿ ಚಳುವಳಿಯು ಕ್ರಮೇಣ ಸಾಗಬೇಕು, ಪ್ರಜಾಪ್ರಭುತ್ವದ ಅಂಕೆಯಲ್ಲಿ ನಡೆಯಬೇಕು. ಇಲ್ಲದಿದ್ದರೆ ಸ್ವಯಂಪ್ರೇರಣೆಯಿಂದ ಮುಂದಾಗದವರನ್ನು ಬಲವಂತವಾಗಿ ಬಗ್ಗಿಸಬೇಕಾಗುತ್ತದೆ. ಅದು ಸಮಾಜವಾದಿ ಮೌಲ್ಯಕ್ಕೆ ಹೊರತಾದ್ದು. ಕೃಷಿಯನ್ನು ಸಾಮುದಾಯಿಕವಾಗಿ ವ್ಯವಸ್ಥೆಗೊಳಿಸಲು ಹೊರಟಾಗ ಸೋವಿಯೆತ್ ಒಕ್ಕೂಟದಲ್ಲಿ ಬಿಕ್ಕಟ್ಟು ತಲೆದೋರಿದ್ದು ಆ ಕಾರಣಕ್ಕೆ. ಆಗ ಸಂಭವಿಸುವ ವಿಲಕ್ಷಣ ಬೆಳವಣಿಗೆಯು ಸಮಾಜವಾದದ ಮೇಲ್ಮೈಯನ್ನು ಕಲುಷಿತಗೊಳಿಸುತ್ತದೆ, ಜನಪ್ರಿಯ ಪ್ರಜಾಪ್ರಭುತ್ವ ಮತ್ತು ನೈಜ ಸ್ವಯಮಾಡಳಿತ ಮುಕ್ಕಾಗುತ್ತವೆ. ಆರ್ಥಿಕ ಆಯಕಟ್ಟಿನ ರಚನೆಯಲ್ಲಿರುವ ಮುಗ್ಗಟ್ಟು ಇದು; ಔತಣಕೂಟಕ್ಕೆಂದು ಆಹ್ವಾನ ಬಂತೆಂದು ಹೋದರೆ ನೀವೇ ಒಲೆ ಹೊತ್ತಿಸಿ ಅಡಿಗೆ ಮಾಡಿಕೊಳ್ಳಬೇಕಾಗುವ ಪ್ರಸಂಗ; ಅಡಿಗೆಮನೆಯನ್ನು ಸಹ ನೀವೇ ಸಿದ್ಧಗೊಳಿಸಿಕೊಳ್ಳಬೇಕು ! ಹಾಗಾದರೆ ನಿಮಗೆ ಸಂತೋಷ ಎಲ್ಲಿಯದು !

ಸಮಾಜವಾದಿ ವ್ಯವಸ್ಥೆಗೆ ಮೂಲ ಅಗತ್ಯ ಕೌಶಲ್ಯವುಳ್ಳ ವಿದ್ಯಾವಂತ ಜನ, ರಾಜಕೀಯ ಪ್ರಜ್ಞೆ, ನೆಲೆಗೊಂಡ ನಾಗರಿಕ ಸಂಸ್ಥೆಗಳು, ಉತ್ತಮ ತಾಂತ್ರಿಕ ಜ್ಞಾನ, ಉದಾರವಾದಿ ಪರಂಪರೆ ಮತ್ತು ಪ್ರಜಾಪ್ರಭುತ್ವದಲ್ಲಿನ ನಿಷ್ಠೆ. ನಿಮ್ಮ ರಸ್ತೆಯನ್ನೇ ರಿಪೇರಿ ಮಾಡಿಕೊಳ್ಳಲಾಗದ, ಊಟಕ್ಕೆ ಒಂದು ಕೋಳಿ ಬಿಟ್ಟು ಬೇರೇನೂ ಇಲ್ಲದಿರುವ ಸಂದರ್ಭದಲ್ಲಿ ನೀವೇನು ಮಾಡಬಲ್ಲಿರಿ ? ವಸಾಹತುಶಾಹಿ ದರೋಡೆಗೆ ತುತ್ತಾಗಿದ್ದ ದೇಶಗಳ ಫಜೀತಿಗೆ ಪಾರವಿಲ್ಲ, ಏಕೆಂದರೆ ವಸಾಹತು ಯಜಮಾನರು ಸರ್ವನಾಶ ಮಾಡಿ ಹೋಗಿರುತ್ತಾರೆ. ಮಾರ್ಕ್ಸ್ ಹೇಳುವ ಇನ್ನೊಂದು ಅಗತ್ಯವನ್ನೂ ಗಮನಿಸಬೇಕು : ಸಮಾಜವಾದಕ್ಕೆ ದುಡಿಯುವ ಸಮಯದ ಕಡಿತ ಸಾಧ್ಯವಾಗಿರಬೇಕು. ಇಲ್ಲದಿದ್ದರೆ ವೈಯ್ಯಕ್ತಿಕ ಆಶಯಗಳ ಪೂರೈಕೆಗೆ ಸಮಯವೆಲ್ಲಿ ಇರುತ್ತದೆ ? ರಾಜಕೀಯ-ಆರ್ಥಿಕ ನಿರ್ವಹಣೆಯಲ್ಲಿ ಭಾಗವಹಿಸಲು ಸಮಯ ಬೇಕು. ಪಾದರಕ್ಷೆಗಳಿಲ್ಲದ ಸನ್ನಿವೇಶ, ಅವನ್ನು ಒದಗಿಸಲು ಕೇಂದ್ರೀಕೃತ ವ್ಯವಸ್ಥೆ! ಅಧಿಕಾರಶಾಹಿಗೆ ಇದು ಸೊಗಸಾದ ಹಿನ್ನೆಲೆ. ಸೋವಿಯೆತ್ ಒಕ್ಕೂಟವು ಅಸ್ತಿತ್ವಕ್ಕೆ ಬಂದಾಗ ವೈರಿಗಳ ಆಕ್ರಮಣ ಎದುರಿಸಬೇಕಾಯಿತು. ಆಗ ಅಧಿಕಾರದ ಚಲಾವಣೆಯಲ್ಲಿ ಎಂತಹ ಸಾರ್ವಜನಿಕ ಸಹಭಾಗಿತ್ವ ಸಾಧ್ಯವಿತ್ತು! ಎರಡನೆ ಮಹಾಯುದ್ಧದ ಕಾಲದಲ್ಲಿ ಬ್ರಿಟನ್ನಿನ ಪರಿಸ್ಥಿತಿ ಹೇಗಾಯಿತು, ನೋಡಿ, ಅದು ಸ್ವತಂತ್ರ ದೇಶದ ಮಾದರಿಯದಾಗಿರಲು ಶಕ್ಯವಿರಲಿಲ್ಲ. ಅಂದರೆ ಸಮಾಜವಾದದ ಅಡಿಪಾಯ ಸುಭಿಕ್ಷೆ. ಮಾರ್ಕ್ಸ್ ಮುಂತಾದವರೆಲ್ಲಾ ಅದನ್ನು ಒತ್ತಿ ಹೇಳಿದ್ದಾರೆ. ನಿಮ್ಮಲ್ಲಿ ಸುಭಿಕ್ಷೆ ಇಲ್ಲದಿದ್ದರೆ ನೆರೆಯವರಾದರೂ ಸಹಾಯ ನೀಡುವಂತಿರಬೇಕು. ಹಾಗಾದರೆ ರಷ್ಯಾಕ್ಕೆ ಬೇಕಿದ್ದುದೇನು ? ಜರ್ಮನಿಯಂತಹ ದೇಶದಲ್ಲೂ ಕ್ರಾಂತಿ ಸಂಭವಿಸುವುದು. ಬೇರೆ ದೇಶಗಳ ದುಡಿಯುವ ವರ್ಗಗಳು ಅಲ್ಲೆಲ್ಲಾ ಬಂಡವಾಳಶಾಹಿಯ ಮೂಲೋತ್ಪಾಟನೆ ಮಾಡಿದ್ದರೆ, ಅಲ್ಲಿಯ ಉತ್ಪಾದನಾ ಶಕ್ತಿಗಳನ್ನೆಲ್ಲ ಸ್ವಾಧೀನಪಡಿಸಿಕೊಂಡಿದ್ದರೆ, ದುಡಿಯುವ ಜನತೆಯ ಮೊದಲ ಪ್ರಭುತ್ವಕ್ಕೆ ಶ್ರೀರಕ್ಷೆ ನೀಡಬಹುದಿತ್ತು. ಅದೇನೂ ಅಸಾಧ್ಯವಾದುದಾಗಿರಲಿಲ್ಲ, ಏಕೆಂದರೆ ಆಗ್ಗೆ ಯೂರೋಪಿನಲ್ಲಿ ಕ್ರಾಂತಿಯ ಕಿಡಿ ಆಶಾದಾಯಕವಾಗಿ ಹರಡಿತ್ತು, ಬರ್ಲಿನ್, ವಾರ್ಸಾ, ವಿಯೆನ್ನಾ, ಮ್ಯೂನಿಕ್, ರೀಗಾ, ಮುಂತಾದೆಡೆಗಳಲ್ಲಿ ದುಡಿಯುವ ಜನರು ತಮ್ಮದೇ ಸಮಿತಿಗಳನ್ನು ರಚಿಸಿಕೊಂಡಿದ್ದರು. ಆ ಸಮಿತಿಗಳನ್ನು ಕೊಚ್ಚಿಹಾಕಿದಾಗ ಲೆನಿನ್ ಮತ್ತು ಟ್ರಾಟ್‌ಸ್ಕಿ ತಮ್ಮ ಕ್ರಾಂತಿಯ ಭವಿಷ್ಯ ಮಂಕಾಯಿತೆಂದು ನೊಂದುಕೊಂಡರು.

**ತಾತ್ಕಾಲಿಕ**

ಮಾನವನ
ಬಾಳೆಂಬುದು
ತಾತ್ಕಾಲಿಕ;
ಚಿರಕಾಲದ
ಪುನರ್ನಾಮ
ಸಾಲು ಮರ ತಿಮ್ಮಕ್ಕ।

**ಡಾ|| ವಿ. ಪುಗಳೇಂದಿ**, ಬಳ್ಳಾರಿ

ಅಂದರೆ, ಅನಭಿವೃದ್ಧಿಯ ಹಿನ್ನೆಲೆಯಲ್ಲಿ ಸಮಾಜವಾದಿ ವ್ಯವಸ್ಥೆಯ ಸಂರಚನೆ ಆರಂಭವಾಗಬಾರದೆಂದಲ್ಲ. ಆದರೆ ಭೌತಿಕ ಸಂಪನ್ಮೂಲಗಳ ಕೊರತೆಯಿಂದಾಗಿ ಸರ್ವಾಧಿಕಾರದಡಿ ಅದನ್ನು ವ್ಯವಸ್ಥೆಗೊಳಿಸುವ ಪೇಚಿನ ಪ್ರಸಂಗದ ಸಾಧ್ಯತೆ ಬಹಳ ಜಾಸ್ತಿ. ಸೋವಿಯೆತ್ ಒಕ್ಕೂಟವು ಅಂತಹ ಸನ್ನಿವೇಶವನ್ನೆದುರಿಸಿತು : ಕ್ರಾಂತಿಯ ತರುವಾಯದಲ್ಲಿ ಪಾಶ್ಚಿಮಾತ್ಯ ದೇಶಗಳ ಆಕ್ರಮಣ, ಪ್ರತಿಕ್ರಾಂತಿಯ ಬೆದರಿಕೆ, ನಗರಗಳ ಕ್ಷಾಮ ಮತ್ತು ಭೀಕರ ಅಂತರ್ಯುದ್ಧ. ಸಾಲದ್ದಕ್ಕೆ ಕೃಷಿ ಉತ್ಪನ್ನಗಳ ಮಿಗುತಾಯವನ್ನು ಹಸಿದ ನಗರಗಳಿಗೆ ಒಪ್ಪಿಸಲು ಸಿದ್ಧರಿಲ್ಲದಿದ್ದ ರೈತಾಪಿ ಜನ. ಮೊದಲೇ ಸೀಮಿತ ಬಂಡವಾಳಶಾಹಿ ಅಡಿಪಾಯ, ಅತಿಕಡಿಮೆ ಮಟ್ಟದ ಸರಕು ಉತ್ಪಾದನೆ, ನಾಗರಿಕ ಸಂಸ್ಥೆಗಳ ಅಭಾವ, ಸುಸ್ತಾಗಿಹೋಗಿದ್ದ ದುಡಿಯುವ ವರ್ಗ; ಜೊತೆಗೆ ರೈತರ ಪ್ರತಿರೋಧ ಮತ್ತು ತ್ಸಾರ್ ಸರ್ಕಾರದ ಅಧಿಕಾರಶಾಹಿಯನ್ನು ಮೀರಿಸುವಂತಹ ಅಧಿಕಾರಿಗಳ ಅಪಾರ ಸಂಖ್ಯೆ. ಹೀಗೆ ಬಾಲ್ಶೆವಿಕರು ಎದುರಿಸಿದ ಸಂಕಷ್ಟಗಳು ಅಸಂಖ್ಯ. ಅಂತಹ ಹಿನ್ನೆಲೆಯಲ್ಲಿ ಆಧುನಿಕತೆಯ ಬೀಜ ಅಂಕುರಿಸುವುದು ಹೇಗೆ ? ಹಸಿದು ಕಂಗಾಲಾಗಿದ್ದ ಜನ, ಯುದ್ಧದಲ್ಲಿ ಸೊರಗಿದ್ದವರು, ಅವರಿಗೆ ಪ್ರೇರಣೆ ಎಲ್ಲಿಂದ ಬರಬೇಕು ! ಬಂದೂಕದ ಪ್ರಾಬಲ್ಯಕ್ಕೆ ಇದೆಲ್ಲಾ ಮುನ್ನುಡಿ ಬರೆಯಿತು. ಕತೆ ಅಲ್ಲಿಗೆ ಮುಗಿಯಲಿಲ್ಲ. ಕಮ್ಯುನಿಸ್ಟರ ಸಾಮಾಜಿಕ ಅಡಿಪಾಯ ಸಾಕಷ್ಟು ಸಡಿಲಗೊಂಡಿತ್ತು, ಏಕೆಂದರೆ ಅತ್ಯಂತ ದಕ್ಷ ಕ್ರಾಂತಿಕಾರಿ ದುಡಿಮೆಗಾರರನೇಕರು ಪಾಶ್ಚಿಮಾತ್ಯ ದೇಶಗಳು ಪ್ರಚೋದಿಸಿದ್ದ ಅಂತರ್ಯುದ್ಧದಲ್ಲಿ ಮಡಿದಿದ್ದರು. ಹೊಸ ಪ್ರಜ್ಞೆಯ ಆವಿಷ್ಕಾರಕ್ಕೆ ಜೀವನವನ್ನು ಮುಡಿಪಾಗಿಟ್ಟಿದ್ದವರು ಇವರು. ಕ್ರಾಂತಿಯ ಹರಿಕಾರರು ತಾವು ಜರುಗಿಸಿದ್ದ ಕ್ರಾಂತಿಯನ್ನು ರಕ್ಷಿಸಿಕೊಳ್ಳಲು ಏನು ಮಾಡಬಹುದಿತ್ತು! ದುಡಿಯುವ ಜನರ ಸೋವಿಯೆತ್ತುಗಳ ವಿಸರ್ಜನೆಯಾಯಿತು, ಪತ್ರಿಕಾ ಸ್ವಾತಂತ್ರ್ಯ ಮೊಟಕುಗೊಂಡಿತು, ನ್ಯಾಯ ವ್ಯವಸ್ಥೆ ಕಳಚಿಬಿತ್ತು, ರಾಜಕೀಯ ಭಿನ್ನಾಭಿಪ್ರಾಯದ ಮೇಲೆ ಹಲ್ಲೆ ನಡೆಯಿತು. ಎಲ್ಲಾ ಅಂತರ್ಯುದ್ಧದ ಪರಿಣಾಮ, ಅದನ್ನು ಪ್ರಚೋದಿಸಿದ್ದು ಪಾಶ್ಚಿಮಾತ್ಯ ರಾಷ್ಟ್ರಗಳು. ರಷ್ಯಾದ ಆರ್ಥಿಕತೆ ಛಿದ್ರಗೊಂಡಿತು, ಸಾಮಾಜಿಕ ಭದ್ರತೆಗೆ ಹೊಡೆತ ಬಿದ್ದಿತು. ಎಲ್ಲಿ ಸಮಾಜವಾದವು ಅತ್ಯವಶ್ಯಕವಾಗಿದ್ದಿತೋ ಅಲ್ಲಿ ಅದು ಅಸಾಧ್ಯವೆನಿಸಿದ್ದು ಇಪ್ಪತ್ತನೆಯ ಶತಮಾನದ ಒಂದು ದೊಡ್ಡ ಚಾರಿತ್ರಿಕ ದುರಂತ. ಐಸಾಕ್ ಡಾಯ್‌ಶರ್ ಹೇಳುವಂತೆ, ಅಂದಿನ ರಷ್ಯಾ ಸಮಾಜವಾದಿ ವ್ಯವಸ್ಥೆ ಕಟ್ಟಲು ಆರಂಭಿಸಿದಾಗ ಅದೇ ಪ್ರಥಮ ಯತ್ನ; ಅದಕ್ಕೆ ದೇಶದಲ್ಲಿ ಅತ್ಯಂತ ಕೆಟ್ಟ ಸನ್ನಿವೇಶವಿತ್ತು. ದುಡಿಮೆಯ ಅಂತರ ರಾಷ್ಟ್ರೀಯ ವಿಭಜನೆ ಸುತರಾಂ ಇರಲಿಲ್ಲ, ಹೊಸ ವ್ಯವಸ್ಥೆಗೆ ಗೊಬ್ಬರ ಹಾಕುವಂತಹ ಸಾಂಸ್ಕೃತಿಕ ಪರಂಪರೆ ಇರಲಿಲ್ಲ. ಮಾರ್ಕ್ಸ್‌ವಾದವನ್ನು ಟೀಕಿಸುವವರು ಕನಿಷ್ಠ ಇಂತಹ ಅಂಶಗಳನ್ನೆಲ್ಲಾ ಪರಿಗಣಿಸುವ ಮನೋಭಾವ ಬೆಳೆಸಿಕೊಳ್ಳಬೇಕು. ಯಾವ ವಿಮರ್ಶೆಯೂ ಇಲ್ಲದೆಯೇ, ಮಾರ್ಕ್ಸ್‌ವಾದವು ಸರ್ವಾಧಿಕಾರಿ ಧೋರಣೆಯುಳ್ಳದ್ದೆಂದು ಹೇಳುವವರಿಗೆ ಇದೆಲ್ಲಾ ಪ್ರಸ್ತುತ ಎನಿಸುವುದಿಲ್ಲ. ಅವರಿಗೆ ಸುಲಭ ಸೂತ್ರವಿದೆ : ಮಾರ್ಕ್ಸ್‌ವಾದಕ್ಕೆ ಅಧಿಕಾರಸ್ಥಾನ ದೊರೆತರೆ ಒಂದು ವಾರದೊಳಗಾಗಿ ಮಲೆನಾಡಿನಲ್ಲಿ ಕೂಡುದೊಡ್ಡಿಗಳನ್ನು ಸ್ಥಾಪಿಸಲಾಗುತ್ತದೆ, ಎಂದು.

ಸ್ವತಃ ಮಾರ್ಕ್ಸ್ ತರ್ಕರಹಿತ ಮೊಂಡುವಾದವನ್ನು ಪುರಸ್ಕರಿಸದ ಚಿಂತಕ. ಸೈನ್ಯ

ಬಲದಿಂದ ಭಯ ಹುಟ್ಟಿಸುವುದು ಅವನಿಗೆ ಮಾನ್ಯವಲ್ಲ, ರಾಜಕೀಯ ಅಭಿಪ್ರಾಯಗಳನ್ನು ಬಗ್ಗುಬಡಿಯುವುದು ಅವನಿಗೆ ಹಿಡಿಸದು. ರಾಜಕೀಯ ಪ್ರತಿನಿಧಿಗಳು ತಮ್ಮ ಮತದಾರರಿಗೆ ಲೆಕ್ಕ ಒಪ್ಪಿಸಬೇಕೆಂಬುದು ಅವನ ಶಾಸನ. ಜರ್ಮನಿಯಲ್ಲಿ ಸೋಷಿಯಲ್ ಡೆಮೊಕ್ರಾಟರು ಹಾಗೆ ಮಾಡಲಿಲ್ಲವೆಂದು ಅವರನ್ನು ಆತ ಕಟುವಾಗಿ ಟೀಕಿಸಿದ್ದ. ಮುಕ್ತವಾಗಿ ಅಭಿಪ್ರಾಯ ವ್ಯಕ್ತಪಡಿಸುವುದು ಮತ್ತು ನಾಗರಿಕ ಸ್ವಾತಂತ್ರ್ಯ ಅವನ ಮೌಲ್ಯಗಳು. ಹಳ್ಳಿಗಳಲ್ಲಿ ಬಲವಂತದಿಂದ ಭೂಮಿಯ ಸಾಮೂಹಿಕ ಒಡೆತನ ಜಾರಿಗೆ ತರುವ ಹುನ್ನಾರವು ಇಂಗ್ಲೆಂಡಿನಲ್ಲಿ ತೋರಿಬಂದಾಗ ಅದನ್ನು ಮಾರ್ಕ್ಸ್ ಖಂಡತುಂಡವಾಗಿ ವಿರೋಧಿಸಿದ್ದ. ಅಂತೆಯೇ, ಬಡತನದ ಸಂದರ್ಭದಲ್ಲಿ ಸಮಾಜವಾದವು ಮೇಲುಗೈ ಸಾಧಿಸಲಾರದೆಂದು ಅವನು ತಿಳಿದಿದ್ದ. ಹಾಗೆ ನೋಡಿದರೆ, ಸ್ಟಾಲಿನ್‌ನಂತಹ ನಾಯಕರ ವೈಫಲ್ಯ ಮತ್ತು ದುರ್ವರ್ತನೆಯನ್ನು ಸೂಕ್ಷ್ಮವಾಗಿ ವಿವರಿಸಬೇಕಾದರೆ ಮಾರ್ಕ್ಸ್‌ವಾದವು ಸಾಧನವಾಗಬಲ್ಲುದು. ಅಂಥವರನ್ನು ಜರಿದುಬಿಟ್ಟರೆ ಕೆಲಸ ಮುಗಿಯುವುದಿಲ್ಲ, ಅಂಥವರಿಗೆ ಪೋಷಣೆ ನೀಡುವ ಭೌತಿಕ (ಅಂದರೆ, ಆರ್ಥಿಕ ಮತ್ತು ಸಾಮಾಜಿಕ) ಸನ್ನಿವೇಶ ಯಾವುದು ಎಂಬುದನ್ನು ವಿಶ್ಲೇಷಿಸಿಕೊಳ್ಳಬೇಕು, ಅಂಥವರ ಪತನಕ್ಕೆ ಕಾರಣಗಳನ್ನು ಅರಿತುಕೊಳ್ಳಬೇಕು. ಮಾರ್ಕ್ಸ್‌ವಾದ ಅದಕ್ಕೆ ದಾರಿದೀಪ. ಕಮ್ಯುನಿಸ್ಟ್ ಸಮಾಜವನ್ನು ಪಾಶ್ಚಾತ್ಯ ಟೀಕಾಕಾರರು ತಳ್ಳಿಹಾಕುವಾಗ ಪ್ರಜಾಪ್ರಭುತ್ವ, ನಾಗರಿಕ ಹಕ್ಕು, ಎಂದೆಲ್ಲಾ ಮಾತನಾಡುತ್ತಾರೆ, ಆ ವ್ಯವಸ್ಥೆಯನ್ನು ಬುಡಮೇಲು ಮಾಡಬೇಕೆನ್ನುತ್ತಾರೆ. ಅಂಥವರಿಗಿಂತಲೂ ಮಾರ್ಕ್ಸ್‌ವಾದದ ನೆಲೆಯಲ್ಲಿ ನಿಂತು ಸ್ಟಾಲಿನ್ನನಂತಹ ನಾಯಕನ ಪ್ರಾದುರ್ಭಾವವನ್ನು ವಿಮರ್ಶಿಸುವವರು ಹೆಚ್ಚು ತಿಳಿವಳಿಕಸ್ಥರು ಮತ್ತು ಉಪಯುಕ್ತರು. ಅವರೆಲ್ಲಾ ಒಕ್ಕೊರಲಿನಿಂದ ಹೇಳುತ್ತಾರೆ, ಕಮ್ಯುನಿಸ್ಟ್ ಸಮಾಜವು ಪತನಗೊಂಡರೆ ಅದರ ಜಾಗದಲ್ಲಿ ಸ್ಥಾಪನೆಯಾಗುವುದು ಅತ್ಯಂತ ಕ್ರೂರ ಮತ್ತು ಬರ್ಬರ ಬಂಡವಾಳಶಾಹಿ, ಎಂದು. ೭೦ ವರ್ಷಗಳ ಆಯುಷ್ಯದ ಸೋವಿಯೆತ್ ಒಕ್ಕೂಟವನ್ನು ಅಸ್ಥಿರಗೊಳಿಸಿದವರು ಇಂದು ರಷ್ಯದಲ್ಲಿ ಸ್ಥಾಪಿಸಿರುವುದು ಅಂತಹುದನ್ನೇ.

ಬೇರೊಂದು ದೃಷ್ಟಿಯಿಂದ ನೋಡೋಣ: ಆಧುನಿಕತೆಯ ಪೂರ್ವದ ಒಂದು ಸಮಾಜವಿದೆಯೆನ್ನಿ; ಅದನ್ನು ಯಾವುದೋ ಹುಚ್ಚು ಬಂಡವಾಳಶಾಹಿ ವ್ಯವಸ್ಥೆಯು ನಿರ್ವಹಿಸಲು ಬಂದರೆ ಉಂಟಾಗುವ ಪರಿಣಾಮವೇನು? ಎಲ್ಲವೂ ಸಂಪದ್ಭರಿತ, ಸುಖಮಯ ಆಗಿರುತ್ತದೆಯೆ? ಹೆಚ್ಚು ಹೆಚ್ಚು ಸುಲಿಗೆ ಮಾಡಬೇಕೆನ್ನುವ ಬಂಡವಳಿಗರು ಆಧುನಿಕ ಸಾಧನಗಳನ್ನು ಬಳಸುತ್ತಲೇ ಆ ಸಮಾಜವನ್ನು ಧೂಳೀಪಟಕ್ಕೆ ಒಯ್ಯುತ್ತಾರೆ. ಅವರು ಮುಕ್ತ ಮಾರುಕಟ್ಟೆಯ ಮಾತನ್ನೇನೋ ಆಡುತ್ತಾರೆ, ವ್ಯಕ್ತಿಸ್ವಾತಂತ್ರ್ಯದ ಹುಯಿಲೆಬ್ಬಿಸುತ್ತಾರೆ. ಆದರೆ ವಾಸ್ತವಿಕವಾಗಿ ಸಮಾಜವನ್ನು ವಿನಾಶದ ಹಾದಿಯಲ್ಲಿ ಕೊಂಡೊಯ್ಯುತ್ತಾರೆ. ಅಂತಹ ನಿದರ್ಶನದ ಆಧಾರದ ಮೇಲೆ ಬಂಡವಾಳಶಾಹಿಯ ಮಾಪನ ಮಾಡಿ ಅದನ್ನು ಖಂಡಿಸಲಾಗುತ್ತದೆಯೇ? ಅದು ಶುದ್ಧ ಅತಾರ್ಕಿಕ ಮಾರ್ಗ. ಯಾವುದೋ ಶಾಲೆಯಲ್ಲಿ ಬಾಲಕಿಯರ ಚಮೂದಳವಿದೆ; ಅದಕ್ಕೆ ಭೌತಶಾಸ್ತ್ರದ ನಿಗೂಢ ಪ್ರಮೇಯಗಳಿಗೆ ನಿರ್ದಿಷ್ಟ ಉತ್ತರ ಕಂಡುಹಿಡಿಯಲು ಬರುವುದಿಲ್ಲ; ಆದ್ದರಿಂದ ಅದನ್ನು ರದ್ದುಮಾಡಿ, ಎಂಬುದಕ್ಕೆ ಸಮನಾದ ಕೊಂಕು ತರ್ಕದಿಂದ ವ್ಯವಸ್ಥೆಗಳನ್ನು ಮಾಪನ ಮಾಡುವುದು ಮೂರ್ಖತನ. ಅಮೆರಿಕಾದಲ್ಲಿ ಪೈಶಾಚಿಕ ಗೂಢಚಾರ ಸಂಸ್ಥೆ ಸಿ.ಐ.ಎ. ಇದೆ; ಅದರ ಹೀನಕೃತ್ಯಗಳಿಗೆ ಎಲ್ಲೆಯಿಲ್ಲ, ಆದ್ದರಿಂದ ಥಾಮಸ್ ಜೆಫ್ಫರ್‌ಸನ್ ಮತ್ತು ಜಾನ್ ಸ್ಟೂವರ್ಟ್ ಮಿಲ್ ನಗಣ್ಯರು, ಕಡುಪಾಪಿಗಳು, ಎನ್ನಲಾಗುತ್ತದೆಯೆ? ಕ್ರೂರ ಬಂಡವಾಳಶಾಹಿಯಡಿ ಅಮೆರಿಕಾದಲ್ಲಿ ಜೈಲಿನಲ್ಲಿರುವವರ ಸಂಖ್ಯೆ ಮಿತಿಮೀರಿದ್ದು, ಅಮೆರಿಕಾ ಗ್ವಾಂಟನಾಮೊ ಕಾರಾಗೃಹದಲ್ಲಿ ಅಮಾನವೀಯ ಹಿಂಸೆ ನೀಡುತ್ತಿದೆ. ಮಾರ್ಕ್ಸ್‌ವಾದವನ್ನು ಜರಿಯುವವರಿಗೆ ಇದೆಲ್ಲಾ ಏಕೆ ನೆನಪಿಗೆ ಬರುವುದಿಲ್ಲ?

ಸಮಾಜವಾದಿ ವ್ಯವಸ್ಥೆಯ ತೊಡಕುಗಳು ಬೇರೊಂದು ವಾಸ್ತವವಾಗಿ ರೀತಿಯವು, ಅದನ್ನು ವಿಶ್ಲೇಷಿಸಿಕೊಳ್ಳುವುದು ಆರೋಗ್ಯಕರ. ಶ್ರೀಮಂತಿಕೆಯ ಆಧಾರದಲ್ಲೇ ನಾಳೆ ಸಮಾಜವಾದಿ ವ್ಯವಸ್ಥೆಯನ್ನು ಸ್ಥಾಪಿಸಲಾಗುತ್ತದೆ ಎಂದಿಟ್ಟುಕೊಳ್ಳೋಣ. ಆಗಲೂ ಮಾರುಕಟ್ಟೆಗಳಿಲ್ಲದೆ ಆಧುನಿಕ ಅರ್ಥವ್ಯವಸ್ಥೆಯನ್ನು ನಿಭಾಯಿಸಲು ಆಗುವುದಿಲ್ಲ, ಅಲ್ಲವೆ? ಅದಕ್ಕೆ ಕೆಲವು ಮಾರ್ಕ್ಸ್‌ವಾದಿಗಳು ಸರಳ ಉತ್ತರ ಕೊಡುತ್ತಾರೆ, ಅಂತಹ ಮಾರುಕಟ್ಟೆ ಬೇಡ, ಎಂದು. ಅವರ ಪ್ರಕಾರ ಸಮಾಜವಾದಿ ಆರ್ಥಿಕ ವ್ಯವಸ್ಥೆಯಲ್ಲಿ ಮಾರುಕಟ್ಟೆಯು ಪ್ರತ್ಯೇಕ ಸ್ಥಾನ ಹೊಂದಿರುವುದಿಲ್ಲ, ಅದು ವ್ಯವಸ್ಥೆಯಲ್ಲೇ ಅಂತರ್ಗತವಾಗಿರುತ್ತದೆ. ಅದನ್ನು ಬೇಕಾದರೆ ಮಾರುಕಟ್ಟೆ ಸಮಾಜವಾದ ಎನ್ನಬಹುದು. ಅದರ ಪ್ರಕಾರ ಉತ್ಪಾದನಾ ಸಾಧನಗಳು (ಭೂಮಿ, ಕಾರ್ಖಾನೆ, ಬಂಡವಾಳ, ಕೂಲಿ, ಆಡಳಿತ, ಇತ್ಯಾದಿ) ಸಾಮಾಜಿಕ ಮಾಲೀಕತ್ವದಲ್ಲಿರುತ್ತವೆ, ಆದರೆ ಸ್ವಯಂ ನಿಯಂತ್ರಣದಲ್ಲಿ ಇರುವ ಸಹಕಾರಿ ಸಂಘಗಳು ಮಾರುಕಟ್ಟೆಯಲ್ಲಿ ಸ್ಪರ್ಧಿಗಿಳಿಯುತ್ತವೆ. ಆ ಮೂಲಕ ಮಾರುಕಟ್ಟೆಯ ಉಪಯೋಗ ಪಡೆದಂತಾಯಿತು. ಆದರೆ ಅದರ ಅವಗುಣಗಳನ್ನು ತೊಡೆದುಹಾಕಿದಂತೆಯೂ ಆಯಿತು. ಉತ್ಪಾದನಾ ಕ್ರಿಯೆಯಲ್ಲಿ ನಿರತವಾದ ಪ್ರತ್ಯೇಕ ಸಹಕಾರಿ ಘಟಕಗಳು ಸಮರ್ಥವಾಗಿ, ಪರಿಣಾಮಕಾರಿಯಾಗಿ, ಕೆಲಸ ಮಾಡುತ್ತವೆ. ಬಂಡವಾಳಶಾಹಿಯ ಸಮರ್ಥ ಉತ್ಪಾದನೆಗಿಂತಲೂ ಅದೇನೂ ಕಡಿಮೆ ಇರುವುದಿಲ್ಲ, ಆದರೆ ಇಡೀ ಆರ್ಥಿಕತೆಯ ದೃಷ್ಟಿಯಿಂದ ನೋಡಿದರೆ ಸಮಾಜವಾದಿ ವ್ಯವಸ್ಥೆಯಲ್ಲೂ ಸ್ಪರ್ಧೆಗೆ ಸ್ಥಾನ ಕಲ್ಪಿಸಲಾಗಿರುತ್ತದೆ. ಎಲ್ಲ ಉತ್ಪಾದನೆ ಮತ್ತು ಯೋಜನೆ ಕೇಂದ್ರೀಕರಿಸಲ್ಪಟ್ಟಿರಬೇಕೆಂಬ ನಿಯಮವೇನೂ ಇಲ್ಲ.

ಇದರ ಪರವಾಗಿ ಕೆಲವು ಮಾರ್ಕ್ಸ್‌ವಾದಿಗಳು ಹೀಗೆನ್ನುತ್ತಾರೆ: ''ಮಾರ್ಕ್ಸ್ ಸ್ವತಃ ಒಬ್ಬ ಮಾರುಕಟ್ಟೆ ಸಮಾಜವಾದಿಯೇ ಆಗಿದ್ದ, ಏಕೆಂದರೆ ಸಮಾಜವಾದಿ

## 'ಹೊಸತು' ಪತ್ರಿಕೆಯ ಆಹ್ವಾನ

**ಆಹಾರ ಪದ್ಧತಿ ಬದಲಾಯಿಸಿ, ರೋಗಮುಕ್ತರಾಗಿ**

''ಸಕ್ಕರೆ ಕಾಯಿಲೆಯನ್ನು ಇನ್ಸುಲಿನ್ - ಮಾತ್ರೆಗಳಿಲ್ಲದೆ ನಿಯಂತ್ರಣದಲ್ಲಿರಿಸಿಕೊಳ್ಳಬಹುದು.''

**ಉಪನ್ಯಾಸ ಮತ್ತು ಪ್ರಾತ್ಯಕ್ಷಿಕೆ (ಸ್ಲೈಡ್ ಷೋ)**

**ಡಾ|| ಬಿ. ಎಸ್. ಕಕ್ಕಿಲ್ಲಾಯ**

(ಖ್ಯಾತ ವೈದ್ಯರು ಹಾಗೂ ಪರ್ಯಾಯ ಆಹಾರ ಪದ್ಧತಿ ತಜ್ಞರು)

**ಸಂವಾದದಲ್ಲಿ ಭಾಗವಹಿಸುವ ವೈದ್ಯರು**

**ಡಾ|| ಪ್ರಕಾಶ ಸಿ. ರಾವ್**

**ಡಾ|| ನಾ. ಸೋಮೇಶ್ವರ**

**ನೀವೂ ನಿಮ್ಮ ಸಮಸ್ಯೆಯ ವಿವರಗಳೊಂದಿಗೆ ಸಂವಾದದಲ್ಲಿ ಭಾಗವಹಿಸಬಹುದು.**

**ದಿನಾಂಕ ೧೯.೮.೨೦೧೨ ಭಾನುವಾರ. ಬೆಳಗಿನ ೧೦ ಗಂಟೆಯಿಂದ ೨ ಗಂಟೆಯವರೆಗೆ**

**ಸ್ಥಳ : ಗಾಂಧೀ ಭವನ, ಶಿವಾನಂದ ವೃತ್ತ, ಕುಮಾರ ಕೃಪಾ ರಸ್ತೆ, ಬೆಂಗಳೂರು - ೫೬೦ ೦೦೧**

ಆಸಕ್ತರು ತಮ್ಮ ಹೆಸರನ್ನು ಕೂಡಲೇ ನೋಂದಾಯಿಸಬೇಕು. ಪ್ರವೇಶ ಉಚಿತ.
ನಿಮ್ಮ ಮೊಬೈಲ್, ಈಮೇಲ್ ಅಥವಾ ಅಂಚೆ ವಿಳಾಸ ತಿಳಿಸಿದರೆ
ಕಾರ್ಯಕ್ರಮ ವಿವರ ಕಳಿಸಲಾಗುವುದು.

ಸಂಪರ್ಕಕ್ಕಾಗಿ ದೂರವಾಣಿ : (೦೮೦) ೩೦೫೭೮೦೨೯, ೨೨೨೦೩೫೮೦

navakarnataka@gmail.com hosathu@gmail.com

**- ಸಂಪಾದಕ**

ಕ್ರಾಂತಿಯ ನಂತರವೂ ಮಾರುಕಟ್ಟೆಯು ಕಾರ್ಯ ನಿರ್ವಹಿಸುತ್ತಿರುತ್ತದೆ, ಎಂದು ಅವನು ಹೇಳಿದ್ದ. ಅವನ ದೃಷ್ಟಿಯಲ್ಲಿ ಮಾರುಕಟ್ಟೆಗೆ ಎರಡು ಲಕ್ಷಣಗಳೂ ಉಂಟು : ಒಂದು, ಶೋಷಣೆಗೆ ಸಾಧನ ಆಗಿರುವುದು, ಇನ್ನೊಂದು, ಬಿಡುಗಡೆಗೆ ಸಾಧನವಾಗುವುದು. ಬಂಡವಾಳಶಾಹಿಯಡಿ ದುಡಿಯುವ ಪುರುಷರು ಮತ್ತು ಮಹಿಳೆಯರು ಮಾಲೀಕನ ಅಧೀನದಲ್ಲಿರುತ್ತಾರೆ; ಅದರಿಂದ ಮುಕ್ತರಾಗಿ ದುಡಿಯುವುದು ಸಮಾಜವಾದಿ ವ್ಯವಸ್ಥೆಯಲ್ಲಿ, ಸಾಮಾಜಿಕ ಸಂಬಂಧಗಳನ್ನು ನಿಗೂಢ ವಾಗಿ ನಿರ್ಧರಿಸುವ ಬಂಡವಾಳಶಾಹಿ ಮಾರುಕಟ್ಟೆಗೆ ಪರ್ಯಾಯವನ್ನು ಕ್ರಾಂತಿಯು ಕಲ್ಪಿಸಿಕೊಡುತ್ತದೆ.

ಈ ಅಭಿಪ್ರಾಯಕ್ಕೆ ಒತ್ತುಕೊಟ್ಟಿರುವ ಹ್ಯಾನಾ ಆರೆಂಟ್ ಒಂದೆಡೆ ಹೇಳಿದ್ದಾಳೆ, ''ಕಮ್ಯುನಿಸ್ಟ್ ಪ್ರಣಾಲಿಕೆಯಲ್ಲಿ ಮಾರ್ಕ್ಸ್ ಬಂಡವಾಳಶಾಹಿಯನ್ನು ಬಹುವಾಗಿ ಶ್ಲಾಘಿಸಿದ್ದಾನೆ,'' ಎಂದು. ಅಂದರೆ, ಮಾರ್ಕ್ಸ್‌ಗೆ ಮಾರುಕಟ್ಟೆಯೆಂದರೆ ಜುಗುಪ್ಸೆ ಇರಲಿಲ್ಲ, ಬದಲಾಗಿ ಮಾರುಕಟ್ಟೆ ಎಂತಹದಾಗಿರಬೇಕು ಎನ್ನುವುದು ಅವನಿಗೆ ಮುಖ್ಯವಾಗಿತ್ತು; ಸಾಮಾಜಿಕ ಸಂಬಂಧಗಳು ಅಪ್ರಕೃತ ವೆಂಬ ದೃಷ್ಟಿಯನ್ನುಳ್ಳ ಮಾರುಕಟ್ಟೆಯು ವರ್ಜ್ಯ, ಅಷ್ಟೆ. ಆರ್ಥಿಕ ಯೋಜನೆ ಮತ್ತು ಮಾರುಕಟ್ಟೆ ಒಟ್ಟಾಗಿ ಹೆಜ್ಜೆ ಹಾಕುವುದು ಸಮಾಜವಾದಿ ವ್ಯವಸ್ಥೆಯ ನಿರ್ಮಿತಿಗೆ ಅಗತ್ಯವೆಂಬ ಇಂಗಿತವನ್ನು ಮಾರ್ಕ್ಸ್‌ವಾದವು ಹೊಂದಿದೆ. ಮಾರುಕಟ್ಟೆ ಸಮಾಜವಾದದಡಿಯಲ್ಲಿ ಉತ್ಪಾದನಾ ಸಾಧನಗಳ ರೂಪದ ಖಾಸಗಿ ಆಸ್ತಿಗೆ ಸ್ಥಾನವಿಲ್ಲ(ಅಂದರೆ, ನೀವು ಹತ್ತು ಪಂಚೆಗಳನ್ನು ಹೊಂದಿರಬಹುದು, ಆದರೆ ಪಂಚೆ ನೇಯುವ ಯಾವ ಕಾರ್ಖಾನೆಯೂ ನಿಮ್ಮ ಒಡೆತನದಲ್ಲಿರುವಂತಿಲ್ಲ). ಅಂತೆಯೇ, ಸಾಮಾಜಿಕ ವರ್ಗಗಳಿಗೆ ಮತ್ತು ಶೋಷಣೆಗೆ ಅಲ್ಲಿ ಅವಕಾಶವಿಲ್ಲ. ಉತ್ಪಾದಕರ ಕೈಯ್ಯಲ್ಲಿ ಆರ್ಥಿಕ ಶಕ್ತಿ ಉಳಿದಿರುತ್ತದೆ, ಒಬ್ಬ ಖಾಸಗಿ ಬಂಡವಳಿಗನಲ್ಲಿ ಅದು ಕೇಂದ್ರೀಕೃತ ವಾಗಿರುವುದಿಲ್ಲ.

ಕೆಲವು ಮಾರ್ಕ್ಸ್‌ವಾದಿಗಳಿಗೆ ಈ ಮಾರುಕಟ್ಟೆ ಸಮಾಜ ವಾದವು ರುಚಿಸುವುದಿಲ್ಲ. ಏಕೆಂದರೆ ಅದರಡಿಯಲ್ಲಿ ಸರಕುಗಳ ಉತ್ಪಾದನೆ, ಅಸಮಾನತೆ, ನಿರುದ್ಯೋಗ ಮತ್ತು ಮಾನವ ನಿಯಂತ್ರಣವನ್ನು ಮೀರಿ ನಿಲ್ಲುವ ಮಾರುಕಟ್ಟೆಯ ಶಕ್ತಿಗಳು ಇನ್ನೂ ಉಳಿದಿರುತ್ತವೆ; ದುಡಿಯುವ ಜನರನ್ನು ಸಾಮೂಹಿಕ ಬಂಡವಳಿಗರನ್ನಾಗಿಸಿದಂತಾಗುತ್ತದೆ, ಅಷ್ಟೆ. ಅವರಿಗೂ ಲಾಭದ ಆಕಾಂಕ್ಷೆ, ಗುಣಮಟ್ಟವನ್ನು ಕಾಪಾಡಿ ಕೊಳ್ಳದಿರುವ ಚಟ, ಸಾಮಾಜಿಕ ಅಗತ್ಯಗಳ ನಿರ್ಲಕ್ಷ್ಯ, ಕೊಳ್ಳುಬಾಕತನದ ಪ್ರಚೋದನೆ, ಎಲ್ಲಾ ಇರುತ್ತವೆ. ಅಂದರೆ, ಸದಾ ಸಂಪತ್ತನ್ನು ಗುಡ್ಡೆ ಹಾಕಿಕೊಳ್ಳುವ ಪ್ರವೃತ್ತಿ ಮುಂದುವರಿದಿರುತ್ತದೆ. ಅದರಿಂದ ಸಮಾಜ ವಿರೋಧಿ ಧೋರಣೆಗಳು ಮರುಕಳಿಸುತ್ತಿರುತ್ತವೆ.

ಹಾಗಾದರೆ ಇದಕ್ಕೇನು ಪರಿಹಾರ ? ಶೈಕ್ಷಣಿಕ ಚಟುವಟಿಕೆ ಮತ್ತು ಪ್ರಭುತ್ವದ ನಿರ್ಧಾರಕ ಉಸ್ತುವಾರಿ, ಇವು ಅಪಾಯವನ್ನು ತಡೆಯಬಹುದು. ಬೇರೆ ಕೆಲವು ಮಾರ್ಕ್ಸ್ ವಾದಿಗಳು ಕೇಂದ್ರೀಕೃತ ಯೋಜನೆ ಮತ್ತು ಮಾರುಕಟ್ಟೆ ವಿಧಿಸುವ ಆರ್ಥಿಕತೆ, ಎರಡನ್ನೂ ಒಳಗೊಳ್ಳ ದಂತಹ ಸಮಾಜವಾದಿ ವ್ಯವಸ್ಥೆಯನ್ನು ಬೊಟ್ಟು ಮಾಡಿ ತೋರಿಸುತ್ತಾರೆ. ಅದು ಹೀಗೆ : ಉತ್ಪಾದಕರು,


ಯುವಕ ಮಾರ್ಕ್ಸ್

ಗ್ರಾಹಕರು, ಪರಿಸರ ವಾದಿಗಳು ಮುಂತಾದ ಆಸಕ್ತರು ಒಟ್ಟಾಗಿ ಸೇರಿ ಸಂಪನ್ಮೂಲಗಳನ್ನು ರೂಢಿಸಿಕೊಳ್ಳುವ ವಿಧಾನ ಮತ್ತು ಪರಿಮಾಣಗಳನ್ನು ತೀರ್ಮಾನಿಸುತ್ತಾರೆ. ಗ್ರಾಹಕ ಸಮಿತಿಗಳು ಮತ್ತು ಉತ್ಪಾದನಾ ಘಟಕಗಳು ನೆರೆಹೊರೆಯಲ್ಲಿರುತ್ತವೆ. ಪ್ರತಿಯೊಂದು ಅಂಶವೂ ಈ ಸಮಿತಿಗಳ ಮೂಲಕವೇ ಆಗುತ್ತದೆ : ಎಷ್ಟು ಸಂಪನ್ಮೂಲ ವ್ಯಯಿಸ ಬೇಕು, ಹಣದ ಹೂಡಿಕೆ ಎಷ್ಟು, ಅಭಿವೃದ್ಧಿಯ ದರ ಎಷ್ಟು, ಇಂಧನ-ಸಾರಿಗೆ, ಪ್ರತಿಯೊಂದೂ ಸಮಿತಿಯ ತೀರ್ಮಾನದಂತೆ. ಇಂತಹ ಸಮಿತಿಗಳ ಜಾಲ ದೇಶದುದ್ದ ಗಲಕ್ಕೂ ಇರುತ್ತದೆ, ಅವೆಲ್ಲಾ ಪ್ರಾತಿನಿಧಿಕ ಸಂಸ್ಥೆಗಳೇ. ಅಂದರೆ, ಎಲ್ಲಾ ದೀರ್ಘಕಾಲೀನ ಯೋಜನೆಗೆ ಬದ್ಧವಾಗಿ ನಡೆಯುತ್ತದೆ, ಪ್ರತಿ ಹಂತದಲ್ಲೂ ಸಾರ್ವಜನಿಕ ಚರ್ಚೆ ಮತ್ತು ಪ್ರಾತಿನಿಧ್ಯ ಇರುತ್ತದೆ. ಆರ್ಥಿಕತೆಯ ಸ್ವರೂಪ ಮತ್ತು ಬೆಳವಣಿಗೆಯು ಸಾಮಾಜಿಕ ಅಗತ್ಯದ ಆಧಾರದ ಮೇಲೆಯೇ ವಿನಾ ಖಾಸಗಿ ಲಾಭದ ಆಧಾರದಲ್ಲಿ ಅಲ್ಲ. ಬಂಡವಾಳ ಶಾಹಿಯಲ್ಲಿ ಇಂತಹ ಅವಕಾಶವಿಲ್ಲ. ಆಸ್ಪತ್ರೆ ಕಟ್ಟಬೇಕೋ ಅಥವಾ ಒಂದೇ ಪದಾರ್ಥದ ಹತ್ತು ಮಾದರಿಯ ತಿಂಡಿಗಳನ್ನು ಮಾಡಿ ಮಾರುಕಟ್ಟೆಗೆ ತುಂಬಬೇಕೋ ಎಂಬುದು ಖಾಸಗಿ ಮಾಲೀಕನ ತೀರ್ಮಾನ, ಅವನ ಅಥವಾ ಅವಳ ಲಾಭದ ಪ್ರಶ್ನೆ; ಸಮಾಜವಾದಿ ವ್ಯವಸ್ಥೆಯಲ್ಲಿ ಸಾರ್ವಜನಿಕರು ಇದನ್ನು ತೀರ್ಮಾನಿಸುವ ಸ್ವಾತಂತ್ರ್ಯ ಹೊಂದಿರುತ್ತಾರೆ. ಸಮಿತಿಗಳು ಪ್ರಜಾಪ್ರಭುತ್ವದ ರೀತಿಯಲ್ಲಿ ಮೇಲಿನಿಂದ ಕೆಳಗಿನ ವರೆಗೂ ಸಾಂಸ್ಥಿಕವಾಗಿ ರಚಿಸಲ್ಪಟ್ಟಾಗ ವ್ಯಕ್ತಿ ಮತ್ತು ಸಮಷ್ಟಿಯ ಸ್ವಾತಂತ್ರ್ಯವು ಗಟ್ಟಿಗೊಳ್ಳುತ್ತದೆ, ವಿಕಸಿಸುತ್ತಾ ಹೋಗುತ್ತದೆ. ಸರಕುಗಳ ಬೆಲೆಯು ಸಹ ಕೇಂದ್ರದಲ್ಲಿ ನಿರ್ಧಾರವಾಗುವುದಿಲ್ಲ; ಗ್ರಾಹಕರು-ಉತ್ಪಾದಕರು-ಸಾಮಾಜಿಕ ಅಗತ್ಯ, ಇವು ಬೆಲೆಯನ್ನು ನಿಗದಿಗೊಳಿಸುವ ಪಾಲುದಾರರು. ಇದನ್ನು ''ಭಾಗವಹಿಸುವಿಕೆಯ ಆರ್ಥಿಕತೆ'' ಎನ್ನಬಹುದು. ಅದರ ಸೂತ್ರವನ್ನು ಸಾರ್ವಜನಿಕರೇ ನಿರ್ಧರಿಸುವಾಗ ಆಹಾರ, ಆರೋಗ್ಯ, ಔಷಧಿ, ಶಿಕ್ಷಣ, ಸಾರಿಗೆ, ಇಂಧನ, ಮಾಧ್ಯಮಗಳು, ಹಣಕಾಸು ವಹಿವಾಟು ನಡೆಸುವ ಸಂಸ್ಥೆಗಳು, ಇಂಥವಕ್ಕೆ ಹೆಚ್ಚಿನ ಆದ್ಯತೆ ನೀಡಿ ಪ್ರಜಾಪ್ರಭುತ್ವ ರೀತ್ಯಾ ಅವನ್ನು ನಿರ್ವಹಿಸಬಹುದು. ಲಾಭಕೋರತನದ ಆರ್ಥಿಕತೆಯಲ್ಲಿ ಅದು ಸಾಧ್ಯವಿಲ್ಲ. ಲಾಭಕ್ಕಾಗಿ ಸಮಾಜವಿರೋಧಿ ವ್ಯವಹಾರವು ಬಂಡವಾಳಶಾಹಿಯಡಿ ಮಾತ್ರ ಸಾಧ್ಯ. ಐಷಾರಾಮಿ ಜೀವನಕ್ಕೆ ಬೇಕಾದ ಸರಕುಗಳನ್ನು ಬೇಕಾದರೆ ಮಾರುಕಟ್ಟೆಯ ನಿಯಂತ್ರಣಕ್ಕೆ ಬಿಡುವುದು ಸಮಾಜವಾದಿ ವ್ಯವಸ್ಥೆಗೆ ಧಕ್ಕೆಯುಂಟುಮಾಡುವುದಿಲ್ಲ.

ಇಷ್ಟೊಂದು ಸಂಕೀರ್ಣವಾದ ವ್ಯವಸ್ಥೆಯನ್ನು ನೆಲೆ ಗೊಳಿಸಲು, ಸ್ಥಿರಗೊಳಿಸಲು, ಸಾಧ್ಯವೆ, ಎಂದು ಕೆಲವು ಮಾರುಕಟ್ಟೆ ಸಮಾಜವಾದಿಗಳಿಗೆ ಸಂಶಯವಿರುವ ಸಾಧ್ಯತೆಯುಂಟು. ಆಸ್ಕರ್ ವೈಲ್ಡ್ ಒಮ್ಮೆ ಉದ್ಗರಿಸಿದ್ದ, ''ಸಮಾಜವಾದವು ನಮ್ಮ ಸೊಗಸು ಸಮಯವನ್ನು ಬಹುವಾಗಿ ಕಬಳಿಸಿಬಿಡುತ್ತದೆ,'' ಎಂದು. ಆಧುನಿಕ ಮಾಹಿತಿ ತಂತ್ರಜ್ಞಾನದ ದಿನಗಳಲ್ಲಿ ಅದೇನು ಅಷ್ಟೊಂದು ಕ್ಲಿಷ್ಟವಾಗಬೇಕೆ ? ಇಲ್ಲವೆಂದು ತೋರುತ್ತದೆ. ಪ್ರಾಕ್ಟರ್ ಮತ್ತು ಗ್ಯಾಂಬಲ್ ಕಂಪನಿಯ ಉಪಾಧ್ಯಕ್ಷ ಕೂಡ ''ದುಡಿಯುವವರ ಸ್ವಯಂ-ನಿಯಂತ್ರಿತ ಆಡಳಿತ'' ಸೂಕ್ತ ಮತ್ತು ಸಾಧ್ಯ ಎಂದಿದ್ದ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಆಡಳಿತ ಮತ್ತು ಆಯೋಜನೆ ಕಡಿಮೆ ಸಮಯ ಮತ್ತು ಶಕ್ತಿಯನ್ನು ಬಳಸುತ್ತಿಲ್ಲವಲ್ಲ! ಅದಕ್ಕಿಂತಲೂ ಹೆಚ್ಚಿನ ಶ್ರಮ ಹಾಗೂ ಸಮಯ ಸಮಾಜವಾದಿ ವ್ಯವಸ್ಥೆಗೆ ಬೇಕಾಗದು.

ಈ ವ್ಯವಸ್ಥೆಯಲ್ಲಿ ಪ್ರತಿಭೆ, ತರಬೇತಿ, ಉದ್ಯೋಗ, ಇವುಗಳಲ್ಲಿ ವ್ಯತ್ಯಾಸವಿದ್ದಾಗ ಪ್ರತಿಫಲವೂ ಭಿನ್ನವಾಗಿರು ವುದಿಲ್ಲವೆ ? ಮೈಕೇಲ್ ಆಲ್‌ಬರ್ಟ್ ಗಮನಿಸಿರುವಂತೆ ಬಂಡವಾಳಶಾಹಿಯಲ್ಲಿ ವೈದ್ಯ ಮತ್ತು ಕಾರ್ಖಾನೆಯ ಕಾರ್ಮಿಕ, ಇವರ ನಡುವೆ ಸಾಮ್ಯವುಂಟೆ ? ಒಬ್ಬನಿಗೆ ಅಚ್ಚುಕಟ್ಟು ಪರಿಸರ, ಇನ್ನೊಬ್ಬನಿಗೆ ಕೈ-ಕಾಲು ಊನವಾಗ ಬಹುದಾದ ಸ್ಥಿತಿ. ಹೀಗಿರುವಾಗ ಕಾರ್ಮಿಕನಿಗೆ ಸಂಭಾವನೆ ಹೆಚ್ಚಾಗಿರಬೇಕಲ್ಲವೆ ? ಕೊಳಕು ಪರಿಸರ, ಹೆಚ್ಚಿನ ಅಪಾಯ ಸಂಭವ ಇರುವಾಗ ಹೀಗೇಕೆ ಮಾಡಬಾರದು ? ಒಂದು ಪರಿಹಾರ ಸೂಚಿಸೋಣವೆ ? ಸಮಾಜವಾದಿ ವ್ಯವಸ್ಥೆಯಲ್ಲಿ, ಹಿಂದೆ ರಾಜಮನೆತನಕ್ಕೆ ಸೇರಿದ್ದವರಿಗೆ ಇಂತಹ ಕೆಲಸಗಳನ್ನು ವಹಿಸಿಬಿಡೋಣ; ಬಂಡವಾಳಶಾಹಿಯ ಕಾಲದ ಕಾರ್ಮಿಕರಿಗೆ ವೈದ್ಯ, ಪ್ರಾಧ್ಯಾಪಕ, ಸಂಶೋಧಕ ಹುದ್ದೆಗಳನ್ನು ನೀಡಿ ಬಿಡೋಣ ! ಸಂಸ್ಕೃತಿಗೇನೂ ಅದರಿಂದ ತೊಡಕಾಗದು. ರೇಮಂಡ್ ವಿಲಿಯಂಸ್ ಹೇಳಿದ್ದಂತೆ ಸಮಾಜವಾದಿ ಯೋಜನೆಯಲ್ಲಿ ಕಲೆ ಮತ್ತು ಮಾಧ್ಯಮಗಳನ್ನು ಪ್ರಭುತ್ವದ ಹಿಡಿತದಲ್ಲಿ ಇರದಂತೆ ಮತ್ತು ಲಾಭಕೋರತನದಿಂದ ನಡೆಯದಂತೆ ನೋಡಿಕೊಳ್ಳಲು ಸಾಧ್ಯ. ಆ ಕ್ಷೇತ್ರಗಳಲ್ಲಿ ಸಕ್ರಿಯವಾಗಿ ಕೊಡುಗೆ ನೀಡುವವರೇ ಅವರ ಅಭಿವ್ಯಕ್ತಿ ಸಾಧನಗಳನ್ನು ಮತ್ತು ಸಂವಹನವನ್ನು ನಿಭಾಯಿಸಿ ಕೊಳ್ಳುತ್ತಾರೆ. ರೇಡಿಯೊ, ಟಿ.ವಿ., ಕಲಾಮಂದಿರಗಳು, ಇವೆಲ್ಲಾ ಸಾರ್ವಜನಿಕ ಒಡೆತನದಲ್ಲಿರುತ್ತವೆ, ಆದರೆ ಅವುಗಳ ಕಾರ್ಯನಿರ್ವಹಣೆಯು ಪ್ರಜಾಪ್ರಭುತ್ವ ರೀತ್ಯಾ ಚುನಾಯಿತ ಪ್ರತಿನಿಧಿಗಳ ಜವಾಬ್ದಾರಿಯಾಗಿರುತ್ತದೆ. ಅಲ್ಲಿ ಸಾರ್ವಜನಿಕರು, ಮಾಧ್ಯಮದವರು, ಕಲಾವಿದರು, ಎಲ್ಲರೂ ಇರುತ್ತಾರೆ. ಪ್ರಭುತ್ವದ ನಿರ್ದೇಶನದಲ್ಲಿ ಕಲಾವಿದರು ಮತ್ತು ಮಾಧ್ಯಮಗಳು ಏನನ್ನೂ ಸೃಷ್ಟಿಸಿ

ಪ್ರಚಾರ ಮಾಡಬೇಕಾಗಿಲ್ಲ, ಮಾರುಕಟ್ಟೆಯ ನಿರ್ಬಂಧವೂ ಅವನ್ನು ನಿಯಂತ್ರಿಸುವುದಿಲ್ಲ. ಆಗ ''ಸಾಂಸ್ಕೃತಿಕ ಗೂಂಡಾ ಪಡೆಯು'' ಸಂಸ್ಕೃತಿಯ ಕ್ಷೇತ್ರವನ್ನು ಆಕ್ರಮಿಸಿ ನಿಲ್ಲುವುದಿಲ್ಲ. ನಿಯಾಂಡರ್‌ತಾಲ್ ಮಾನವನಂತಿರುವ ಜನ ಬಂಡವಾಳಶಾಹಿಯಡಿ ಮಾಧ್ಯಮದ ಪ್ರಭುಗಳಾಗಿದ್ದುದು ಈಗ ಕೇವಲ ಕೆಟ್ಟ ನೆನಪು ಎನ್ನುವಂತೆ ಸಮಾಜವಾದಿ ವ್ಯವಸ್ಥೆಯಡಿ ಕಲೆ - ಮಾಧ್ಯಮ - ಸಂವಹನ - ಸಂಸ್ಕೃತಿ ಮುಂತಾದುವನ್ನು ಮುನ್ನಡೆಸಬಹುದು, ಮುನ್ನಡೆಸಬೇಕು, ಅದು ಸರ್ವಥಾ ಸಾಧ್ಯವಿದೆ. ಸಮಾಜವಾದಿ ಸಂಸ್ಕೃತಿಯೆಂದರೆ ಕೇವಲ ವೇದ, ವಾಲ್ಮೀಕಿ, ಕಾಳಿದಾಸ ಮತ್ತು ಮಾರ್ಕ್ಸ್‌ನ 'ಬಂಡವಾಳ' ಎಂಬ ಕೃತಿಯ ಪರಿಚಯ ಮಾಡಿಸುವುದಲ್ಲ, ಅದಕ್ಕೆ ನಿತ್ಯನೂತನ ಆಯಾಮ ಕಲ್ಪಿಸಲು ಸಮರ್ಥರಾದ ಕಲಾವಿದರು, ಕವಿಗಳು, ಮಾಧ್ಯಮ ಪರಿಣತರು, ಎಲ್ಲರೂ ಇರುತ್ತಾರೆ. ''ಜನಪ್ರಿಯ'' ಎಂದರೆ ಆಗ ಕೇವಲ ಕೆಳಮಟ್ಟದ ರುಚಿಯಾಗಿರುವುದಿಲ್ಲ, ಭಗತ್ ಸಿಂಗ್ ಜನಪ್ರಿಯ, ಆದರೆ ಕೆಳಮಟ್ಟದವನಲ್ಲವಲ್ಲ, ಹಾಗೆ.



ಬಂಡವಾಳಶಾಹಿಯ ನಂತರದ ಅವಧಿಯಲ್ಲಿ ಆರ್ಥಿಕತೆ ಹೇಗಿರುತ್ತದೆಂದು ಈಗಲೇ ಪೂರ್ಣ ಪ್ರಮಾಣದ ನೀಲಿನಕ್ಷೆ ಸಿದ್ಧಗೊಳಿಸಬೇಕಾಗಿಲ್ಲ, ಅದರಲ್ಲೂ ನ್ಯೂನತೆಗಳು ಉಳಿದಿರಲು ಸಾಧ್ಯ. ಆದರೆ ಬಂಡವಾಳಶಾಹಿಯಷ್ಟು ಹೊಲಸಾಗಿಯಂತೂ ಇರಲು ಸಾಧ್ಯವೇ ಇಲ್ಲ, ಈಗಿನ ಬಡತನ, ಅಪವ್ಯಯ, ಏರುಪೇರು, ಯಾವ ಪುರುಷಾರ್ಥಕ್ಕೆ!

ಕಡೆಯ ಮಾತು : ಬಂಡವಾಳಶಾಹಿಯಡಿ ನಿರುದ್ಯೋಗವೆಂಬ ಕತ್ತಿ ಸದಾ ತಲೆಯ ಮೇಲೆ ತೂಗುತ್ತಿದೆಯಲ್ಲವೆ? ಇಂದಿನ ವಿಶ್ವದ ಅತ್ಯಂತ ಬಲಿಷ್ಠ ಬಂಡವಾಳ ಶಾಹಿ ರಾಷ್ಟ್ರ ಅದಕ್ಕೆ ಎಂತಹ ಅದ್ಭುತ ಪರಿಹಾರ ಕಂಡುಕೊಂಡಿದೆ ಗೊತ್ತೆ? ಇಂದಿನ ಒಬಾಮ-ರೋಮ್ನಿ ಅಮೆರಿಕಾದಲ್ಲಿ ನಿರುದ್ಯೋಗಿಗಳಾಗಿ ಉದ್ಯೋಗ ಅರಸುವವರ ಸಂಖ್ಯೆ ವಿಪರೀತ ಹೆಚ್ಚು. ಆದರೆ ಅದು ಅದಕ್ಕಿಂತಲೂ ನೂರುಪಟ್ಟು ಹೆಚ್ಚಾಗಿ ಇರುತ್ತಿತ್ತು, ಹಾಗೆ ಉದ್ಯೋಗ ಅರಸಬೇಕಾದ ಲಕ್ಷಗಟ್ಟಲೆ ಯುವಕರನ್ನು ಕಾರಾಗೃಹಗಳಲ್ಲಿ ಬಂಧಿಸಿಡಲಾಗಿದೆ! ಅಂಥದೇ ಸ್ವಾತಂತ್ರ್ಯ ಬೇಕೋ, ನಿರುದ್ಯೋಗದ ಪಿಡುಗಿಲ್ಲದ ಸಮಾಜವಾದಿ ಸ್ವಾತಂತ್ರ್ಯ ಬೇಕೋ? ಆಯ್ಕೆ ನಿಮಗೆ ಬಿಟ್ಟಿದೆ.


**ಡಾ|| ಜಿ. ರಾಮಕೃಷ್ಣ**

೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್,
ಕಾವೇರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫


# ಒರತೆ-ಕೊರತೆ



**ನಿ**ಮಗೆ ಈ ಹಿಂದೆಯೇ
ಹೇಳಿದೆನಲ್ಲಾ ನೆನಪಿದೆಯಾ ?

ಏಕೋ ತವಕ, ಏನೋ ತಳಮಳ
ಎಲ್ಲೋ ಏನೋ, ಹೆಚ್ಚು
ಕಡಿಮೆಯಾದದ್ದರ ಪ್ರತಿಫಲನ
ಕನ್ನಡಿಯಲ್ಲಿ ನನ್ನ ಮುಖಕ್ಕೇ
ರಾಚುತ್ತಿದೆ.

ನಾನು ಯಾವಾಗ ನಡೆಯತೊಡಗಿದೆ ?
ಆಗ ನನ್ನೊಟ್ಟಿಗೆ ಇದ್ದವರ್‍ಯಾರು ?
ಹೋದವರ್‍ಯಾರು ? ಒಂದೂ ನೆನಪಿಲ್ಲ.
ಅಷ್ಟೇ ಏಕೆ; ನಿನ್ನೆ ಮೊನ್ನೆ ನಡೆದಿದ್ದೂ
ನೆನಪಿನ ಕೊಠಡಿಯಲ್ಲುಳಿದಿಲ್ಲ,
ಉಳಿಯುತ್ತಲೂ ಇಲ್ಲ.

ನಡಿಗೆಯಲ್ಲಿ ವ್ಯತ್ಯಾಸವೆ ?
ಜೊತೆಗೆ ಬರುತ್ತಿದ್ದವರೆಲ್ಲ ಹೊಸಬರೆ ?
ಹಳಬರ ಬಳಿ ಮಾತನಾಡಿದ್ದು;
ಅನುಭವ ಗಳಿಸಿದ್ದು;
ಸಂಬಂಧ ಬೆಳೆಸಿದ್ದು;
ಎಲ್ಲ ಏನಾಗಿಹೋಯಿತು ?

ಕಳೆದ ಅನುಭವವೆಲ್ಲ
ಕಳಚಿಹೋದ ಅನುಭವಗಳೆಲ್ಲ
ಇದ್ದಕ್ಕಿದ್ದಂತೆ ನನ್ನಿಂದ
ಹರಿದುಹೋದದ್ದೇಕೆ ?
ಸಂಗ್ರಹದ ಕೊಠಡಿಗೆ
ತೂತು ಬಿದ್ದದ್ದು ಏಕೆ ? ಹೇಗೆ ?

ಇದ್ದಕ್ಕಿದ್ದಂತೆ ನಾನು
ಸಣ್ಣವನಾದದ್ದು ಏಕೆ ?
ಉಳಿದವರೆಲ್ಲ ಎತ್ತರ ಬೆಳೆದಿದ್ದು
ಏಕೆ ? ಹೇಗೆ ? ಕಾರಣ ಗೊತ್ತಿಲ್ಲ.

ಹೇಗಾದರೂ ಮಾಡಿ ತೂತು ಹುಡುಕಿ
ಅಷ್ಟಬಂಧ ಕಟ್ಟಬೇಕು
ಕಾಲಾನುಕಾಲದವರೆಗೂ
ಸಂಗ್ರಹ ಕಳಚಬಾರದು
ಅಂದುಕೊಳ್ಳುತ್ತೇನೆ.

ಪುರಾಣ ಇತಿಹಾಸಗಳಲ್ಲಿ
ನನ್ನ ಅನುಭವ ಹುಡುಕುತ್ತಿದ್ದೇನೆ.
ಇತಿಹಾಸದ ಪುಟಗಳಲ್ಲಿ ಕಂಡ
ಚಿಕ್ಕ ಪ್ಯಾರಾಗಳನ್ನು ಹಿಗ್ಗಿಸಿ
ಬರೆಯುವ ಪ್ರಯತ್ನ ಮಾಡುತ್ತಿದ್ದೇನೆ.
ನಾನು ಹಿರಿದಾಗಬೇಕೆಂದಿದ್ದೇನೆ.

ನನ್ನ ಜೀವನದ ಅನುಭವ
ಡಾಕ್ಟರೇಟ್‌ಗೆ ತಯಾರಿ
ಮಾಡಿಕೊಳ್ಳುತ್ತಿದ್ದೇನೆ.


**ನಾಗರಾಜ ರಾಯ್ಕರ್**

ಸಿ-೧೫೨, 'ನಂದನ', ೨ನೇ ಅಡ್ಡರಸ್ತೆ,
ಅಗ್ರಹಾರ, ಸಾಗರ - ೫೭೭ ೪೦೧
ಶಿವಮೊಗ್ಗ ಜಿಲ್ಲೆ

ಸನತ್‌ಕುಮಾರ ಬೆಳಗಲಿ

# ಮೇಲ್ಜಾತಿಯ ಧ್ರುವೀಕರಣದ ಅಪಾಯ



ಜಾಗತೀಕರಣದ ಝಳದಲ್ಲಿ ಸಾಮಾಜಿಕ ನ್ಯಾಯದ ಆಶಯಗಳು ಕಮರಿಹೋಗುತ್ತಿರುವಾಗಲೇ ಜಾತಿ ಧ್ರುವೀಕರಣದ ವ್ಯಾಧಿ ಕರ್ನಾಟಕವನ್ನು ಆವರಿಸತೊಡಗಿದೆ. ಸಮಾಜದ ದಮನಿತ ಜಾತಿಗಳು ತಮ್ಮ ಹಕ್ಕುಗಳಿಗಾಗಿ ಒಂದುಗೂಡತೊಡಗಿದರೆ ಆತಂಕ ಪಡಬೇಕಾಗಿಲ್ಲ. ಆದರೆ ಆಸ್ತಿ-ಅಂತಸ್ತುಗಳಲ್ಲಿ ಬಲಿಷ್ಠವಾಗಿರುವ ಜಾತಿಗಳು ಒಂದುಗೂಡತೊಡಗಿದರೆ, ಅದು ಅಪಾಯದ ಮುನ್ಸೂಚನೆ. ರಾಜ್ಯದಲ್ಲಿ ಒಂದೆಡೆ ದುರ್ಬಲ ಜಾತಿಗಳು ಮತ್ತು ವರ್ಗಗಳು ಒಡೆದು ಛಿದ್ರವಾಗುತ್ತಿವೆ. ಶೂದ್ರ ಮತ್ತು ದಲಿತ ಸಂಘಟನೆಗಳ ನಡುವೆ ವಿಭಜನೆಯ ಅಡ್ಡಗೋಡೆ ಎದ್ದುನಿಂತಿದೆ. ಆದರೆ ಬ್ರಾಹ್ಮಣ, ಲಿಂಗಾಯಿತ ಮತ್ತು ಒಕ್ಕಲಿಗರು ಒಳಪಂಗಡಗಳನ್ನು ಬದಿಗೊತ್ತಿ ಒಂದುಗೂಡುತ್ತಿದ್ದಾರೆ. ವಿಧಾನಸಭೆ ಚುನಾವಣೆ ಸಮೀಪಿಸುತ್ತಿದ್ದಂತೆ ಮೇಲ್ಜಾತಿಗಳ ಧ್ರುವೀಕರಣದ ಪ್ರಕ್ರಿಯೆ ಬಿರುಸಾಗಿ ಸಾಗಿದೆ. ಎಲ್ಲೆಡೆ ಈಗ ಜಾತಿ ಸಮಾವೇಶಗಳ ಅಬ್ಬರ ಕೇಳಿಬರುತ್ತಿದೆ.

ಕಳೆದ ಮೂರು ವಾರಗಳಿಂದ ರಾಜ್ಯದ ಎರಡು ಪ್ರಮುಖ ಜಾತಿಗಳ ಜಗದ್ಗುರುಗಳ ಗುರುವಂದನೆ ಕಾರ್ಯಕ್ರಮಗಳು ಒಂದರ ಹಿಂದೆ ಒಂದರಂತೆ ನಡೆಯುತ್ತಿವೆ. ಕಳೆದ ತಿಂಗಳು ತುಮಕೂರಿನಲ್ಲಿ ಸಿದ್ಧಗಂಗಾಸ್ವಾಮಿಗಳ ಗುರುವಂದನೆ ಕಾರ್ಯಕ್ರಮ ನಡೆಯಿತು. ನಂತರ ಕೋಲಾರದಲ್ಲಿ ಒಕ್ಕಲಿಗರ ಗುರುತಿಲಕ ಬಾಲಗಂಗಾಧರನಾಥ ಸ್ವಾಮಿಗಳ ಗುರುವಂದನೆ ನಡೆಯಿತು. ಇದು ಸಾಲದೆಂಬಂತೆ ರಾಜ್ಯ ಒಕ್ಕಲಿಗರ ಸಂಘ ಜೂನ್ ೩ರಂದು ಅದೇ ಆದಿಚುಂಚನಗಿರಿ ಸ್ವಾಮಿಗಳ ಗುರುವಂದನೆ ಕಾರ್ಯಕ್ರಮ ನಡೆಸಿತು. ಇನ್ನೊಂದೆಡೆ ಶಿವಮೊಗ್ಗದಲ್ಲಿ ಬ್ರಾಹ್ಮಣರು ಪೇಜಾವರ ಮತ್ತು ರಾಘವೇಶ್ವರ ಸ್ವಾಮಿಗಳನ್ನು ಮುಂದಿಟ್ಟುಕೊಂಡು ಸಮಾವೇಶ ನಡೆಸಿದರು. ಬಹುಶಃ ವಿಧಾನಸಭೆ ಚುನಾವಣೆಯವರೆಗೆ ಈ ಗುರುವಂದನೆ ಕಾರ್ಯಕ್ರಮಗಳು ನಿರಂತರವಾಗಿ ನಡೆಯುವ ಸಂಭವವಿದೆ.

ಹಿಂದುಳಿದ ಜಾತಿ-ಜನವರ್ಗಗಳು ಕೂಡ ಸುಮ್ಮನೆ ಕುಳಿತಿಲ್ಲ. ಇತ್ತೀಚೆಗೆ ದಾವಣಗೆರೆಯಲ್ಲಿ ಕುರುಬರ ಸಮ್ಮೇಳನ ನಡೆಯಿತು. ಅಲ್ಲಲ್ಲಿ ಛಲವಾದಿ ಸಮಾವೇಶಗಳು, ಮಾದಿಗ ಮೀಸಲಾತಿ ಹೋರಾಟದ ಸಭೆಗಳು ನಡೆಯುತ್ತಿವೆ. ಶ್ರೇಣೀಕೃತ ಜಾತಿ ವ್ಯವಸ್ಥೆಯ ತಳಪಾಯದಲ್ಲಿರುವ ಈ ಜನಗಳು ಒಂದುಗೂಡಿ ತಮ್ಮ ಹಕ್ಕುಗಳಿಗಾಗಿ ಧ್ವನಿ ಎತ್ತುತ್ತಿಲ್ಲ. ಕುರುಬರ ಸಮಾವೇಶವನ್ನು ಎಲ್ಲ ಹಿಂದುಳಿದ ವರ್ಗಗಳ ಸಮಾವೇಶವನ್ನಾಗಿ ಮಾಡಬಹುದಿತ್ತು. ದಲಿತರು ಬಲಗೈ ಮತ್ತು ಎಡಗೈ ಪಂಗಡಗಳು ಪ್ರತ್ಯೇಕ ಸಭೆ-ಹೋರಾಟಗಳನ್ನು ನಡೆಸುವ ಬದಲು ಒಂದುಗೂಡಿ ತಮ್ಮನ್ನು ಬಾಧಿಸುತ್ತಿರುವ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬಹುದಾಗಿತ್ತು. ಆದರೆ ಇದಕ್ಕೆ ತದ್ವಿರುದ್ಧವಾಗಿ ಶೋಷಿತ ವರ್ಗಗಳ ಮತ್ತು ಜಾತಿಗಳಲ್ಲಿ ಛಿದ್ರೀಕರಣದ ಪ್ರಕ್ರಿಯೆ ತೀವ್ರವಾಗುತ್ತಿದೆ.

ಈ ಮೇಲುಜಾತಿಗಳ ಸಮಾವೇಶಗಳ ಹಿಂದೆ ರಾಜಕೀಯ ಅಧಿಕಾರವನ್ನು ಸ್ವಾಧೀನಪಡಿಸಿಕೊಳ್ಳುವ ಮಸಲತ್ತು ಎದ್ದುಕಾಣುತ್ತಿದೆ. ಯಡಿಯೂರಪ್ಪ ಲಿಂಗಾಯಿತರ ಪ್ರಾತಿನಿಧಿಕ ಸಂಕೇತವಾಗಿದ್ದಾರೆ. ದೇವೇಗೌಡ ಮತ್ತು ಕುಮಾರಸ್ವಾಮಿ ಒಕ್ಕಲಿಗ ನಾಯಕರೆಂದು ಬಿಂಬಿಸಲ್ಪಡುತ್ತಿದ್ದಾರೆ. ಇವರೆಲ್ಲರ ಮೇಲೆ ಸವಾರಿ ಮಾಡುವ ವಿಪ್ರರು ತಮ್ಮದೇ ರಹಸ್ಯ ಅಜೆಂಡಾ ಇಟ್ಟುಕೊಂಡು ಆಟವಾಡುತ್ತಿದ್ದಾರೆ. ಈ ಎಲ್ಲ ಧ್ರುವೀಕರಣದ ಹಿಂದೆ ಮಠಾಧೀಶರ ನೇರ ಕೈವಾಡ ಎದ್ದು ಕಾಣುತ್ತದೆ. ಆದರೆ ಈ ಮೇಲ್ಜಾತಿಗಳಲ್ಲಿ ಇರುವ ಬಡವರಿಗೆ ಈ ಜಾತಿ ಸಂಘಟನೆಯಿಂದ ಯಾವುದೇ ಪ್ರಯೋಜನವಿಲ್ಲ. ಬೆಳೆ ವಿಫಲವಾಗಿ ಮೇಲ್ಜಾತಿಯ ರೈತರು ಆತ್ಮಹತ್ಯೆ ಮಾಡಿಕೊಳ್ಳುವಾಗ ಅವರ ಜಾತಿಯ ಸಂಘಟನೆ ಮತ್ತು ಸ್ವಾಮಿಗಳು ನೆರವಿಗೆ ಬರಲಿಲ್ಲ. ಆದರೆ ಅಧಿಕಾರದ ಕುರ್ಚಿ ಹಿಡಿಯಲು ಬಡವರ ಕುತ್ತಿಗೆಗೆ ಜಾತಿಯನ್ನು ಬಿಗಿದು ತಮ್ಮ ಸ್ವಾರ್ಥ ಸಾಧಿಸಲು ಮೇಲ್ಜಾತಿಗಳಲ್ಲಿನ ಪಟ್ಟಭದ್ರ ಹಿತಾಸಕ್ತಿಗಳು ಯತ್ನಿಸುತ್ತಿವೆ.

ಎಪ್ಪತ್ತರ ದಶಕದಲ್ಲಿ ದೇವರಾಜ ಅರಸು ದಲಿತರು, ಹಿಂದುಳಿದವರು ಮತ್ತು ಅಲ್ಪಸಂಖ್ಯಾತರನ್ನು ಒಂದೇ ವೇದಿಕೆಗೆ ತಂದು ಪ್ರಬಲವಾದ ರಾಜಕೀಯ ಶಕ್ತಿಯೊಂದನ್ನು ರೂಪಿಸಿದರು. ಆಗ ಎಡ -ಪ್ರಗತಿಪರ ಶಕ್ತಿಗಳನ್ನು ತಮ್ಮ ಜೊತೆಗೆ ಕೂಡಿಸಿಕೊಂಡಿದ್ದರು. ಈ ರಾಜಕೀಯ ಶಕ್ತಿಯ ಮೂಲಕ ಅಧಿಕಾರಕ್ಕೆ ಬಂದು ಭೂಸುಧಾರಣೆಯಂತಹ ಪ್ರಗತಿಪರ ಕಾರ್ಯಕ್ರಮಗಳನ್ನು ಜಾರಿಗೆ ತಂದರು. ಹಾವನೂರು ವರದಿ ಅನುಷ್ಠಾನಕ್ಕೆ ಬಂತು ಅಂತಲೇ ರಾಜಕೀಯ ಅಧಿಕಾರ ಕೈತಪ್ಪಿ ಹೋಗಿದ್ದರಿಂದ ರೊಚ್ಚಿಗೆದ್ದ ಲಿಂಗಾಯಿತ ಮತ್ತು ಒಕ್ಕಲಿಗರಲ್ಲಿನ ಮೇಲ್ವರ್ಗಗಳ ಪಟ್ಟಭದ್ರ ಹಿತಾಸಕ್ತಿಗಳು ಅರಸು ಸರ್ಕಾರದ ವಿರುದ್ಧ ಭೂಮಿ ಆಕಾಶ ಒಂದು ಮಾಡಿ ಕೂಗಾಡಿದರು. ಕೈತಪ್ಪಿ ಹೋದ ಅಧಿಕಾರಕ್ಕಾಗಿ ಚಡಪಡಿಸಿದರು.

ಅರಸು ನಂತರ ಸಾಮಾಜಿಕ ನ್ಯಾಯದ ಅವನತಿ ಆರಂಭವಾಯಿತು. ತಾವು ತುಂಬ ಭರವಸೆಯಿಟ್ಟು ಬೆಳೆಸಿದ ದಲಿತ ಮತ್ತು ಹಿಂದುಳಿದ ನಾಯಕರು ಕೊನೆಯವರೆಗೂ



ತಮ್ಮ ಜೊತೆ ಉಳಿಯಲಿಲ್ಲ ಎಂಬ ನೋವು ಅರಸರನ್ನು ಸಾಯುವವರೆಗೆ ಬಾಧಿಸಿತು. ಇಂದಿರಾ ಗಾಂಧಿಯವರ ಕೃಪೆಯಿಂದ ಮುಖ್ಯಮಂತ್ರಿಯಾದ ಗುಂಡೂರಾಯರು ರಾಜ್ಯದ ಪ್ರಥಮ ಬ್ರಾಹ್ಮಣ ಮುಖ್ಯಮಂತ್ರಿ ಎನಿಸಿದರು. ಅರಸು ಸಂಪುಟದಲ್ಲಿ ಜೊತೆಗಿದ್ದ ದುರ್ಬಲ ವರ್ಗಗಳ ರಾಜಕಾರಣಿಗಳು ಗುಂಡೂರಾವ್ ಪಾಳಯಕ್ಕೆ ಜಿಗಿದು ಮಂತ್ರಿಗಳಾದರು.

ತೊಂಬತ್ತರ ದಶಕದಲ್ಲಿ ಹಿಂದುತ್ವದ ರಾಜಕಾರಣ ಕರ್ನಾಟಕಕ್ಕೆ ಕಾಲಿರಿಸಿತು. ದೇವರಾಜ ಅರಸು ಅವರು ಒಂದುಗೂಡಿಸಿದ ದಲಿತ, ಹಿಂದುಳಿದ ಮತ್ತು ಅಲ್ಪಸಂಖ್ಯಾತ ಜಾತಿಗಳು ಒಡೆದು ಛಿದ್ರವಾದವು. ಅದರಲ್ಲೂ ಮುಖ್ಯವಾಗಿ ಹಿಂದುಳಿದ ಜಾತಿಗಳು ಚೂರುಚೂರಾಗಿ ಕೋಮುವಾದಿ ರಾಜಕಾರಣದ ಬಲೆಗೆ ಬಿದ್ದವು. ಅರಸು ಅವರ ಭೂಸುಧಾರಣಾ ಶಾಸನದ ಪ್ರಯೋಜನ ಪಡೆದ ಕರಾವಳಿ ಮತ್ತು ಮಲೆನಾಡಿನ ಹಿಂದುಳಿದ ಜಾತಿಗಳ ಯುವಕರು ಕೇಸರಿ ಬಾವುಟ ಹಿಡಿದರು. ಇನ್ನೊಂದೆಡೆ ವೀರೇಂದ್ರ ಪಾಟೀಲರ ನಂತರ ನಾಯಕರ ಹುಡುಕಾಟದಲ್ಲಿದ್ದ ಬಿಜೆಪಿ ಉತ್ತರ ಕರ್ನಾಟಕದ ಲಿಂಗಾಯಿತರಿಗೆ ಯಡಿಯೂರಪ್ಪ ಅವರ ನಾಯಕನೆಂದು ಮುಂದೆ ತಂದು ನಿಲ್ಲಿಸಿ ಮೊದಲ ಬಾರಿ ಕರ್ನಾಟಕದ ಅಧಿಕಾರ ಸೂತ್ರ ಹಿಡಿಯಿತು.

ಹಿಂದುತ್ವವಾದದಿಂದ ಆರಂಭವಾದ ದಲಿತ-ಹಿಂದುಳಿದ ವರ್ಗಗಳ ಛಿದ್ರೀಕರಣ ಪ್ರಕ್ರಿಯೆ ಪರವಾಗಿ ಅಧಿಕಾರಕ್ಕೆ ಬಂದ ಬಿಜೆಪಿ, ಸಂಘ ಪರಿವಾರದ ಸೂತ್ರದ ಗೊಂಬೆಯಂತೆ ಕಾರ್ಯ ನಿರ್ವಹಿಸತೊಡಗಿತು. ಸಾಮಾಜಿಕ ನ್ಯಾಯದ ಆಶಯಗಳು ಸಮಾಧಿಯಾಗಿ ಭಗವದ್ಗೀತೆ ಅಭಿಯಾನ, ಗೋ ಹತ್ಯೆ ನಿಷೇಧ, ಮತಾಂತರ ನಿರ್ಬಂಧ, ಶಾಲಾ ಪಠ್ಯಪುಸ್ತಕಗಳ ಕೇಸರೀಕರಣದಂತಹ ತನ್ನ ಕಾರ್ಯಸೂಚಿಯನ್ನು ಆರ್‌ಎಸ್‌ಎಸ್ ಸರ್ಕಾರದ ಮೂಲಕ ಜಾರಿಗೆ ತರತೊಡಗಿತು. ಕಬಳಿಕೆಯಲ್ಲಿ ಮಾತ್ರ ಅಪಾರ ಆಸಕ್ತಿಯನ್ನು ಹೊಂದಿದ್ದ ಯಡಿಯೂರಪ್ಪ ಅವರಿಗೆ ಇದ್ಯಾವುದೂ ಅಪಾಯಕಾರಿ ಅನ್ನಿಸಲಿಲ್ಲ. ಆರ್‌ಎಸ್‌ಎಸ್ ಶಾಖೆಯಲ್ಲಿ ಬೆಳೆದ ಯಡಿಯೂರಪ್ಪನವರಿಗೆ ಈ ಅಜೆಂಡಾ ಜಾರಿಗೆ ಅಡ್ಡಿಯಾಗಲಿಲ್ಲ. ಬರೀ ನುಂಗುವುದರಲ್ಲಿ ತೊಡಗಿ ನುಂಗಿದ್ದನ್ನು ದಕ್ಕಿಸಿಕೊಳ್ಳಲಾಗದೆ ಈಗ ಸಿಬಿಐ ಬಲೆಗೆ ಬಿದ್ದಿದ್ದಾರೆ.

ಯಡಿಯೂರಪ್ಪ ಅವರ ಜಾಗದಲ್ಲಿ ಮುಖ್ಯಮಂತ್ರಿಯಾಗಿದ್ದ ಸದಾನಂದಗೌಡರಿಗೆ ತಮ್ಮ ಕುರ್ಚಿಯನ್ನು ಉಳಿಸಿಕೊಳ್ಳಲು ಒಕ್ಕಲಿಗ ಎಂಬ ಜಾತಿಯ ಅಸ್ತ್ರ ಬೇಕಾಗಿತ್ತು. ಈ ಗೌಡರನ್ನು ಮುಂದಿಟ್ಟುಕೊಂಡು ತಮ್ಮ ಲೂಟಿಯನ್ನು ಮುಂದುವರಿಸಲು ಹೊರಟಿರುವ ಪಟ್ಟಭದ್ರ ಹಿತಾಸಕ್ತಿಗಳಿಗೂ ಕೂಡ ಜಾತಿಯ ರಕ್ಷಾಕವಚ ಬೇಕಾಗಿದೆ. ಅದಕ್ಕಾಗಿ ಗುರುವಂದನೆ ಹೆಸರಿನಲ್ಲಿ ಲಕ್ಷಾಂತರ ರೂಪಾಯಿ ಖರ್ಚು ಮಾಡಿ, ಸಮಾವೇಶ ನಡೆಸುತ್ತಿದ್ದಾರೆ. ಪಕ್ಷಭೇದವಿಲ್ಲದೆ ಒಕ್ಕಲಿಗರೆಲ್ಲ ಒಂದು ಎಂದು ತೋರಿಸಲು ದೇವೇಗೌಡ, ಎಸ್. ಎಂ. ಕೃಷ್ಣ, ಕುಮಾರಸ್ವಾಮಿ, ಸದಾನಂದಗೌಡ, ಅಶೋಕ್, ಅಂಬರೀಶ್, ಡಿಕೆಶಿ ಇವರೆಲ್ಲ ಫೋಟೋ ಹಾಕಿ ಪ್ರಚಾರ ಮಾಡುತ್ತಿದ್ದಾರೆ.

ಈ ಜಾತಿ ರಾಜಕಾರಣ ಎಷ್ಟು ಕೀಳುಮಟ್ಟಕ್ಕೆ ಹೋಗಿದೆಯೆಂದರೆ, ಯಡಿಯೂರಪ್ಪನವರ ಪರವಾಗಿ ಸಮಾವೇಶಗಳನ್ನು ಮಾಡುವ ಲಿಂಗಾಯಿತರು ಹನ್ನೆರಡನೇ ಶತಮಾನದಲ್ಲಿ ಜಾತಿ ವ್ಯವಸ್ಥೆಯ ವಿರುದ್ಧ ಬಂಡಾಯವೆದ್ದ ಬಸವಣ್ಣನವರನ್ನು ತಮ್ಮ ಸಂಕೇತವೆಂದು ಬಳಸಿಕೊಂಡು ಅವರ ಭಾವಚಿತ್ರ ಹಾಕಿಕೊಳ್ಳುತ್ತಾರೆ. ಇನ್ನೊಂದೆಡೆ ಒಕ್ಕಲಿಗರು ಜಾತಿ ವಿನಾಶಕ್ಕೆ ಕರೆ ನೀಡಿ ರಾಷ್ಟ್ರಕವಿ ಕುವೆಂಪು ಅವರು ತಮ್ಮವರೆಂದು ಅವರ ಫೋಟೋ ಹಾಕಿಕೊಳ್ಳುತ್ತಾರೆ. ''ಆ ಮತ – ಈ ಮತದ ಹಳೆಯ ಮತದ ಸಹವಾಸ



ಸಾಕಿನ್ನು, ಸೇರಿರೈ ಮನುಜಮತಕೆ'' ಎಂದು ಸಾರಿದ ಕುವೆಂಪು ವಿಶ್ವಮಾನವ ತತ್ವ ಪ್ರತಿಪಾದಿಸಿದ್ದರು. ಅಂಥವರನ್ನು ಜಾತಿ ರಾಜಕಾರಣದ ಕೊಚ್ಚೆಯಲ್ಲಿ ಹಾಕಲು ಇವರಿಗೆ ನಾಚಿಕೆ ಅನ್ನಿಸುತ್ತಿಲ್ಲ. ಪೂರ್ಣಚಂದ್ರ ತೇಜಸ್ವಿ ಬದುಕಿದ್ದಿದ್ದರೆ, ಈ ಆಷಾಢಭೂತಿಗಳಿಗೆ ಪಾಠ ಕಲಿಸುತ್ತಿದ್ದರು.

ಮೇಲ್ಜಾತಿಗಳ ಈ ಧ್ರುವೀಕರಣ, ಹಿಂದುತ್ವವಾದಿಗಳ ಫ್ಯಾಸಿಸ್ಟ್ ಹುನ್ನಾರ, ಜರತಾರಿ ಜಗದ್ಗುರುಗಳ ಕಿತಾಪತಿಯಿಂದಾಗಿ ದಲಿತ, ಅಲ್ಪಸಂಖ್ಯಾತ, ಹಿಂದುಳಿದ ಜನವರ್ಗಗಳು ಮಾತ್ರವಲ್ಲ, ಮೇಲ್ಜಾತಿಯಲ್ಲಿನ ಬಡವರು ಕೂಡ ತಬ್ಬಲಿಗಳಾಗಿ ನಿಂತಿದ್ದಾರೆ. ದಮನಿತ ವರ್ಗಗಳು ಛಿದ್ರಗೊಂಡಿವೆ. ಹಿಂದುಳಿದ ವರ್ಗಗಳನ್ನು ಒಡೆದು ಅಲ್ಪಸಂಖ್ಯಾತರ ಮೇಲೆ ಛೂ ಬಿಡುವ ಹುನ್ನಾರ ನಡೆದಿದೆ. ದುರ್ಬಲ ಜಾತಿಗಳಲ್ಲೂ ಕೂಡ ಜಗದ್ಗುರುಗಳು ಹುಟ್ಟಿಕೊಂಡಿದ್ದಾರೆ. ಅಲ್ಲಿ ಪಾದಪೂಜೆ ಆರಂಭವಾಗಿದೆ. ಇದಕ್ಕೆಲ್ಲ ಸಂಘ ಪರಿವಾರದ ಪುರೋಹಿತಶಾಹಿ ನಾಯಕತ್ವ ಮಾತ್ರವಲ್ಲ, ಅದರ ಪಾದಪೂಜೆಯಲ್ಲಿ ತೊಡಗಿದ ಯಡಿಯೂರಪ್ಪ, ಈಶ್ವರಪ್ಪ, ಸದಾನಂದಗೌಡ, ಶ್ರೀರಾಮುಲು, ಉಮಾಭಾರತಿ, ಬಂಗಾರು ಲಕ್ಷ್ಮಣ್, ಕಲ್ಯಾಣಸಿಂಗ್‌ರಂತಹ ಶೂದ್ರ ನಾಯಕರು ಕೂಡ ಕಾರಣ. ಜಾತಿಯ ಕಾರಣಕ್ಕೆ ಪ್ರಗತಿಪರರು ಇವರ ಬಗ್ಗೆ ಸಹಾನುಭೂತಿ ತೋರಿಸುವ ಅಗತ್ಯವಿಲ್ಲ.

ಇಂತಹ ಸನ್ನಿವೇಶದಲ್ಲಿ ದಲಿತ ಸಂಘರ್ಷ ಸಮಿತಿಯಂತಹ ಜಾತಿ ವಿನಾಶದ ಗುರಿ ಹೊಂದಿರುವ ಪ್ರಗತಿಪರ ಸಂಘಟನೆಗಳು ಸಮಾಜವಾದಿಗಳು, ಮಾರ್ಕ್ಸ್‌ವಾದಿಗಳು ಒಂದುಗೂಡಿ ದಿಕ್ಕು ತಪ್ಪಿದ ಶೋಷಿತ ಜನವರ್ಗಗಳನ್ನು ಒಂದೇ ವೇದಿಕೆಗೆ ತರಬೇಕಾಗಿದೆ. ಡಿಎಸ್‌ಎಸ್‌ನಲ್ಲಿ ಎಷ್ಟೇ ಗುಂಪುಗಳಿದ್ದರೂ ಇವೆಲ್ಲ ಜಾತಿ ವಿನಾಶದ ಪರವಾಗಿರುವ ಆಶಯ ಹೊಂದಿವೆ. ಅಂತಲೇ ಈ ಚಾರಿತ್ರಿಕ ಹೊಣೆಗಾರಿಕೆಯನ್ನು ನಿಭಾಯಿಸಲು ಈ ಎಲ್ಲ ಪ್ರಗತಿಪರ ಸಂಘಟನೆಗಳು ಒಂದುಗೂಡಿ ಮೇಲ್ಜಾತಿಗಳ, ಮೇಲ್ವರ್ಗಗಳ ಜಾತಿ ಧ್ರುವೀಕರಣದ ಕೋಟೆಯನ್ನು ಭೇದಿಸಿ ಸಮಾನತೆಯ ಬೆಳಕಿನ ದೀವಟಿಗೆಯನ್ನು ಎತ್ತಿ ಹಿಡಿದು ಮುನ್ನಡೆಯಬೇಕಿದೆ.

**ಸನತ್‌ಕುಮಾರ ಬೆಳಗಲಿ**
ನಂ. ಎಲ್‌ಎಫ್-೧೭/೬, ಬಿಡಿಎ ಫ್ಲ್ಯಾಟ್ಸ್, ಬಿಟಿಎಂ ಬಡಾವಣೆ, ಬೆಂಗಳೂರು - ೫೬೦ ೦೭೬



ನವಕರ್ನಾಟಕ ಪ್ರಕಾಶನಕ್ಕೆ ಹಲವು ವಿಜ್ಞಾನ ಪುಸ್ತಕಗಳನ್ನು ಬರೆದುಕೊಟ್ಟ ಡಾ॥ ಎನ್. ಎಸ್. ಲೀಲಾ ಅವರ 'ವರ್ಣ ಮಾಯಾಜಾಲ' ಕೃತಿಗೆ ಕರ್ನಾಟಕ ಸಂಘ, ಶಿವಮೊಗ್ಗ ಇವರು ವಿಜ್ಞಾನ ಸಾಹಿತ್ಯಕ್ಕಾಗಿ ನೀಡುವ ೨೦೧೧ನೇ ಸಾಲಿನ **ಹಸೂಡಿ ವೆಂಕಟಶಾಸ್ತ್ರಿ** ಪ್ರಶಸ್ತಿ ನೀಡಿ ಗೌರವಿಸಿದ್ದಾರೆ. ಈ ಕೃತಿ ನವಕರ್ನಾಟಕದ ಪ್ರಕಟಣೆ ಎಂದು ತಿಳಿಸಲು ಹರ್ಷಿಸುತ್ತೇವೆ. ಪ್ರಶಸ್ತಿ ಪಡೆದಿರುವ ಲೇಖಕಿಗೆ 'ಹೊಸತು' ಬಳಗದ ಅಭಿನಂದನೆಗಳು.



ಒಂದು ಜಪಾನೀ ಕಥೆ

# ಸಡಾಕೊ ಮತ್ತವಳ ಸಾವಿರ ಕಾಗದದ ಕೊಕ್ಕರೆಗಳು

ಕನ್ನಡಕ್ಕೆ : ಟಿ. ಎಸ್. ಲಲಿತ



ಸಡಾಕೊ, ಸಸಾಕಿ ಕುಟುಂಬದ ನಾಲ್ವರಲ್ಲಿ ಹಿರಿಯ ಮಗಳು. ಇಬ್ಬರು ಸೋದರರು, ಮತ್ತೊಬ್ಬ ಸೋದರಿ. ತಂದೆ ಸಸಾಕಿ ಕ್ಷೌರದಂಗಡಿಯ ಮಾಲೀಕ.

ಜಪಾನಿನಲ್ಲಿ ಆಗಸ್ಟ್ ೬ ವಿಶೇಷ ದಿನ - ಆಟಂಬಾಂಬ್ ಬಿದ್ದಾಗ ಸತ್ತವರ ಸ್ಮರಣೆಯ ದಿನ. ಸಡಾಕೋನ ಅಜ್ಜಿ ಕೂಡ ಆ ದಿನ ಸತ್ತವರಲ್ಲೊಬ್ಬಳು. ತಮ್ಮ ಹತ್ತಿರದವರನ್ನು ಕಳೆದು ಕೊಂಡವರು, ಅವರಿಗೆ ಗೌರವ ಸಲ್ಲಿಸಲು ಉದ್ಯಾನವನಕ್ಕೆ ಹೋಗುತ್ತಾರೆ.

ಸಡಾಕೊ ಎಂದಿಗಿಂತ ಬೇಗ ಎದ್ದಳು. ಹವಾ ಹೇಗೆ ಇದೆಯೋ ನೋಡೋಣವೆಂದು ಹೊರಬಂದವಳು ತನ್ನ ತಂಗಿ-ತಮ್ಮಂದಿರನ್ನೆಬ್ಬಿಸಲು ಒಳಬಂದಳು. ಅಡಿಗೆಮನೆಯಲ್ಲಿ ಆಹಾರವೆಲ್ಲ ತಯಾರಾಗಿದೆಯೇ, ಎಂದು ನೋಡಿದ ಅವಳು ಹುಟ್ಟು ಓಟಗಾರ್ತಿ. ನಡೆಯಲು ಕಲಿವ ಮೊದಲೇ ಓಡು ವುದನ್ನು ಕಲಿತಳೆಂದು ಅವಳಮ್ಮ ಅನ್ನುತ್ತಿದ್ದುದುಂಟು.

ಎಲ್ಲರೂ ತಯಾರಾಗುತ್ತಿದ್ದಂತೆ, ಸಸಾಕಿ ತಮ್ಮ ಪೂರ್ವಿಕರಿಗಾಗಿ ಹಾಗೂ ತನ್ನ ಅಂಗಡಿಗಾಗಿ ಪ್ರಾರ್ಥನೆ ಸಲ್ಲಿಸಿದ. ತಮ್ಮನ್ನು ಆಟಂಬಾಂಬಿನ ಖಾಯಿಲೆಗಳಿಂದ ರಕ್ಷಿಸುವಂತೆ ಪ್ರಾರ್ಥಿಸಿದ. ಕಾರಣ, ಅದರಿಂದಾಗಿ ಜನಗಳಿನ್ನೂ ಸಾಯುತ್ತಿದ್ದರಲ್ಲ.

ಬೇಗ, ಬೇಗ ತಿಂಡಿ ತಿಂದು, ಅಡಿಗೆ ಕೋಣೆಯನ್ನು ಶುಚಿಗೊಳಿಸಿ ಇತರರಿಗಾಗಿ ಕಾಯುತ್ತ ಬಾಗಿಲಲ್ಲಿ ನಿಂತಳು ಸಡಾಕೊ. ಆಗ ಜೇಡವೊಂದು ಕೊಠಡಿಯ ಉದ್ದಕ್ಕೂ ಹರಿದುಹೋಗುತ್ತಿದ್ದುದನ್ನು ಕಂಡು ಖುಷಿಯಾಯ್ತು. ಕಾರಣ, ಅದೊಂದು ಶುಭ ಶಕುನ.

ಕುಟುಂಬವೆಲ್ಲ ಹೊರಟಿತು. ಕಿಂಡರ್‌ಗಾರ್ಟನ್‌ನಿಂದ ತನ್ನ ಗೆಳತಿಯಾಗಿದ್ದ ಪ್ರೀತಿಯ ಜಿಜುಕೊನೊಂದಿಗೆ ಮುಂದೋಡಿದಳು ಸಡಾಕೊ. ಬಿಸಿಲಲ್ಲಿ ಅಷ್ಟು ಓಡಬೇಡ ವೆನ್ನುವ ಅವಳಮ್ಮನ ಮಾತೂ ಕೇಳಿಸಲಿಲ್ಲ. ತಂದೆ ನಕ್ಕು ಹೇಳಿದ, ''ಹಾರಿ, ನೆಗೆಯಲು ಸಾಧ್ಯವಿದ್ದಾಗ, ಅವಳು ನಡೆದುದನ್ನೆಂದಾದರೂ ನೋಡಿದ್ದೀಯಾ ?'' ತನ್ನ ಮಗಳು ಅಷ್ಟು ವೇಗದ ಓಟಗಾರ್ತಿ ಎಂಬ ಬಗ್ಗೆ ಹೆಮ್ಮೆ ಆತನಿಗೆ.

ಶಾಂತಿವನದ ಪ್ರವೇಶದ್ವಾರ ದಾಟಿದಾಗ, ಹಿರೋಶಿಮಾ ವನ್ನು ಸುಟ್ಟ ಬೆಂಕಿಯುಂಡೆಯಿಂದ ಹಾಳುಬಿದ್ದ ನಗರದಲ್ಲಿ ಸತ್ತು ಸಾಯುತ್ತಿರುವ ಜನರ ಚಿತ್ರಗಳನ್ನೊಳಗೊಂಡ ಮೆಮೋರಿಯಲ್ ಕಟ್ಟಡವನ್ನು ದಾಟಿಹೋಗುತ್ತಿದ್ದರು. ಜಿಜುಕೊಳ ಕೈಹಿಡಿದ ಸಡಾಕೊ ಬೇಗ ಬೇಗನೆ ಆ ಕಟ್ಟಡ ದಾಟಿದಳು. ''ಆ ಕೆಂಡದುಂಡೆ ನನಗೆ ನೆನಪಿದೆ. ಸಾವಿರ ಸೂರ್ಯರು ಒಟ್ಟಿಗೆ ಬಂದಂತಾಯ್ತು. ಆ ಬೆಳಕು ಸೂಜಿ ಗಳಂತೆ ನನ್ನ ಕಣ್ಣುಚುಚ್ಚಿತು'' ಎಂದು ತನ್ನ ಗೆಳತಿಯ ಕಿವಿಯಲ್ಲಿ ಪಿಸುಗುಟ್ಟಿದಳು ಸಡಾಕೊ. ಜಿಜುಕೊಗೆ ಆಚ್ಚರಿ. ಅವಳು ಆಗ ಇನ್ನೂ ಮಗು, ಅವಳಿಗೆ ಇದೆಲ್ಲಾ ಹೇಗೆ ನೆನಪಿದೆ ಎಂದು.

ಬೌದ್ಧ ಗುರುಗಳಿಂದ ಭಾಷಣದ ನಂತರ ನೂರಾರು ಬಿಳಿಯ ಪಾರಿವಾಳಗಳನ್ನು ಪಂಜರದಿಂದ ಹಾರಿಬಿಡಲಾಯ್ತು. ನಂತರ ಕ್ಯಾಂಡಿ ಮಾರುತ್ತಿದ್ದ ಅಜ್ಜಿಯ ಬಳಿ ಇತರರನ್ನು ಕರೆ ದೊಯ್ದಳು ಸಡಾಕೊ. ಆಹಾರ ಕೊಳ್ಳುವುದು, ಮಾರುವು ದರಲ್ಲೇ ದಿನ ಕಳೆಯಿತು. ಆಟಂಬಾಂಬ್‌ನಿಂದ ಸುಟ್ಟ ವಿಕಾರ ಕಲೆಗಳಿಂದಾಗಿ ಯಾರೂ ಮನುಷ್ಯರಂತೆಯೇ ಕಾಣುತ್ತಿರಲಿಲ್ಲ. ಕಾರ್ಯಕ್ರಮದ ಅಂತಿಮ ಭಾಗ ಕುಟುಂಬದ ಸದಸ್ಯರ ನೆನಪಲ್ಲಿ ಹಚ್ಚಿದ ದೀಪಗಳನ್ನು ತೇಲಿಬಿಡುವುದಾಗಿತ್ತು.

ಮರುದಿನ ಎಂದಿನಂತೆ ಉತ್ಸಾಹದಿಂದ ಓಡುತ್ತಾ ಮನೆಗೆ ಬಂದಳು ಸಡಾಕೊ. ರಿಲೇ ಟೀಮ್‌ಗಾಗಿ ಅವಳು ಆಯ್ಕೆಯಾಗಿದ್ದಳು. ಇದರಲ್ಲಿ ಗೆದ್ದರೆ ಜೂನಿಯರ್ ಹೈ ಟೀಮ್‌ಗೆ ಆಯ್ಕೆಯಾಗುತ್ತಿದ್ದಳು. ಅಂದಿನಿಂದ 'ರಿಲೇ' ವಿಚಾರ ಬಿಟ್ಟರೆ ಬೇರೇನೂ ಬೇಡ ಸಡಾಕೊಗೆ. ಪ್ರತಿದಿನ ಅಭ್ಯಾಸ. ಅವಳ ಸೋದರ ಅವಳನ್ನು ಪರೀಕ್ಷಿಸಿದಾಗ ಅವಳ ವೇಗದ ಬಗ್ಗೆ ಎಲ್ಲರಿಗೂ ಅಚ್ಚರಿ. ಇಡೀ ಶಾಲೆಗೇ ತಾನು ಅತ್ಯುತ್ತಮ ಓಟಗಾರ್ತಿ ಎಂಬಂತೆ ಕನಸು ಕಂಡಳು. ಕುಟುಂಬದ ಹೆಮ್ಮೆ ಗೌರವದ ಬಗ್ಗೆ ಯೋಚಿಸಿದ ತಂದೆಗೆ ಖುಷಿ .

ಕೊನೆಗೂ ಆದಿನ ಬಂದೇಬಿಟ್ಟಿತು. ಸಡಾಕೊ ಆತಂಕಗೊಂಡಿದ್ದಳು. ತಂದೆ, ತಾಯಿ ಪ್ರೋತ್ಸಾಹಿಸಿದರು. ತನ್ನೆಲ್ಲ ಶಕ್ತಿಯೊಂದಿಗೆ ಓಡಿದಳು ಸಡಾಕೊ. ಪಂದ್ಯ ಮುಗಿದಾಗ ಅವಳ ಹೃದಯ ನೋವಿನಿಂದ ಹೊಡೆದುಕೊಳ್ಳುತ್ತಿತ್ತು. ಕಣ್ಣು ಕತ್ತಲಿಟ್ಟಿತು. ''ನಿಮ್ಮ ಟೀಂ ಗೆದ್ದಿತು'' ಎನ್ನುವುದವಳಿಗೆ ಕೇಳಿಸಲೇ ಇಲ್ಲ. ತಲೆಯಾಡಿಸಿದಳು. ತಲೆ ಸುತ್ತುವಿಕೆ ನಿಂತಿತು.

ಜೂನಿಯರ್ ಟೀಂನಲ್ಲಿ ಭಾಗವಹಿಸಬೇಕಾಗಿದ್ದರಿಂದ ಚಳಿಗಾಲ ಪೂರ್ತಾ ಅಭ್ಯಾಸ ಮಾಡಿದಳು. ಆದರೆ ಪ್ರತಿ ಬಾರಿ ಓಡಿದಾಗಲೂ ಕೊನೆಯಲ್ಲಿ ಕಣ್ಣು ಕತ್ತಲಿಡುತ್ತಿತ್ತು. ಆದರದನ್ನವಳು ಯಾರಿಗೂ ಹೇಳಲಿಲ್ಲ. ಹೊಸ ವರ್ಷದಂದು ಗಂಟೆಗಳು ಮೊಳಗುತ್ತಿರುವಾಗ ತನ್ನ ತಲೆ ಸುತ್ತುವಿಕೆ ಹೊರಟುಹೋಗಲೆಂದು ವಿಶೇಷ ಪ್ರಾರ್ಥನೆ ಸಲ್ಲಿಸಿದಳು. ಸಂತಸದಿಂದ ದೇವಾಲಯಕ್ಕೆ ಬಂದ ಜನಗಳೊಂದಿಗೆ ಬೆರೆತಳು. ದಿನದ ಅಂತ್ಯದಲ್ಲಿ ತನ್ನ ಸೋದರನೊಂದಿಗೆ ಸ್ಪರ್ಧಿಸಿ ಸುಲಭವಾಗಿ ಗೆದ್ದಳು. ಒಳ್ಳೆಯ ಪ್ರಾರಂಭ ಕೆಡಕೇನನ್ನೂ ಮಾಡುವುದಿಲ್ಲ ಎಂಬ ನಂಬಿಕೆ.

ಅನೇಕ ವಾರಗಳವರೆಗೂ ಅವಳ ಪ್ರಾರ್ಥನೆ ಹಾಗೂ ಅದೃಷ್ಟದಿಂದ ಅವಳು ಆರೋಗ್ಯವಾಗಿರುವಂತೆನಿಸುತ್ತಿತ್ತು. ವೇಗವಾಗಿ ಓಡಲೂ ಸಾಧ್ಯವಿತ್ತು. ಒಮ್ಮೆ ಅಭ್ಯಾಸದ ಸಮಯದಲ್ಲಿ ಕೆಳಗೆ ಬಿದ್ದವಳಿಗೆ ಮೇಲೇಳಲಾಗಲಿಲ್ಲ. ಅವಳ ತಂದೆ ಅವಳನ್ನು ರೆಡ್‌ಕ್ರಾಸ್ ಆಸ್ಪತ್ರೆಗೊಯ್ದು ಎಕ್ಸ್-ರೇ ತೆಗೆಸಿದ. ವೈದ್ಯರ ಗುಂಪೊಂದು ಅವಳನ್ನು ಪರೀಕ್ಷಿಸಿತು. ತನ್ನ ತಂದೆ ತಾಯಿಗಳೊಂದಿಗೆ ಮಾತಾಡುವಾಗ ಅವಳ ತಾಯಿಯ ಸ್ವರ 'ಲ್ಯುಕೇಮಿಯಾ' ಎಂದುದವಳಿಗೆ ಕೇಳಿಸಿತು. ಕಿವಿಗಳ ಮೇಲೆ ಕೈ ಇಟ್ಟು, ''ಇದು ಸಾಧ್ಯವೇ ಇಲ್ಲ!'' ಎಂದವಳು ಯೋಚಿಸಿದಳು.

ನರ್ಸ್ ಆಸ್ಪತ್ರೆಯ ಕೊಠಡಿಯೊಂದಕ್ಕೆ ಅವಳನ್ನು ಕರೆದೊಯ್ದು ಕಿಮೊನೊ ಒಂದನ್ನು ತೊಡಿಸಿ ಹಾಸಿಗೆಯಲ್ಲಿ ಮಲಗಿಸಿದಳು. ತಂದೆ ಅವಳನ್ನು ತೋಳಲ್ಲಿ ಬಳಸಿ, ಅವಳು ಅಲ್ಲಿಯೇ ಇರಬೇಕಾಗುತ್ತದೆಂದೂ, ಎಲ್ಲರೂ ಪ್ರತಿದಿನ ಅವಳನ್ನು ನೋಡಲು ಬರುತ್ತೇವೆಂದೂ ಹೇಳಿದ. ಆಟಂಬಾಂಬ್ ಖಾಯಿಲೆ ತನಗೂ ಬಂದಿದೆಯೇ ಎಂದು ತಿಳಿಯಬೇಕಿತ್ತವಳು. ''ಕೆಲವು ವಾರ ಒಂದಿಷ್ಟು ಪರೀಕ್ಷೆಗಳನ್ನು ಮಾಡಬೇಕೆಂದಿದ್ದಾರೆ, ಅಷ್ಟೆ'' ಎಂದ ತಂದೆ.

ಕೆಲವು ವಾರಗಳು ಅಂದರೆ ಪರೀಕ್ಷೆ ತಪ್ಪುತ್ತದೆ. ತೀರಾ ಖೇದಕರವೆಂದರೆ ಪಂದ್ಯವು ತಪ್ಪುವುದಲ್ಲಾ ಎಂದುಕೊಂಡು ಅಳದಿರಲು ಯತ್ನಿಸಿದಳು ಸಡಾಕೊ. ಆದರೆ ಎಲ್ಲರೂ ಹೋದನಂತರ, ಎಂದೂ ಕಾಡದ ಒಂಟಿತನ ಹಾಗೂ ದುಃಖದಿಂದ ದಿಂಬಿನಲ್ಲಿ ಮುಖ ಹುದುಗಿಸಿ ಅತ್ತಳು. ಮರುದಿನ ಮನೆಯ ಪರಿಚಿತ ಸ್ವರಗಳಿಗಾಗಿ ತವಕಿಸಿದಳು. ಬದಲಿಗೆ ಸೂಜಿ ಹಿಡಿದ ನರ್ಸ್‌ನ ದರ್ಶನ. ಬೇಗನೆ ಮನೆಗೆ ಹಿಂತಿರುಗುವ ಕಾತರ.

ಮೊದಲು ಭೇಟಿಗಾಗಿ ಬಂದವಳು ಜಿಜುಕೊ. ಕಣ್ಣುಮುಚ್ಚುವಂತೆ ಹೇಳಿ, ಬಂಗಾರದ ಬಣ್ಣದ ಕಾಗದದಲ್ಲಿ ಮಾಡಿದ ಕೊಕ್ಕರೆ ಯೊಂದನ್ನು ಅವಳ ಕೈಗಿಟ್ಟಳು. ಆರೋಗ್ಯವಿಲ್ಲದ ವ್ಯಕ್ತಿ ಇಂಥ ಸಾವಿರ ಕೊಕ್ಕರೆಗಳನ್ನು ಮಾಡಿದರೆ, ದೇವರು ಪ್ರಾರ್ಥನೆ ಕೇಳಿ, ಅವಳನ್ನು ಪುನಃ ಆರೋಗ್ಯವಂತಳನ್ನಾಗಿ ಮಾಡುತ್ತಾನೆಂದಳು. ''ಇದು ಮೊದಲ ಕೊಕ್ಕರೆ'' ಎಂದಳು. ಸಡಾಕೊ ಕೊಕ್ಕರೆ ತೆಗೆದು ಕೊಂಡು ಮನದಲ್ಲೇ ಪ್ರಾರ್ಥಿಸಿದಳು. ಆದರ ಸ್ಪರ್ಶ ಅವಳಿಗೆ ವಿಚಿತ್ರ ಅನುಭವ ತಂದಿತು. ಅದೊಂದು ಶುಭ ಶಕುನವೆನಿಸಿತು.

ಜಿಜುಕೊಳ ಸಹಾಯದಿಂದ ಸಡಾಕೊ ೧೦ ಕೊಕ್ಕರೆಗಳನ್ನು ತಯಾರಿಸಿದಳು. ಮೇಜಿನ ಮೇಲೆ ಬಂಗಾರದ ಕೊಕ್ಕರೆಯ ಪಕ್ಕ ಸಾಲಾಗಿ ಜೋಡಿಸಿದಳು. ಮುಂದಿನ ವಾರ ಉಳಿದ ೯೯೦ ಕೊಕ್ಕರೆಗಳನ್ನು ಮಾಡಿ ಮುಗಿಸುವ ವೇಳೆಗೆ ತನಗೆ ಮನೆಗೆ ಹೋಗುವಷ್ಟು ಶಕ್ತಿ ಬಂದಿರುತ್ತದೆಂದುಕೊಂಡಳು.

ಆ ಸಂಜೆ ಶಾಲೆಯಿಂದ ಬಂದ ಅವಳ ತಮ್ಮ ಎಲ್ಲ ಕೊಕ್ಕರೆಗಳನ್ನೂ ತೂಗುಹಾಕಿದ. ಮನೆಯವರು ಆ ಕೊಕ್ಕರೆಗಳನ್ನು ಕಂಡು ಅಚ್ಚರಿಗೊಂಡರು. ಕೊಕ್ಕರೆ ಮಾಡುವುದನ್ನು ಮುಂದುವರಿಸಿದ ಸಡಾಕೊ ಒಂದೊಂದು ಕೊಕ್ಕರೆಯ ಜೊತೆಗೂ ಉತ್ತಮ ಆರೋಗ್ಯಕ್ಕಾಗಿ ಹಾರೈಸಿದಳು.

ಪ್ರತಿಯೊಬ್ಬರೂ ಸಡಾಕೊಳ ಅದೃಷ್ಟದ ಕೊಕ್ಕರೆಗಳಿಗಾಗಿ ಕಾಗದದ ಉಳಿತಾಯ ಮಾಡುತ್ತಿದ್ದರು. ಸ್ವಲ್ಪ ಉತ್ತಮವೆನಿಸಿದರೂ, ಅವಳಿನ್ನೂ ಕೆಲಕಾಲ ಆಸ್ಪತ್ರೆಯಲ್ಲೇ ಇರಬೇಕೆಂದರು ವೈದ್ಯರು. ಈ ವೇಳೆಗೆ ತನಗೆ ಲ್ಯುಕೇಮಿಯಾ ಇರುವುದು ಅವಳಿಗೆ ತಿಳಿದಿದ್ದರೂ ಅನೇಕರು ಗುಣ ಹೊಂದಿದ್ದಾರೆಂದೂ, ತಾನೂ ಗುಣ ಹೊಂದಬಹುದೆನ್ನುವ ನಂಬಿಕೆ ಸಡಾಕೊಗೆ.

ಪ್ರತಿ ಸಂಜೆ ಶ್ರದ್ಧೆಯಿಂದ ಕೊಕ್ಕರೆ ಮಾಡುವಳು. ಆರೋಗ್ಯ ಉತ್ತಮವಾಗಿದೆ ಎನಿಸಿದ ದಿನ ಹೋಂವರ್ಕ್ ಕೂಡ. ಆದರೆ ಕ್ರಮೇಣ ಆಟಂಬಾಂಬ್ ಖಾಯಿಲೆ ಅವಳ ಶಕ್ತಿಯನ್ನು ಉಡುಗಿಸಿತು. ನೋವಿನ ಅನುಭವ ಅವಳಿಗಾಗುತ್ತಿತ್ತು. ಸಿಡಿವ ತಲೆನೋವು ಓದು ಬರಹಕ್ಕೆ ತಡೆಹಾಕಿತು. ಒಮ್ಮೊಮ್ಮೆ ಮೂಳೆಯೆಲ್ಲಾ ಬೆಂಕಿಯ ಮೇಲಿದೆಯೇನೋ ಎಂಬ ಅನುಭವ. ಅರಿವು ತಪ್ಪಿ ಸಂಪೂರ್ಣ ಕತ್ತಲಲ್ಲಿರುವಂತೆನಿಸುತ್ತಿತ್ತು. ನಿಶ್ಶಕ್ತಿಯಿಂದಾಗಿ ಕೊಕ್ಕರೆಗಳನ್ನು ತೊಡೆಯಲ್ಲಿಟ್ಟು ಕಿಟಕಿಯ ಪಕ್ಕ ಕೂಡಲು ಮಾತ್ರ ಸಾಧ್ಯವಾಗುತ್ತಿತ್ತು.

ಒಮ್ಮೆ ನರ್ಸ್ ಸಡಾಕೊಳನ್ನು ಗಾಲಿ ಕುರ್ಚಿಯಲ್ಲಿ ತಂದು ಬಿಸಿಲಿಗೆ ಕೂಡಿಸಿದಳು. ಅಲ್ಲಿ ೯ ವರ್ಷದ ಕೆಂಜಿಯ ಭೇಟಿಯಾಯ್ತು. ಅವನು ವಯಸ್ಸಿಗಿಂತ ತುಂಬಾ ಚಿಕ್ಕವನಂತೆ ತೋರುತ್ತಿದ್ದ. ತಂದೆ ತಾಯಿ ಇಬ್ಬರೂ ಸತ್ತಿದ್ದರಿಂದ, ಅವನನ್ನು ನೋಡಲು ಬರುವವರು ಯಾರೂ ಇರಲಿಲ್ಲ. ದೂರದಲ್ಲಿ ವಾಸಿಸುತ್ತಿದ್ದ ಚಿಕ್ಕಮ್ಮ ವಾರಕ್ಕೊಮ್ಮೆ ನೋಡಲು ಬರುವಳು. ''ನನ್ನನ್ನು ನೋಡಲು ಯಾರೂ ಬರದಿದ್ದರೂ ಚಿಂತೆಯಿಲ್ಲ. ಕಾರಣ, ನಾನು ಬೇಗ ಸಾಯುತ್ತೇನೆ. ಬಾಂಬ್‌ನಿಂದ ನನಗೆ ಲ್ಯುಕೇಮಿಯಾ ತಗುಲಿದೆ. ಈ ವಿಷ ಅಮ್ಮನ ಶರೀರದಲ್ಲಿದ್ದು, ಅವಳಿಂದ ನನಗೂ ಬಂತು'' ಎಂದ. ಅವನೂ ಕೊಕ್ಕರೆಗಳನ್ನು ಮಾಡುವಂತೆ ಒತ್ತಾಯಿಸಿದಳು ಸಡಾಕೊ. ''ದೇವರು ಕೂಡ ನನಗೆ ಸಹಾಯ ಮಾಡುವ ಸ್ಥಿತಿಯಲ್ಲಿಲ್ಲ. ನನ್ನ ಬ್ಲಡ್‌ಕೌಂಟ್‌ನ ಚಾರ್ಟು ನಾನು ನೋಡಿದ್ದೇನೆ'' ಎಂದ.

ಅತಿ ಸುಂದರವಾದ ಕಾಗದದಿಂದ ಸಡಾಕೊ ಅವನಿಗಾಗಿ ದೊಡ್ಡ ಕೊಕ್ಕರೆಯೊಂದನ್ನು ಮಾಡಿ, ಅದು ಅವನಿಗೆ ಅದೃಷ್ಟ ತರಬಹುದೆಂದು ಕೆಂಜಿಗೆ ಕಳಿಸಿಕೊಟ್ಟಳು. ತನ್ನ ಕೊಕ್ಕರೆಗಳ ಸಂಖ್ಯೆ ೩೯೮, ೩೯೯...

ಒಂದು ದಿನ ಅವಳೊಂದಿಗೆ ಬಿಸಿಲಿನಲ್ಲಿ ಕೂಡಲು ಕೆಂಜಿ ಬರಲಿಲ್ಲ. ನರ್ಸ್‌ನಿಂದ ಕೆಂಜಿ ಸತ್ತದ್ದು ತಿಳಿಯಿತು. ತುಂಬಾ ಅತ್ತಳು ಸಡಾಕೊ. ಕೆಂಜಿ ನಕ್ಷತ್ರಲೋಕಕ್ಕೆ ಹೋಗಿ ತನ್ನತ್ತ ನೋಡುತ್ತಿರಬಹುದೆನ್ನುವ ಎಣಿಕೆ ಅವಳದು. ಅವನೆಲ್ಲೇ ಇರಲಿ, ಅವನ ಆತ್ಮ ಸ್ವತಂತ್ರವಾಗಿದೆ, ಎಂದುಕೊಂಡಳು.

''ಈಗ ಸಾಯುವ ಸರದಿ ನನ್ನದಲ್ವೇ'' ಎಂದ ಸಡಾಕೊಳಿಗೆ ''ಇಲ್ಲ'' ಎಂದು ನರ್ಸ್ ಒತ್ತಿ ಹೇಳಿದಳು. ಕಾಗದವನ್ನು ಅವಳ ಮುಂದಿಡುತ್ತ, ''ನೀನು ಸಾವಿರ ಕೊಕ್ಕರೆಗಳನ್ನು ಮಾಡಿ ಮುದುಕಿಯಾಗುವವರೆಗೂ ಇಲ್ಲೇ ಇರುತ್ತೀಯಾ'' ಎಂದಳು. ಕಷ್ಟವೆನಿಸಿದರೂ ಅದನ್ನು ನಂಬಲೆತ್ನಿಸುತ್ತ ಮತ್ತೆ ಕಾಗದ ಮಡಚತೊಡಗಿದಳು. ೪೬೩, ೪೬೪...

ಒಂದು ದಿನ ಅವಳಮ್ಮ ಅವಳಿಗಿಷ್ಟವಾದ ತಿನಿಸನ್ನೆಲ್ಲಾ ತಂದಳು. ಎಗ್‌ರೋಲ್, ಅನ್ನ, ಚಿಕನ್, ಉಪ್ಪಿನಕಾಯಿ, ಕೇಕ್... ಎಲ್ಲಾ. ಆದರೆ ಊದಿದ ಅವಳ ಒಸಡು ಏನೂ ತಿನ್ನಲಾಗದಷ್ಟು ನೋಯುತ್ತಿತ್ತು. ತನ್ನಮ್ಮನಿಗೆ ದುಃಖ ಕೊಡಬಾರದೆಂದು ಸಾಕಷ್ಟು ಪ್ರಯತ್ನಿಸಿದಳು. ಅಮ್ಮ ಸಮಾಧಾನಪಡಿಸಿದಳು. ಅವಳ ಚಿಕ್ಕ ತಮ್ಮ ಚಾಕೊಲೇಟ್ ಪೇಪರನ್ನು ಕೊಕ್ಕರೆ ಮಾಡಲೆಂದು ತಂದುಕೊಟ್ಟ. ಆ ಕಾಗದ ದೇವರಿಗೂ ಇಷ್ಟವಾಗಬಹುದೆಂದಳು. ಈ ತಮಾಷೆ ಕೇಳಿ ಎಲ್ಲರೂ ನಕ್ಕರು. ಮೊದಲ ಬಾರಿಗೆ ಸಡಾಕೊ ನಕ್ಕಿದ್ದಳು. ಮತ್ತೆ ಕೊಕ್ಕರೆಗಳು ೫೪೧, ೫೪೨...

ಜುಲೈ ಅಂತ್ಯದ ವೇಳೆಗೆ ಅವಳಿಗೆ ಸ್ವಲ್ಪ ಉತ್ತಮವೆನಿಸಿತ್ತು. ಹಸಿವು ಕಂಡು, ನೋವು ಕಡಿಮೆಯಾಗಿತ್ತು. ಮನೆಗೆ ಹೋಗಿಬರಲು ವೈದ್ಯರ ಅನುಮತಿ ದೊರೆತಿತ್ತು. ಹಬ್ಬದ ವೇಳೆಗೆ ಮನೆಗೆ ಬಂದಳು. ಸ್ನೇಹಿತರು ನೆಂಟರು ಸಾಲುಗಟ್ಟಿ ಅವಳ ಭೇಟಿಗೆ ಬಂದರು. ತಾನು ಮತ್ತೆ ಮನೆಗೆ ಬಂದೆನೆಂಬ ಖುಷಿ. ಆದರೆ ವಾರಾಂತ್ಯಕ್ಕೆ ಆಸ್ಪತ್ರೆಗೆ ಮರಳಿದ್ದಾಯ್ತು. ತಂದೆ ತಾಯಿ ದೀರ್ಘಕಾಲದವರೆಗೂ ಅವಳೊಂದಿಗಿರುವರು. ಅರೆ ನಿದ್ರಾವಸ್ಥೆಗೆ ತಲುಪಿದ್ದಳು ಸಡಾಕೊ. ತನಗಿಷ್ಟವಾದ ಬೀನ್ ಕೇಕ್ ಅನ್ನು ದೇವರ ಬಳಿ ಇಡುವಂತೆ ಹೇಳಿದಳು. ''ಅಂಥದೇನೂ ನಡೆಯದು. ನೀನು ಹೆಚ್ಚು ಹೆಚ್ಚು ಕೊಕ್ಕರೆಗಳನ್ನು ಮಾಡು'' ಎಂದ ತಂದೆ.

ಚಿನ್ನದ ಕೊಕ್ಕರೆ ಮುಟ್ಟುತ್ತ, ''ನಾನು ಬೇಗನೆ ಗುಣ ಹೊಂದುವೆ'' ಎಂದಳು. ಪ್ರತಿದಿನವೂ ಅವಳಿಗೆ ಇಂಜೆಕ್ಷನ್ ಕೊಡಬೇಕಿತ್ತು. ರೋಗ ಹಾಗೂ ಭಯದ ವಿರುದ್ಧ ಹೋರಾಡುವಾಗ, ಯಾವುದರ ಬಗೆಗೂ ಅವಳು ದೂರುತ್ತಿರಲಿಲ್ಲ. ಬಂಗಾರದ ಕೊಕ್ಕರೆ ಸಹಾಯ ಮಾಡಿತು. ಭರವಸೆ ಎನ್ನುವುದೊಂದು ಯಾವಾಗಲೂ ಇರುತ್ತದೆ ಎಂದು ಸಡಾಕೊಗೆ ನೆನಪಿಸುತ್ತಿತ್ತು.

ಅಂದವಳ ತಂಗಿ, ಅವಳಿಗಾಗಿ ಸಿಲ್ಕ್ ಕಿಮೊನೊವೊಂದನ್ನು ತಂದಳು. ''ಹಾಕಿಕೊ'' ಎಂದ ತಂದೆ. ಕಷ್ಟದೊಂದಿಗದನ್ನು ಧರಿಸಿ ಕಿಟಕಿಯವರೆಗೂ ನಡೆದಳು. ''ಶಾಲಾ ಸಮವಸ್ತ್ರಕ್ಕಿಂತ ಇದರಲ್ಲಿ ನೀನಿನ್ನೂ ಸುಂದರ ರಾಜಕುಮಾರಿಯಂತೆ ಕಾಣುತ್ತಿ'' ಎಂದಳು ಜಿಜುಕೊ. ಮತ್ತೆ ಶಾಲೆಗೆ ಹೋಗುವಾಗ ಇದನ್ನೇ ಹಾಕಿಕೊಳ್ಳುತ್ತೇನೆಂದು ಹಾಸ್ಯ ಮಾಡಿದಳು ಸಡಾಕೊ. ಅಂತ್ಯಾಕ್ಷರಿ ಆಡಿದರು. ಅವಳ ಪ್ರೀತಿಯ ಹಾಡುಗಳನ್ನು ಹಾಡಿದರು. ಆ ರಾತ್ರಿ ಅವಳಿಗೂ ಒಂದು ಕೊಕ್ಕರೆ ಮಾತ್ರ ಮಾಡಲು ಸಾಧ್ಯವಾಯ್ತು. ೫೪೪... ಅವಳು ಮಾಡಿದ ಕೊನೆಯ ಕೊಕ್ಕರೆ. ನಿಶ್ಶಕ್ತಳಾಗುತ್ತಾ ಹೋದಂತೆ ಸಾವಿನ ಬಗ್ಗೆ ಹೆಚ್ಚು ಯೋಚಿಸುವಳು. ಸಾವು ನೋವು ತರುತ್ತದೆಯೋ ಇಲ್ಲವೇ ನಿದ್ರೆಯಲ್ಲಿ ಮುಳುಗಿದಂತೆನಿಸುತ್ತದೆಯೋ ಎನ್ನುವ ಅಚ್ಚರಿ. ಶಕ್ತಿಗುಂದಿದಂತೆ ಸಮಯದ ಅರಿವಾಗುತ್ತಿರಲಿಲ್ಲ. ಒಮ್ಮೆ ಎಚ್ಚರಗೊಂಡಾಗ ತನ್ನಮ್ಮ ಅಳುತ್ತಿದ್ದುದನ್ನು ಕಂಡಳು. ''ಅಮ್ಮ ದಯವಿಟ್ಟು ಅಳಬೇಡ'' ಎಂದು ಬೇಡಿದಳು. ಇನ್ನು ಏನೇನೋ ಹೇಳಬೇಕೆಂದಿದ್ದರೂ ಬಾಯಿ ಹಾಗೂ ನಾಲಿಗೆಗಳನ್ನಾಡಿಸಲೇ ಆಗುತ್ತಿಲ್ಲ. ಕಣ್ಣೀರು ಕೆನ್ನೆಯ ಮೇಲುರುಳಿತು. ಅಮ್ಮನಿಗೆ ಎಷ್ಟೊಂದು ದುಃಖ ತಂದಿಟ್ಟೆ. ಮತ್ತೊಂದು ಕೊಕ್ಕರೆ ಮಾಡಿ ಪವಾಡಕ್ಕಾಗಿ ಪ್ರಾರ್ಥಿಸಬೇಕೆಂದುಕೊಂಡಳು. ಕಾಗದ ಹಿಡಿದ ಕೈ ನಡುಗಿತು. ಡಾಕ್ಟರ್ ಬಂದು, ಅವಳು ವಿಶ್ರಾಂತಿ ಪಡೆಯಬೇಕೆಂದೂ, ಕೊಕ್ಕರೆಯನ್ನು ನಾಳೆ ಮಾಡಬಹುದೆಂದೂ ಹೇಳಿದರು. ನಾಳೆ – ಬಹಳ ದೂರವಿದೆ ಎನಿಸಿತು ಸಡಾಕೊಗೆ.

ಮುಂದಿನ ಸಲ ಅವಳೆಚ್ಚೆತ್ತಾಗ ಅವಳ ಇಡೀ ಕುಟುಂಬವೇ ಅಲ್ಲಿತ್ತು. ಸಡಾಕೊ ಅವರನ್ನು ನೋಡಿ ನಕ್ಕಳು. ಅವಳು ಆ ಪ್ರೀತಿಯ ವೃತ್ತದ ಒಂದು ಕೊಂಡಿ. ಯಾವುದೂ ಅದನ್ನು ಬದಲಿಸುವಂತಿರಲಿಲ್ಲ. ಸಡಾಕೊ ನಡುಗುತ್ತಿದ್ದ ತನ್ನ ತೆಳುವಾದ ಕೈಗಳನ್ನು ಚಿನ್ನದ ಕೊಕ್ಕರೆಯನ್ನು ಮುಟ್ಟಲು ಚಾಚಿದಳು. ಗೋಡೆಯಿಂದ ಇಳಿಬಿದ್ದ ಗಡಿಯಾರದತ್ತ ನೋಡಿದಳು. ನೋಡುತ್ತಿದ್ದಂತೆ ಸುಳಿಗಾಳಿ ಅದರ ಮೇಲಿದ್ದ ಹಕ್ಕಿಗಳು ತುಯ್ದಾಡುವಂತೆ ಮಾಡಿತು. ಅವು ಜೀವಂತವಾಗಿದ್ದು, ತೆರೆದ ಕಿಟಕಿಯಿಂದ ಹಾರಿ ಹೋಗುತ್ತಿವೆಯೇನೋ ಎನಿಸುತ್ತಿತ್ತು. ಅವೆಷ್ಟು ಸುಂದರ ! ನಿಟ್ಟುಸಿರಿಟ್ಟ ಸಡಾಕೊ ಕಣ್ಣು ಮುಚ್ಚಿದಳು. ಮುಚ್ಚಿದ ಕಣ್ಣು ಮತ್ತೆ ತೆರೆಯಲಿಲ್ಲ.

* * *

ಸಡಾಕೊ ಸಸಾಕಿ ೧೯೫೫ರ ಅಕ್ಟೋಬರ್ ೨೫ರಂದು ಸತ್ತಳು. ಅವಳ ತರಗತಿಯವರು ಉಳಿದ ೪೫೬ ಕೊಕ್ಕರೆಗಳನ್ನು ಮಾಡಿ ಒಟ್ಟು ೧೦೦೦ ಕೊಕ್ಕರೆಗಳನ್ನು ಸಡಾಕೊನೊಂದಿಗೆ ಹುಗಿದರು. ಒಂದು ರೀತಿಯಲ್ಲಿ ಅವಳ ಆಸೆ ನೆರವೇರಿ, ಜನತೆಯ ಮನದಲ್ಲಿ ಬಹುಕಾಲದವರೆಗೂ ನೆಲೆ ನಿಲ್ಲುತ್ತಾಳೆ ಸಡಾಕೊ.

ಅಂತ್ಯಕ್ರಿಯೆಯ ನಂತರ ಅವಳ ಟೀಮಿನವರು ಸಡಾಕೊಳ ಪುಸ್ತಕವನ್ನು ಪ್ರಕಟಪಡಿಸಿದರು. ಪುಸ್ತಕ ಜಪಾನಿನ ಎಲ್ಲೆಡೆ ವಿತರಣೆಯಾಯ್ತು. ಆಟಂಬಾಂಬ್ ದಾಳಿಯಲ್ಲಿ ಸತ್ತ ಎಲ್ಲ ಮಕ್ಕಳ ಹಾಗೂ ಸಡಾಕೊಳ ನೆನಪಿನಲ್ಲಿ ಸ್ಮಾರಕವೊಂದನ್ನು ರಚಿಸುವ ಕನಸು ಕಂಡರು ಅವಳ ಸ್ನೇಹಿತರು. ಮಕ್ಕಳು ಅದಕ್ಕಾಗಿ ದೇಶದುದ್ದಕ್ಕೂ ಹಣ ಸಂಗ್ರಹಿಸಿದರು. ೧೯೫೮ರಲ್ಲಿ ಹಿರೋಷಿಮಾ ಶಾಂತಿವನದಲ್ಲಿ ಅವಳ ಮೂರ್ತಿ ಅನಾವರಣಗೊಂಡಿತು. ಸಡಾಕೊ ಸ್ವರ್ಗದ ಗ್ರಾನೈಟ್ ಶಿಖರದ ಮೇಲೆ ಮುಂಚಾಚಿದ ತನ್ನ ಕೈಯ್ಯಲ್ಲಿ ಬಂಗಾರದ ಕೊಕ್ಕರೆ ಹಿಡಿದು ನಿಂತಂತಿದೆ. ಅವಳ ಗೌರವಾರ್ಥ ಕೊಕ್ಕರೆಯ ಕ್ಲಬ್ ಒಂದನ್ನು ತೆರೆಯಲಾಯ್ತು. ಸದಸ್ಯರು ಇಂದಿಗೂ ಶಾಂತಿ ದಿನವಾದ ಆಗಸ್ಟ್ ೬ರಂದು ಸಡಾಕೊಳ ಮೂರ್ತಿಯ ಕೆಳಗೆ ಸಾವಿರಾರು ಕೊಕ್ಕರೆಗಳನ್ನು ಇಡುತ್ತಾರೆ. ಪ್ರಾರ್ಥನೆ ಸಲ್ಲಿಸುತ್ತಾರೆ. ಪ್ರಾರ್ಥನೆಯನ್ನು ಮೂರ್ತಿಯ ಕೆಳಗೆ ಕೆತ್ತಲಾಗಿದೆ :

ವಿಶ್ವದಲ್ಲಿ ಶಾಂತಿ ಇರಲಿ.
ಇದೇ ನಮ್ಮ ಅರಿಕೆ.
ಇದೇ ನಮ್ಮ ಪ್ರಾರ್ಥನೆ.

ಇದು ೧೨ ವರ್ಷದ ಜಪಾನಿ ಹುಡುಗಿಯ ಮನಕರಗಿಸುವ, ನುಚ್ಚುನೂರಾದ ಕನಸುಗಳ, ನಿಜ ಜೀವನದ ಕಥೆ. ನ್ಯೂಕ್ಲಿಯರ್ ಯುದ್ಧದ ಭಯಾನಕ ಪರಿಣಾಮಗಳನ್ನು ಹೃದಯಸ್ಪರ್ಶಿಯಾಗಿ ಚಿತ್ರಿಸುವ ಈ ಕಥೆಯಲ್ಲಿ ವಿಶ್ವಶಾಂತಿಗಾಗಿ ಕಳಕಳಿಯ ಪ್ರಾರ್ಥನೆ ಇದೆ.

*(ಮೂಲ : ಸಡಾಕೊ ಆ್ಯಂಡ್ ದಿ ತೌಸಂಡ್ ಪೇಪರ್ ಗೇಮ್ಸ್)*

ಕನ್ನಡಕ್ಕೆ : **ಟಿ. ಎಸ್. ಲಲಿತ**
ನಂ. ೭೦೨, ೧ನೇ ಮಹಡಿ, ೧೭ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು - ೫೭೦ ೦೦೯

ನವಕರ್ನಾಟಕ ಪ್ರಕಾಶನ ಸಂಸ್ಥೆಯ ಹಿರಿಯ ಸಂಪಾದಕ, 'ಹೊಸತು' ಪತ್ರಿಕೆಯ ಸಂಪಾದಕ ಸಮಾಲೋಚಕ, ಶ್ರೇಷ್ಠ ಅನುವಾದಕ, ಲೇಖಕ ಕೆ. ಎಲ್. ಗೋಪಾಲಕೃಷ್ಣ ರಾವ್ ಜುಲೈ ೭ರಂದು ೮೨ನೇ ವಯಸ್ಸಿನಲ್ಲಿ (೨೫-೦೭-೧೯೩೦ – ೦೭-೦೭-೨೦೧೨) ಅಮೆರಿಕದಲ್ಲಿ ನಿಧನರಾದರೆಂದು ಪ್ರಕಟಿಸಲು ಅತೀವ ವೇದನೆಯಾಗುತ್ತದೆ. ಮೃತರಿಗೆ ನವಕರ್ನಾಟಕ ಪ್ರಕಾಶನ ಸಂಸ್ಥೆ ಮತ್ತು 'ಹೊಸತು' ಅಂತಿಮ ನಮನ ಸಲ್ಲಿಸುತ್ತವೆ. ಅಕ್ಟೋಬರ್‌ನಲ್ಲಿ ಬೆಂಗಳೂರಿಗೆ ಹಿಂದಿರುಗಿ ಬಂದು ಮತ್ತೆ ಕೆಲಸ ಕಾರ್ಯಗಳಲ್ಲಿ ತೊಡಗಿಕೊಳ್ಳುವುದಾಗಿ ಒಂದು ವಾರದ ಹಿಂದೆಯಷ್ಟೇ ಭರವಸೆ ನೀಡಿದ್ದ ಗೋಪಾಲಕೃಷ್ಣ ನಮ್ಮೊಂದಿಗಿಲ್ಲ ಎಂದು ನಂಬುವುದೇ ಕಷ್ಟ. ನಿಷ್ಠಾವಂತ ಕಮ್ಯುನಿಸ್ಟ್ ಕಾರ್ಯಕರ್ತರಾಗಿದ್ದ ಅವರು ಅಧ್ಯಾಪಕರಾಗಿ, ಅನುವಾದಕರಾಗಿ, ಬರೆಹಗಾರರಾಗಿ ಸೇವೆ ಸಲ್ಲಿಸಿದವರು. ಮೃದುಭಾಷಿ, ಚಿಕ್ಕ ಆಕೃತಿ, ದೃಢಚಿತ್ತತೆಯ ಅವರು ಎಲ್ಲರಿಗೂ ಬೇಕಾದವರಾಗಿದ್ದರು. ಕೈಗೆತ್ತಿಕೊಂಡ ಕೆಲಸವನ್ನು ಪಟ್ಟುಹಿಡಿದು ಮುಗಿಸುವ ಗುಣ ಅವರದು. ಅವರ ನಿಧನದಿಂದ 'ನವಕರ್ನಾಟಕ' ಮತ್ತು 'ಹೊಸತು' ಬಡವಾಗಿದೆ. ಈಗ ಅವರು ನೆನಪಷ್ಟೆ. ಅವರಿಗೆ ಮತ್ತೊಮ್ಮೆ ನಮ್ಮ ನಮನ.



# ಅಗಲಿದ ಆತ್ಮೀಯ ಗೆಳೆಯ ಗೋಪಾಲಕೃಷ್ಣ ರಾವ್

**ಕ**ಳೆದ ತಿಂಗಳಷ್ಟೇ ಹಿರಿಯರಾದ, ನವಕರ್ನಾಟಕ ಪ್ರಕಾಶನ ಸಂಸ್ಥೆಯ ಅಧ್ಯಕ್ಷರಾಗಿದ್ದ ವಿಷ್ಣು ಕಕ್ಕಿಲ್ಲಾಯರನ್ನು ಕಳೆದುಕೊಂಡ ನಾವು ಈಗ ಸಂಸ್ಥೆಯ ಹಿರಿಯ ಸಂಪಾದಕರಾದ ಕೆ. ಎಲ್. ಗೋಪಾಲಕೃಷ್ಣ ರಾವ್ ಇವರನ್ನೂ ಕಳೆದುಕೊಂಡಿದ್ದೇವೆ. ಬಾಲ್ಯದ ಗೆಳೆಯನಾಗಿದ್ದ, ಆರು ದಶಕಗಳಿಗೂ ಹೆಚ್ಚು ಕಾಲದಿಂದ ಜೊತೆಗಿದ್ದ, ಜೊತೆಯಾಗಿ ದುಡಿದ ಆತ್ಮೀಯನ ಬಗ್ಗೆ ಬರೆಯುವುದು ಕಷ್ಟವಾಗುತ್ತಿದೆ ಮನಸ್ಸಿಗೆ. ಶಾಲಾ ದಿನಗಳಿಂದ ಹಿಡಿದು ಕೊನೆಯವರೆಗೂ ಜೊತೆಗಿದ್ದು ಕೆಲಸ ಮಾಡಿದ ನನಗೆ ಏಕವಚನದಲ್ಲಿ ಸಂಭಾಷಿಸುವ ಸನ್ಮಿತ್ರ ಇಲ್ಲದಂತಾಗಿದೆ. ನಮ್ಮಿಬ್ಬರದೂ ಒಂದು ವಿಚಿತ್ರ ಜೋಡಿ, ಅವನದು ಮೃದು ಸ್ವಭಾವ, ನಾನು ಸ್ವಲ್ಪ ಅಗ್ರೆಸಿವ್. ಇಬ್ಬರೂ ಒಂದೇ ಸಿದ್ಧಾಂತಕ್ಕೆ ಬದ್ಧರಾಗಿ, ಒಟ್ಟಾಗಿ ಕಷ್ಟ ಸುಖಗಳನ್ನೂ ಹಂಚಿಕೊಂಡಿದ್ದೇವೆ, ಕನಸುಗಳನ್ನೂ ಕಂಡಿದ್ದೇವೆ, ಸಫಲತೆ ಕಂಡಿದ್ದೇವೆ.

ಗೋಪಾಲಕೃಷ್ಣ, ನಾನು ಬೆಂಗಳೂರಿನ ಒಂದೇ ಬಡಾವಣೆ ಚಾಮರಾಜಪೇಟೆಯಿಂದ ಬಂದವರು. ಕೋಟೆ ಸರಕಾರಿ ಹೈಸ್ಕೂಲಿನಿಂದ ನ್ಯಾಷನಲ್ ಕಾಲೇಜಿನಲ್ಲೆ ಇಂಟರ್‌ಮೀಡಿಯೆಟ್ (ಕಾಲೇಜು ಪ್ರಾರಂಭವಾದ ಮೇಲೆ ಎರಡನೇ ಬ್ಯಾಚಿನವರು ನಾವು)ವರೆಗೆ ಒಟ್ಟಾಗಿ ಓದಿದವರು. ಅವನು ಒಳ್ಳೆಯ ವಿದ್ಯಾರ್ಥಿ. ನಾನು ಸ್ವಲ್ಪ ಹಿಂದೆ. ಇಬ್ಬರೂ ಇಂಟರ್ ಓದುತ್ತಿರುವಾಗಲೆ ಕಮ್ಯುನಿಸ್ಟ್ ಪಾರ್ಟಿಯ ಸಂಪರ್ಕಕ್ಕೆ ಬಂದೆವು. ಆಗಷ್ಟೇ ದೇಶಕ್ಕೆ ಸ್ವಾತಂತ್ರ್ಯ ಬಂದಾಗಿತ್ತು. ವಿದ್ಯಾರ್ಥಿ ಫೆಡರೇಶನ್ನಿನ ಕಾರ್ಯಕರ್ತರಾಗಿ, ಭೂಗತರಾಗಿದ್ದ ಕಮ್ಯುನಿಸ್ಟ್ ನಾಯಕರುಗಳಿಗೆ ಕೊರಿಯರ್‌ಗಳಾಗಿ ಕೆಲಸ ಪ್ರಾರಂಭಿಸಿದ ನಾವು (೧೯೪೮) ಪಾರ್ಟಿಯ ಪೂರ್ಣಕಾಲದ ಕಾರ್ಯಕರ್ತರಾಗಿದ್ದೆವು. ಭೂಗತನಾಗಿದ್ದು ಕೆಲಕಾಲ ಕೆಲಸ ಮಾಡಿದ ಗೋಪಾಲಕೃಷ್ಣ ನನ್ನೊಡನೆ ೧೯೪೯ರಲ್ಲಿ ಒಂದು ತಿಂಗಳು ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿದ್ದ. ಮನೆಯವರಿಂದ, ಬಂಧು-ಬಾಂಧವರಿಂದ ಎಷ್ಟೇ ವಿರೋಧವಿದ್ದರೂ ಎದುರಿಸಿ ಪಾರ್ಟಿಗೆ ಕೆಲಸ ಮಾಡಿದವರು ನಾವು. ಇಂಟರ್ ಮುಗಿಸಿದ ಗೋಪಾಲಕೃಷ್ಣ ಮೊದಲು ಸೇರಿದ್ದು ಬೆಂಗಳೂರಿನ ಬಿ.ಎಂ.ಎಸ್. ಇಂಜಿನಿಯರಿಂಗ್ ಕಾಲೇಜಿಗೆ. ಒಂದು ವರ್ಷ ಇಂಜಿನಿಯರಿಂಗ್ ಓದಿದ ನಂತರ ಅದನ್ನು ಬಿಟ್ಟು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಇಂಗ್ಲಿಷ್ ಬಿ.ಎ.


ಗೋಪಾಲಕೃಷ್ಣರಾವ್, ಸಿ. ಆರ್. ಕೃಷ್ಣರಾವ್

ಆನರ್ಸ್ ಮುಗಿಸಿದ. ಸಾಹಿತ್ಯಾಸಕ್ತಿ ಒಂದು ಕಾರಣವಾದರೆ ಮನೆಯಿಂದ ದೂರವಾಗಿರಬೇಕೆಂಬ ಅಪೇಕ್ಷೆ ಇನ್ನೊಂದು, ಇಂಜಿನಿಯರಿಂಗ್ ಕಾಲೇಜು ಬಿಡಲು. ಸಂಪ್ರದಾಯಸ್ಥ ಮಧ್ಯಮ ವರ್ಗದ ಕುಟುಂಬದಲ್ಲಿ ಆಗಿನ ದಿನಗಳಲ್ಲಿ ಕಮ್ಯುನಿಸ್ಟ್ ಕಾರ್ಯಕರ್ತನಾಗಿರುವುದು ಸುಲಭವಾಗಿರಲಿಲ್ಲ. ಗೋಪಾಲಕೃಷ್ಣನ ತಂದೆ ಚಾಮರಾಜಪೇಟೆ ಎರಡನೇ ರಸ್ತೆಯಲ್ಲಿ ಟೈಪ್‌ರೈಟಿಂಗ್ ಇನ್‌ಸ್ಟಿಟ್ಯೂಟ್ ಒಂದನ್ನು ನಡೆಸುತ್ತಿದ್ದರು. ಒಂದು ರೀತಿಯಲ್ಲಿ ಇನ್‌ಸ್ಟಿಟ್ಯೂಟ್ ಪಾರ್ಟಿ ಚಟುವಟಿಕೆಗಳಿಗೆ ಕೇಂದ್ರವಾಗಿತ್ತು. ಏಕೆಂದರೆ ಆಗ ಪಾರ್ಟಿ ಆಫೀಸು ಇರಲಿಲ್ಲ. ನಾನೂ ಅವನು ಅಲ್ಲೇ ವಾಸಿಸುತ್ತಿದ್ದೆವು. ಊಟಕ್ಕೆ ಮನೆಗೆ ಹೋಗುತ್ತಿದ್ದೆವು. ಗೋಪಾಲಕೃಷ್ಣ ಮೈಸೂರಿಗೆ ಹೋದಮೇಲೆ ಒಂಟಿಯಾದ ನಾನು ಪಾರ್ಟಿ ಕೆಲಸದಲ್ಲಿ ತೊಡಗಿಕೊಂಡೆ. ಮೈಸೂರಿನಲ್ಲಿ ಗೋಪಾಲಕೃಷ್ಣನಿಗೆ ಕೆ. ವಿ. ಸುಬ್ಬಣ್ಣ, ಯು. ಆರ್. ಅನಂತಮೂರ್ತಿ ಮೊದಲಾದವರ ಒಡನಾಟವಿತ್ತು. ಕಲಾವಿದ ಆರ್. ಎಸ್. ನಾಯಿಡು, ಲೇಖಕ ನಿರಂಜನ ಅವರೊಂದಿಗೆ ನಿಕಟವಾದ ಸಂಪರ್ಕವಿತ್ತು. ಮನೆಯವರ ಬೆಂಬಲವಿಲ್ಲದೆ, ಸಂಪಾದನೆಯಿಲ್ಲದೆ ಕೂಡಿಟ್ಟ ಸ್ವಲ್ಪ ಹಣದಿಂದ ಮೂರು ವರ್ಷ ಹೇಗೆ ನಿಭಾಯಿಸಿದ ಎನ್ನುವುದು ಅಚ್ಚರಿಯ ಸಂಗತಿ. ಗೋಪಾಲಕೃಷ್ಣ ತುಂಬ ಸಂಕೋಚ ಪ್ರವೃತ್ತಿಯ ವ್ಯಕ್ತಿ. ಯಾರೊಂದಿಗೂ ತನ್ನ ಸುಖ-ದುಃಖ ಹೇಳಿಕೊಳ್ಳುತ್ತಿರಲಿಲ್ಲ. ಉಪವಾಸ, ವನವಾಸ ತನ್ನ ಪಾಲಿಗೆ ಬಂದದ್ದು ಎಂದು ತಿಳಿದುಕೊಂಡಿದ್ದ. ಮೈಸೂರಿನ ಒಂಟಿಕೊಪ್ಪಲಿನಲ್ಲಿ ಒಂದು ಕೋಣೆಯಲ್ಲಿದ್ದ. ಅಂತೂ ಗೆಳೆಯರ ನೆರವಿನಿಂದ ಹೇಗೂ ಬಿ.ಎ. ಆನರ್ಸ್ ಮುಗಿಸಿದ. ಚಾಮರಾಜನಗರದಲ್ಲಿ ಹೊಸದಾಗಿ ಸ್ಥಾಪನೆ ಯಾಗಿದ್ದ ಕಾಲೇಜಿನಲ್ಲಿ ಇಂಗ್ಲಿಷ್ ಉಪನ್ಯಾಸಕನಾಗಿ ನೇಮಕಗೊಂಡ. ತಿಂಗಳಿಗೆ ೧೨೦ ರೂ. ವೇತನ. ಈ ಕಾಲೇಜಿನಲ್ಲಿ ಲೈಬ್ರೇರಿಯನ್, ಟೈಪಿಸ್ಟ್ ಎಲ್ಲ ಅವನೇ. ಅವನು ಅಲ್ಲಿದ್ದಾಗ ನಾನು ಎರಡು ದಿನ ಜೊತೆಗೆ ಇದ್ದೆ. ಅವನು ಬೆಳಗ್ಗೆಯಿಂದ ಸಂಜೆವರೆಗೆ ದುಡಿಯುತ್ತಿದ್ದುದು ಕಂಡು ಬೇಸರವಾಯಿತು. ಅವನ ಒಳ್ಳೆತನವನ್ನು ಎಕ್ಸ್‌ಪ್ಲಾಯಿಟ್ ಮಾಡಿದವರೇ, ಅವನ ಸರಳತೆಗೆ ಮೋಸ ಮಾಡಿದವರೇ ಹೆಚ್ಚು ಎನ್ನಬಹುದು. ಯಾವುದನ್ನೂ ಹೇಳಿಕೊಳ್ಳುತ್ತಿರಲಿಲ್ಲ, ಅಷ್ಟೆ. ಒಂದು ವರ್ಷ ಕೆಲಸ ಮಾಡಿದ ಎಂದು ತೋರುತ್ತದೆ (೧೯೫೪). ಆನಂತರ ಆಗತಾನೆ ಪ್ರಾರಂಭವಾಗಿದ್ದ 'ಸೋವಿಯೆತ್ ದೇಶ' ಪತ್ರಿಕೆಯಲ್ಲಿ ಸೇರಿದ. ಮಹಾರಾಜಾ ಕಾಲೇಜಿನಲ್ಲಿದ್ದಾಗ ಡಾ॥ ಶಿವರುದ್ರಪ್ಪ, ಪ್ರೊ॥ ಎಸ್. ವಿ. ರಂಗಣ್ಣ, ಹಾ. ಮಾ. ನಾಯಕರೊಂದಿಗೆ ಅವರಿಗೆ ಸಂಪರ್ಕ ಇತ್ತು.

ದೆಹಲಿಯಿಂದ ಸೋವಿಯೆತ್ ದೂತಾವಾಸದಿಂದ ಭಾರತದ ಎಲ್ಲ ಭಾಷೆಗಳಲ್ಲೂ 'ಸೋವಿಯೆತ್ ದೇಶ' ಪ್ರಕಟವಾಗುತ್ತಿತ್ತು. ಅನುವಾದಕನಾಗಿ ಕೆಲಸ. ಅದು ಕೊನೆಯವರೆಗೂ ಅವನಿಗೆ ಅಂಟಿಕೊಂಡಿತ್ತು. ಅಷ್ಟೇನೂ ಹಿತವಲ್ಲದಿದ್ದರೂ ಆ ಸಂಸ್ಥೆಯಲ್ಲಿ ಹದಿನೈದು ವರ್ಷ ಕೆಲಸ ಮಾಡಿದ. ದೆಹಲಿಯಲ್ಲಿದ್ದಾಗ ಅವನಿಗೆ ಶಾ. ಬಾಲೂರಾವ್ ರೊಂದಿಗೆ ಒಡನಾಟ ಇತ್ತು. ದೆಹಲಿಗೆ ಹೋದಾಗಲೆಲ್ಲ ಅವನ ಕೋಣೆಯಲ್ಲೆ ತಂಗುತ್ತಿದ್ದೆ. ಕೆಲ ವರ್ಷಗಳ ನಂತರ 'ಸೋವಿಯೆತ್ ದೇಶ' ಆಗಿನ ಮದರಾಸಿನಲ್ಲಿ ಪ್ರಕಟಣೆ ಪ್ರಾರಂಭಿಸಿತು (೧೯೬೦). ಈ ಸಮಯದಲ್ಲಿಯೇ ಜನಶಕ್ತಿ ಪ್ರಕಾಶನಕ್ಕಾಗಿ ನಿಕೊಲಾಯಿ ಆಸ್ಟ್ರೋವ್‌ಸ್ಕಿಯ ಕಾದಂಬರಿಯೊಂದನ್ನು ಅನುವಾದಿಸಿ ಕೊಟ್ಟ. 'ಅಗ್ನಿದೀಕ್ಷೆ' ಎಂದು ಹೆಸರೆಂದು ನೆನಪು. 'ಸೋವಿಯೆತ್ ದೇಶ' ಮದರಾಸಿಗೆ ಬಂದಮೇಲೆ ವಿಮಲಾ ಅವರನ್ನು ವಿವಾಹವಾಗಿ ಸಂಸಾರ ಹೂಡಿದ. ಅನ್ಯೋನ್ಯ ದಾಂಪತ್ಯ ಅವರದು. ಎರಡು ಗಂಡು, ಒಂದು ಹೆಣ್ಣು. ಎಲ್ಲರೂ ಓದಿದ್ದು ಸೋವಿಯೆತ್ ಒಕ್ಕೂಟದ ರಾಜಧಾನಿ ಮಾಸ್ಕೋದಲ್ಲಿ, ನೆಲೆ ಕಂಡದ್ದು ಅಮೆರಿಕದಲ್ಲಿ. ೧೯೬೬ರಲ್ಲಿ ನಾನು 'ಸೋವಿಯೆತ್ ದೇಶ' ಸೇರಿದೆ ಗೋಪಾಲಕೃಷ್ಣನ ಜಾಗದಲ್ಲಿ. ಅವನು ವಾರ್ತಾ ವಿಭಾಗದಲ್ಲಿ ಕೆಲಸ ಮಾಡತೊಡಗಿದ. ಇಬ್ಬರೂ ಒಟ್ಟಿಗೆ ಅಲ್ಲಿ ಕೆಲಸ ಮಾಡುತ್ತ ಓಡಾಡಿಕೊಂಡಿದ್ದೆವು. ನಾಲ್ಕೈದು ವರ್ಷಗಳ ನಂತರ ಅವನು ಮಾಸ್ಕೋದಲ್ಲಿ, ಕನ್ನಡ ವಿಭಾಗದಲ್ಲಿ ಕೆಲಸ ಮಾಡಲು ಆಯ್ಕೆಗೊಂಡ. ಭಾರತೀಯ ಭಾಷೆಗಳಲ್ಲಿ ಅಲ್ಲಿ ಪುಸ್ತಕಗಳ ಪ್ರಕಟಣೆ ಪ್ರಾರಂಭಿಸಲಾಗಿತ್ತು. ಪ್ರೋಗ್ರೆಸ್ ಪಬ್ಲಿಷರ್ಸ್, ಕನ್ನಡದಲ್ಲಿ ಪ್ರಗತಿ ಪ್ರಕಾಶನ. ಇದರ ಜೊತೆಗೆ ರಾದುಗ ಮತ್ತು ಮಿರ್ ಎಂಬ ಪ್ರಕಾಶನ ಸಂಸ್ಥೆಗಳೂ ಇದ್ದುವು. ಗೋಪಾಲಕೃಷ್ಣ ಮೂಲತಃ ಪ್ರಗತಿ ಪ್ರಕಾಶನದಲ್ಲಿದ್ದರೂ ರಾದುಗ ಮತ್ತು ಮಿರ್ ಪ್ರಕಾಶನಕ್ಕೂ ಪುಸ್ತಕಗಳನ್ನು ಅನುವಾದಿಸಿ ಕೊಡುತ್ತಿದ್ದ. ಮಾಸ್ಕೋದ ಕೊರೆಯುವ ಛಳಿ, ಆಗಿನ ವ್ಯವಸ್ಥೆಯಲ್ಲಿದ್ದ ಲೋಪಗಳು ಎಲ್ಲವನ್ನೂ ಅನುಭವಿಸಿ ಹದಿನೇಳು ವರ್ಷಗಳಷ್ಟು ದೀರ್ಘಕಾಲ ಸೇವೆ ಸಲ್ಲಿಸಿದ. ಅಕ್ಕಿ, ಬೇಳೆ, ಹುಣಸೇಹಣ್ಣು, ಕೊಬ್ಬರಿ ಮೊದಲಾದ ಪದಾರ್ಥಗಳೆಲ್ಲ ಅಲ್ಲಿ ಸುಲಭವಾಗಿ ಲಭ್ಯವಿರಲಿಲ್ಲ. ಯಾವಾಗಲಾದರೊಮ್ಮೆ ಭಾರತದ ರಾಯಭಾರಿ ಕಚೇರಿಯ ಸ್ಟೋರ್ಸ್‌ನಲ್ಲಿ ದೊರೆಯುತ್ತಿತ್ತು. ಎಲ್ಲ ಬೆಂಗಳೂರಿ ನಿಂದಲೇ ಹೋಗಿಬರುವವರಿಂದ ತರಿಸಿಕೊಳ್ಳಬೇಕಾಗಿತ್ತು. ಮಾಸ್ಕೋಗೆ ಭೇಟಿ ನೀಡುತ್ತಿದ್ದ ಕನ್ನಡಿಗರೆಲ್ಲ ಅವರ ಆತಿಥ್ಯ ಸವಿದಿದ್ದಾರೆ ನಾನೂ ಸೇರಿ. ಅದನ್ನು ಇಲ್ಲಿ ಪಟ್ಟಿ ಮಾಡಲು ಹೋಗುವುದಿಲ್ಲ. ಕನ್ನಡಿಗರಾರೂ ಇಲ್ಲದ ಆ ನಗರದಲ್ಲಿ ನಿಘಂಟುಗಳ ನೆರವಿನಿಂದಷ್ಟೆ ಅವರು ಎಲ್ಲ ಬಗೆಯ ಗ್ರಂಥಗಳನ್ನೂ, ಅಂದರೆ ಕಾದಂಬರಿ, ಸಣ್ಣಕತೆ, ಸಿದ್ಧಾಂತ, ರಾಜಕೀಯ, ವಿಜ್ಞಾನ, ಮಕ್ಕಳ ಸಾಹಿತ್ಯ ಹೀಗೆ ಎಲ್ಲವನ್ನೂ ಅನುವಾದಿಸಿ ಸೈ ಅನಿಸಿಕೊಂಡವನು ಗೋಪಾಲಕೃಷ್ಣ. ಕೆಲಕಾಲ ಮಾಸ್ಕೋ ರೇಡಿಯೊದಲ್ಲಿ ಕನ್ನಡ ಪ್ರಸಾರದ ಹೊಣೆಯನ್ನು ನಿರ್ವಹಿಸಿದ. ಬಹುಶಃ ಕನ್ನಡದಲ್ಲಿ ಅವನಷ್ಟು ಅನುವಾದ ಮಾಡಿರುವವರು ಅಪರೂಪ. ಅದಕ್ಕೆ ಮನ್ನಣೆ ದೊರೆತದ್ದು ಕೇವಲ ಎರಡು ವರ್ಷಗಳ ಹಿಂದೆ, ಅನುವಾದ ಅಕಾಡೆಮಿ (ಕುವೆಂಪು ಭಾಷಾ ಭಾರತಿ) ಪುರಸ್ಕಾರ ನೀಡಿದ್ದು. ಸೋವಿಯೆತ್ ಒಕ್ಕೂಟದ ಪತನದ ಕೊನೆಯ ದಿನಗಳವರೆಗೆ ಮಾಸ್ಕೋದಲ್ಲೇ ಇದ್ದು ೧೯೯೧ರಲ್ಲಿ ಬೆಂಗಳೂರಿಗೆ ಮರಳಿಬಂದ. ವಿದ್ಯಾಭ್ಯಾಸ ಅಪೂರ್ಣವಾಗಿದ್ದುದರಿಂದ ಮಕ್ಕಳು ಮಾಸ್ಕೋದಲ್ಲೇ ಉಳಿದಿದ್ದರು.

೧೯೯೨ರಲ್ಲಿ ನಾನೂ ಬೆಂಗಳೂರಿಗೆ ಬಂದು ನೆಲೆಸಿದೆ. ಇಬ್ಬರೂ ನವಕರ್ನಾಟಕ ಪ್ರಕಾಶನ ಸಂಸ್ಥೆಯಲ್ಲಿ ಕೆಲಸ ಪ್ರಾರಂಭಿಸಿದೆವು. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕ ಆರ್. ಎಸ್. ರಾಜಾರಾಮ್ ನಮಗೆ ಎಲ್ಲ ಸಹಕಾರ ನೀಡಿದರು, ಹೊಸ ಹೊಸ ಯೋಜನೆಗಳನ್ನು ರೂಪಿಸಿದರು. ನಮಗೂ ಸಂಸ್ಥೆಗಾಗಿ ದುಡಿಯಲು ಸಂತೋಷ, ಉತ್ಸಾಹ. ಹಿರಿಯ ಸಂಪಾದಕರೆಂಬ ಪಟ್ಟ ಕಟ್ಟಿ, ಸಂಸ್ಥೆಯ ನಿರ್ದೇಶಕರಾಗಿಯೂ ಕೆಲಸ ಮಾಡಲು ಅವಕಾಶ ಮಾಡಿಕೊಟ್ಟರು ರಾಜಾರಾಮ್. ನವಕರ್ನಾಟಕ ಸಂಸ್ಥೆಯೊಂದಿಗೆ ನಮ್ಮ ಸಂಬಂಧ ಅದು ಪ್ರಾರಂಭವಾದಾಗಿ ನಿಂದಲೂ ಇದ್ದದ್ದೇ. ಗೋಪಾಲಕೃಷ್ಣ ಹಿಂದೊಮ್ಮೆ ಗಾಂಧಿಬಜಾರಿನಲ್ಲಿ ತೆರೆಯಲಾಗಿದ್ದ ಪೀಪಲ್ಸ್ ಬುಕ್ ಹೌಸ್‌ನ ಮ್ಯಾನೇಜರ್ ಆಗಿದ್ದ. ಇದು ೧೯೫೦ರಲ್ಲಿ. ನಾವು ಬಂದಮೇಲೆ ನವಕರ್ನಾಟಕ ಕೈಗೆತ್ತಿಕೊಂಡ ಬೃಹತ್ ಯೋಜನೆ 'ಜ್ಞಾನ ವಿಜ್ಞಾನ ಕೋಶ' ನಾಲ್ಕು ಸಂಪುಟಗಳ ಗ್ರಂಥ. ಗಾಂಧಿಬಜಾರಿನಲ್ಲಿದ್ದ ಗೋಪಾಲಕೃಷ್ಣನ ಮನೆ ಕಾರ್ಯಕ್ಷೇತ್ರವಾಯಿತು. ಸೇತುರಾವ್ ಮತ್ತು ಗೋಪಾಲಕೃಷ್ಣ ಈ ಸಂಪುಟಗಳ ಸಂಪಾದಕರು. ಎರಡು ಮೂರು ವರ್ಷ ತೆಗೆದುಕೊಂಡ ಈ ಯೋಜನೆ ಒಂದು ಹೊಸ ಅನುಭವ. ಗೋಪಾಲಕೃಷ್ಣ ಇದಕ್ಕಾಗಿ ಹಗಲಿರುಳೂ ದುಡಿದ. ಎಲ್ಲದರಲ್ಲೂ ಅಚ್ಚುಕಟ್ಟು. ಹಸ್ತಪ್ರತಿಗಳನ್ನು ತಿದ್ದುವುದರಿಂದ



*ನವಕರ್ನಾಟಕ ಪ್ರಕಾಶನದ ಸಿಬ್ಬಂದಿಯೊಂದಿಗೆ*



**ಅಮೆರಿಕಾಗೆ ಹೋಗುವ ಮುನ್ನ 'ಹೊಸತು' ಕಚೇರಿಯಲ್ಲಿ**

ಹಿಡಿದು ಪ್ರಿಂಟ್ ರೆಡಿಯಾಗುವವರೆಗೆ ಎಲ್ಲವನ್ನೂ ಪರಾಮರ್ಶಿಸುತ್ತಿದ್ದ. ಮೊದಲಿನಿಂದಲೂ ಕೆಲಸದಲ್ಲಿ ಅವನಿಗೆ ಒಂದು ಶಿಸ್ತು ಮೈಗೂಡಿತ್ತು. ಅಡಾವುಡಿ ಮಾಡುವವನಲ್ಲ. ವರ್ಣಚಿತ್ರಗಳ ರಾಶಿಯನ್ನೇ ಹೊಂದಿದ್ದ ಈ ಸಂಪುಟಗಳು ತೃಪ್ತಿ ನೀಡಿದ ಯೋಜನೆ. ಹನ್ನೊಂದು ತಿಂಗಳಲ್ಲೇ ಎರಡನೇ ಮುದ್ರಣ ಕಂಡ ಪ್ರಕಟಣೆ. ನಾಲ್ಕು ಸಂಪುಟಗಳ ಬೆಲೆ ರೂ. ೧೮೦೦. ಇದೊಂದು ದಾಖಲೆಯ ಕೃತಿ. ಇದಾದನಂತರ ಕೈಗೊಂಡದ್ದು 'ನವಕರ್ನಾಟಕ ವಿಜ್ಞಾನ ಪದವಿವರಣ ಕೋಶ.' ಮೈಸೂರು ವಿಶ್ವವಿದ್ಯಾನಿಲಯದ ವಿದ್ವಾಂಸರಾದ ದಿವಂಗತ ಜಿ. ಟಿ. ನಾರಾಯಣ ರಾವ್ ನೇತೃತ್ವದಲ್ಲಿ ಪೂರೈಸಿದ ಈ ಯೋಜನೆ ತೆಗೆದುಕೊಂಡ ಕಾಲ ಸುಮಾರು ಹತ್ತು ವರ್ಷ. ಗೋಪಾಲಕೃಷ್ಣ ರಾವ್ ಮನೆಯೇ ಕಮ್ಮಟ. ತಿಂಗಳಿಗೊಮ್ಮೆ ಜಿ.ಟಿ.ಎನ್. ಮೂರು ನಾಲ್ಕು ದಿನ ಬೈಠಕ್ ನಡೆಸುತ್ತಿದ್ದರು. ಅನಂತರಾಮು ಟಿ. ಆರ್., ರಾಜಗೋಪಾಲ್, ರಂಗನಾಥ ರಾವ್, ನಾನು, ಗೋಪಾಲಕೃಷ್ಣ, ಎನ್. ಎಸ್. ಲೀಲಾ ಸೇರುತ್ತಿದ್ದೆವು. ಹೋಟೇಲಿನಲ್ಲಿ ಊಟ. ಆದರೂ ಹೊತ್ತು ಹೊತ್ತಿಗೆ ಗೋಪಾಲಕೃಷ್ಣನ ಮನೆಯ ಚಹ ಸರಬರಾಜು ತಪ್ಪದೆ ಇರುತ್ತಿತ್ತು. ಬೆಳಗ್ಗೆ ೯ರಿಂದ ರಾತ್ರೆ ಎಂಟರವರೆಗೆ ಕಸರತ್ತು. ಪ್ರತಿಯೊಂದು ಪದ ಹಾಗೂ ವಿವರಣೆ ಕುರಿತು ಚರ್ಚೆ. ಇದಾದಮೇಲೆ 'ನವಕರ್ನಾಟಕ ವಿಜ್ಞಾನ-ತಂತ್ರಜ್ಞಾನ ಪದಸಂಪದ' ಪ್ರಕಟವಾಯಿತು. ಗೋಪಾಲಕೃಷ್ಣ, ಅನಂತರಾಮು ಮತ್ತು ನಾನು ಸಂಪಾದಕರು. ಈ ಎರಡು ಗ್ರಂಥಗಳೂ ಹೊರಬರುವುದಕ್ಕೆ ಶ್ರಮಿಸಿದ್ದು ಗೋಪಾಲಕೃಷ್ಣ. ಅವನಿಗಿದ್ದ ತಾಳ್ಮೆ, ಶಿಸ್ತು, ಹಸ್ತಪ್ರತಿಯ ಫೈಲುಗಳನ್ನು ಇರಿಸುತ್ತಿದ್ದ ರೀತಿ ಎಲ್ಲವೂ ಅಚ್ಚರಿ ಮೂಡಿಸುವಂಥದ್ದು. ಅದರ ಕರಡಚ್ಚು ತಿದ್ದಿದವನು ಕೂಡ ಅವನೇ. ಗಣಕಯಂತ್ರದ ಮುಂದೆ ಗಂಟೆಗಟ್ಟಲೆ, ದಿನಗಟ್ಟಲೆ ಕುಳಿತು ಕಿಂಚಿತ್ತೂ ತಲೆಕೆಡಿಸಿಕೊಳ್ಳದೆ ಕೆಲಸ ಮಾಡುತ್ತಿದ್ದ ಗೋಪಾಲಕೃಷ್ಣ. ಮಧ್ಯಾಹ್ನ ಊಟಕ್ಕೆ ಒಂದು ರವೆ ಇಡ್ಲಿ ತಿಂದು ಸಂಜೆವರೆಗೆ ಕೆಲಸ ಮಾಡುತ್ತಿದ್ದ ಚಕಾರವೆತ್ತದೆ. ಅವನಿಲ್ಲದಿದ್ದರೆ ಈ ಪುಸ್ತಕಗಳು ಹೊರಬರುತ್ತಿರಲಿಲ್ಲ ಎಂದು ಧೈರ್ಯವಾಗಿ ಹೇಳಬಲ್ಲೆ. ಅಂಥ ಕಾರ್ಯಕರ್ತನನ್ನು ಕಳೆದುಕೊಂಡ ನಾವು ಬಡವಾಗಿದ್ದೇವೆ. ಸುಮಾರು ಇಪ್ಪತ್ತು ವರ್ಷ ನವಕರ್ನಾಟಕ ಸಂಸ್ಥೆಗಾಗಿ ನಿಷ್ಠೆಯಿಂದ ಸೇವೆ ಸಲ್ಲಿಸಿದ ಗೋಪಾಲಕೃಷ್ಣನ ನಿಧನ ತುಂಬಲಾರದ ನಷ್ಟ. ಕ್ಲೀಷೆ ಎನಿಸಿದರೂ ಈ ಪದಗುಚ್ಛ ಅನಿವಾರ್ಯ.

ಈ ಬೃಹತ್ ಯೋಜನೆಗಳಲ್ಲದೆ ನವಕರ್ನಾಟಕ ಪ್ರಕಾಶನದಲ್ಲಿ ಪ್ರಕಟಣೆಗಾಗಿ ಬರುವ ಹಸ್ತಪ್ರತಿಗಳ ಪರಾಮರ್ಶೆ, ಅವುಗಳನ್ನು ತಿದ್ದುವುದು, ಸಭೆ ಸಮಾಲೋಚನೆಗಳಲ್ಲಿ ಪಾಲ್ಗೊಳ್ಳುವುದು ಇರುತ್ತಿತ್ತು. ಇದಕ್ಕಾಗಿ ಅವನಿಗೆ ಅಖಿಲಭಾರತ ಪ್ರಕಾಶಕರ ಸಂಘದ ವತಿಯಿಂದ ಅತ್ಯುತ್ತಮ ಸಂಪಾದಕ ಪ್ರಶಸ್ತಿಯೂ ಲಭಿಸಿತು. ಇವುಗಳಲ್ಲೆಲ್ಲ ಭಾಗವಹಿಸುತ್ತಿದ್ದ ಗೋಪಾಲಕೃಷ್ಣ ಕೆಲವು ಅನುವಾದಗಳನ್ನೂ ಮಾಡಿದ್ದ. ತೆಲುಗಿನಿಂದ ಆರುದ್ರ ಅವರ ಕೃತಿ 'ರಾಮನಿಗೆ ಸೀತೆ ಏನಾಗಬೇಕು' ಅವನು ಅನುವಾದಿಸಿದ ಕೃತಿಗಳಲ್ಲೊಂದು. ಇದು ಹಲವು ಆವೃತ್ತಿಗಳನ್ನು ಕಂಡಿತು. ಎಸ್. ಜಿ. ಸರದೇಸಾಯಿಯವರ ಎರಡು ಸೈದ್ಧಾಂತಿಕ ಕೃತಿಗಳನ್ನು ಕನ್ನಡಿಸಿದ್ದ. ಸ್ವಂತ ಕೃತಿ ರಚಿಸುವ ಗೊಡವೆಗೆ ಹೋಗಲಿಲ್ಲ. ಮಾಸ್ಕೋದಲ್ಲಿದ್ದಾಗ 'ಪ್ರಜಾವಾಣಿ' ಪತ್ರಿಕೆಗೆ ಕೆಲವು ಲೇಖನಗಳನ್ನು ಬರೆದಿದ್ದ. ಈ ಪತ್ರಿಕೆಗೆ ಅಂತರರಾಷ್ಟ್ರೀಯ ಅವಲೋಕನದ ಅಂಕಣವನ್ನೂ ಪ್ರಾರಂಭಿಸಿ ಕೆಲ ಕಾಲ ಬರೆಯುತ್ತಿದ್ದ. 'ಹೊಸತು' ಪತ್ರಿಕೆ ಪ್ರಾರಂಭವಾದಾಗಿನಿಂದ ಸಂಪಾದಕ ಮಂಡಲಿಯಲ್ಲಿದ್ದ ಅವನು ಒಂದು ವಿಧದಲ್ಲಿ ಪತ್ರಿಕೆಗೆ ಅಧಿಕೃತ ಅನುವಾದಕನಾಗಿದ್ದ ಎಂದರೆ ಉತ್ಪ್ರೇಕ್ಷೆ ಏನಿಲ್ಲ. ಇಂಗ್ಲಿಷಿನಲ್ಲಿ ಪ್ರಕಟಣೆಗೆ ಬಂದ ಲೇಖನಗಳನ್ನೆಲ್ಲ ಹೆಚ್ಚು ಕಡಿಮೆ ಅವನೇ ಅನುವಾದಿಸಿ ಕೊಡುತ್ತಿದ್ದ. ವಿಜ್ಞಾನದಲ್ಲಿ ಹೆಚ್ಚು ಆಸಕ್ತನಾಗಿದ್ದ ಅವನು ಅಮೆರಿಕಾಗೆ ಮಕ್ಕಳ ಮನೆಗೆ ಹೋದಾಗಲೂ ತನಗೆ ಹಿಡಿಸಿದ ಲೇಖನಗಳನ್ನು ಅನುವಾದಿಸಿ ಕಳಿಸುತ್ತಿದ್ದ. ಕಳೆದ ವರ್ಷ ಜೂನ್ ತಿಂಗಳಲ್ಲಿ ಅಮೆರಿಕಾಗೆ ಹೋದಮೇಲೆ ರಷ್ಯಾದ ಖ್ಯಾತ ಲೇಖಕ ಗೊಗೋಲ್‌ರ 'ಓವರ್ ಕೋಟ್' ಕೃತಿಯನ್ನು ಅನುವಾದಿಸಿದ. ಪ್ರತಿಸಲ ನನಗೆ ಫೋನು ಮಾಡಿದಾಗಲೂ ಅದರ ಬಗ್ಗೆ ಹೇಳುತ್ತಿದ್ದ. ರಷ್ಯನ್‌ನಿಂದ ನೇರವಾಗಿ ಅನುವಾದ ಮಾಡಿರುವ ಕೃತಿ ಅದು. ಹಸ್ತಪ್ರತಿ ದೊರೆತ ನಂತರ ಪ್ರಕಟಣೆಯಾದೀತು. ಮಾಸ್ಕೋದ ವಾಸ್ತವ್ಯದ ಕುರಿತು ಬರೆಯಬೇಕೆಂದು ನಾನು ಪದೇ ಪದೇ ಒತ್ತಾಯಿಸುತ್ತಿದ್ದೆ. ಏಕೋ ಅವನು ಮನಸ್ಸು ಮಾಡಲಿಲ್ಲ. ಕಳೆದ ವರ್ಷ ಜೂನ್‌ನಲ್ಲಿ ನಾನು ಅಮೆರಿಕದಲ್ಲಿದ್ದೆ. ಪರಸ್ಪರ ಭೇಟಿಯಾಗುವ ಪ್ರಯತ್ನ ಸಫಲವಾಗಲೇ ಇಲ್ಲ. ನಾನು ಅನಾರೋಗ್ಯದಿಂದಿದ್ದಾಗ ಅವನು ಪ್ರತಿನಿತ್ಯ ಫೋನಿನಲ್ಲಿ ಮಾತಾಡುತ್ತಿದ್ದ. ಸಾಯುವುದಕ್ಕೆ ಒಂದು ವಾರದ ಹಿಂದೆ ನನ್ನೊಂದಿಗೆ ಮಾತನಾಡಿ 'ವಿಜ್ಞಾನ ತಂತ್ರಜ್ಞಾನ ನಿಘಂಟ'ನ ಪ್ರಗತಿ ಬಗ್ಗೆ ವಿಚಾರಿಸಿದ್ದ. ಸೆಪ್ಟೆಂಬರ್ ಅಂತ್ಯ ಅಥವಾ ಅಕ್ಟೋಬರ್ ಆದಿಯಲ್ಲಿ ಬರುವುದಾಗಿ ಹೇಳಿದ್ದ. ಅದರಲ್ಲಿ ಅವನಿಗೆ ಅತೀವ ಆಸಕ್ತಿ ಇತ್ತು. ಅಮೆರಿಕದಲ್ಲಿ ನಾವು ಒಂದು ರೀತಿಯಲ್ಲಿ ಅವಲಂಬಿತರಾಗುತ್ತೇವೆ. ಜೊತೆಯವರು ಯಾರೂ ಇಲ್ಲದೆ ಪರದಾಟ, ಬೇಸರ. ಸಂಕೋಚ ಪ್ರವೃತ್ತಿಯ ಗೋಪಾಲಕೃಷ್ಣನಿಗೆ ಅಮೆರಿಕದ ವಾಸ್ತವ್ಯ ಒಂದು ರೀತಿಯಲ್ಲಿ ಸಂಕೋಲೆಯೇ ಆಗಿತ್ತು.

ಮೂರು ವರ್ಷಗಳ ಹಿಂದೆ ಪತ್ನಿ ವಿಮಲಾರನ್ನು ಕಳೆದುಕೊಂಡ ಅವನು ಚೇತರಿಸಿಕೊಳ್ಳಲೇ ಇಲ್ಲ. ಅವನ ಕಣ್ಣೀರು ಆರಲೇ ಇಲ್ಲ. ಅಮೆರಿಕದಲ್ಲಿ ನೆಲೆಯೂರಿದ್ದ ಮೂರು ಮಕ್ಕಳ ಆಶ್ರಯದಲ್ಲಿರುವುದು ಅವನಿಗೆ ಮುಜುಗರವಾಗಿತ್ತು. ಅಲ್ಲಿನ ಚಳಿಗಾಲ ಕಳೆಯುವುದು ಅವನಿಗೆ ತುಂಬಾ ಕಷ್ಟವೆನಿಸಿತ್ತು ಮಾಸ್ಕೋದ ಚಳಿ ವರ್ಷಗಟ್ಟಲೆ ಅನುಭವಿಸಿದ್ದರೂ. ಬೇಸರವಾದಾಗ ಫೋನು ಮಾಡುತ್ತಿದ್ದ, ಇ-ಮೇಲ್ ಕಳಿಸುತ್ತಿದ್ದ. ಮೊಮ್ಮಕ್ಕಳೆಂದರೆ ಪ್ರಾಣ. ಆದರೆ ಅವರೊಂದಿಗೆ ಮಾತನಾಡುವುದು ಅವನಿಗೆ ಕಷ್ಟವಾಗುತ್ತಿತ್ತು ಇಂಗ್ಲಿಷಿನ ಆಕ್ಸೆಂಟಿನಿಂದ. ಆಸ್ಪತ್ರೆ ಸೇರಿದ ಮೇಲೆ ತೀವ್ರ ನಿಗಾ ಘಟಕದಲ್ಲಿದ್ದ ಅವನು ನನ್ನ ಜೊತೆ ಮಾತನಾಡಿದ್ದ. ಹೃದಯಾಘಾತದ ಸುದ್ದಿಯನ್ನು ಮಗಳು ಪೂರ್ಣಿಮಾ ನನಗೆ ತಿಳಿಸಿ ಅವನೊಂದಿಗೆ ಮಾತಾಡಲು ಹೇಳಿದಳು. ನಾನು ಅವನಿಗೆ ಧೈರ್ಯ ಹೇಳಿದೆ. ಬೇಗ ಗುಣಮುಖನಾಗಿ ಬೆಂಗಳೂರಿಗೆ ಬರಲು ಹೇಳಿದೆ. ಅದೇ ಕೊನೆ ಅವನೊಂದಿಗೆ ಮಾತನಾಡಿದ್ದು. ಎರಡನೆ ಮಗ ಮೋಹನನ ಮನೆಗೆ ಬಂದು ಎರಡು ದಿನದ ನಂತರ ತೀರಿಕೊಂಡ. ಆಸ್ಪತ್ರೆಯಲ್ಲಿದ್ದಾಗಲೂ ಮಕ್ಕಳಿಗೆ ತೊಂದರೆಯಾಗಬಾರದು ಎಂಬ ಆತಂಕ ಅವನಿಗೆ. ವಾಷಿಂಗ್ಟನ್ನಿನಲ್ಲಿರುವ ಮೊದಲ ಮಗ ಮುರಳಿ ನನಗೆ ಈ ವಿಷಯ ತಿಳಿಸಿದ. ಸಾಯುವುದಕ್ಕೆ ಮುನ್ನ ಅವನು ತನ್ನ ದೇಹದ ಅಂಗಗಳನ್ನು ಆಸ್ಪತ್ರೆಗೆ ದಾನ ಮಾಡಿದ್ದ. ಅವನ ಅಂತ್ಯಕ್ರಿಯೆ ಅಮೆರಿಕದಲ್ಲೇ ಮಂಗಳವಾರ ಜರುಗಿತು. ಅಂತಿಮದರ್ಶನವೂ ವಂಚನೆಯಾಯಿತು. ಈಗ ಗೋಪಾಲಕೃಷ್ಣ ನೆನಪು ಮಾತ್ರ.

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ,
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫


ಜಿ.ಆರ್. ಅವರೊಂದಿಗೆ

# ಕೆ.ಎಲ್.ಗೋ.

'ದೇವಕಣ' ಎಂದು ಸ್ವದೇಶೀ ಹೆಸರು ಹೊತ್ತು ಪತ್ರಿಕೆಗಳ ಮೊದಲ ಪುಟದಲ್ಲೇ ದೊಡ್ಡ ಅಕ್ಷರಗಳಲ್ಲಿ 'ಹಿಗ್ಸ್ ಬೋಸಾನ್' ಸುದ್ದಿಯಾಯಿತಲ್ಲ? (ಜುಲೈ ೫, ೨೦೧೨). ಆಗ ನನಗೆ ಒಂದು ಕ್ಷಣ ಕೆ. ಎಲ್. ಗೋಪಾಲಕೃಷ್ಣ ರಾಯರ ನೆನಪಾಗಿತ್ತು. ಮೂರು ದಿನಗಳ ಅನಂತರ ಅವರ ಸುದ್ದಿ - ಅವರು ಇಲ್ಲವಾದ ಸುದ್ದಿ - ಬಂತು. ಆಗ ಮನಸ್ಸು ಮ್ಲಾನವಾಯಿತು.

೧೯೮೮ರ ಮೊದಲಿಗೆ 'ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ'ದ ಪ್ರಕಟಣೆಯ ಕೆಲಸ ಅಂತಿಮ ಹಂತದಲ್ಲಿತ್ತು. ಆಗ ಒಂದು ದಿನ ನಾನು ಬೆಂಗಳೂರಿನಲ್ಲಿ ಉಳಿಯಬೇಕಾಯಿತು. ಕೆ.ಎಲ್.ಗೋ. ತಮ್ಮ ಮನೆಗೇ ಕರೆದುಕೊಂಡು ಹೋದರು. ಎಷ್ಟೋ ವರ್ಷಗಳ ಪರಿಚಿತರಂತೆ ಅವರ ಪತ್ನಿಯೂ ಸ್ವಾಗತಿಸಿದರು. ನಮಗೆ ಇದ್ದ ಸಾಮಾನ್ಯ ಸ್ನೇಹಿತರು, ಬರವಣಿಗೆ, ರಾಯರ ಮಾಸ್ಕೊ ದಿನಗಳು – ಹೀಗೆ ಎಷ್ಟೋ ವಿಷಯಗಳನ್ನು ಮಾತಾಡಿದೆವು. ಅವರು ಮಾಸ್ಕೋದಿಂದ ನೆನಪಿಗಾಗಿ ತಂದ ಒಂದು ಸೋಫ ಇತ್ತು. ಅದು ಮಂಚವಾಗಿಯೂ ರೂಪಾಂತರವಾಗುತ್ತಿತ್ತು. ಅಂದು ನಾನು ಮಲಗಿದ್ದು ಆ ಮಂಚದ ಮೇಲೆಯೇ. 'ಜ್ಞಾನ-ವಿಜ್ಞಾನ ಕೋಶ'ದ ಮೊದಲ ಸಂಪುಟದ ಮೊದಲ ಭಾಗವಾಗಿ 'ಭೌತ ವಿಜ್ಞಾನ' ಇದೆ. ಇದರ ಕೊನೆಗೆ ಎಸ್. ಎನ್. ಬೋಸ್‌ರ ಮೇಲಿನ ಬರಹ ಬರುತ್ತದೆ. ಅವರ ಹೆಸರಿನಿಂದ ಕರೆಯುವ 'ಬೋಸಾನ್'ಗಳು ಹೇಗೆ ಮೂಲ ಕಣಗಳಾದುವು ಎಂದು ಮಾತಾಡುವಾಗ 'ಮೂಲ ಕಣಗಳ ಬಗ್ಗೆ ಲೇಖನ ಇಲ್ಲವಲ್ಲ?' ಎಂದು ಕೆ.ಎಲ್.ಗೋ. ಅಚ್ಚರಿಗೊಂಡರು. 'ಒಂದಿಷ್ಟಾದರೂ ಸಾರವತ್ತಾಗಿ ಬರಬೇಕಲ್ಲ?' ಎಂದು ಕೇಳಿದರು. ನಾನು ತಲೆ ಆಡಿಸಿದೆ – 'ಹೌದು' ಎಂದು. ಇದರ ಫಲ-ಕೊನೆಗೆ ಪುಟ್ಟ ಲೇಖನವಾಗಿ ಬಂದ 'ಮೂಲ ಕಣಗಳು'. ಸಾಧ್ಯವಿದ್ದಷ್ಟೂ ಪರಿಪೂರ್ಣತೆಯನ್ನು ಸಾಧಿಸುವ ಸ್ಥಿತಿಯಲ್ಲೇ ಇದ್ದ ಅವರು ಪರಿಪೂರ್ಣ ಪ್ರಕಟಣೆಯ ಚಂಚಲ ಸೀಮಾರೇಖೆಯ ಮೇಲೆಯೇ ನಡೆದಾಡುತ್ತಾ ಸಮತೋಲನ ಸಾಧಿಸಬೇಕಾಗಿತ್ತು.

'ಪದಸಂಪದ'ದಲ್ಲಾಗಬೇಕಾದ ಬದಲಾವಣೆಯನ್ನೇ ಗಮನಿಸಿ 'ಪುಟ ಕಟ್ಟಿ ಆಗಿದೆ. ಆದರೂ ಪರವಾಗಿಲ್ಲ. ಸರಿಯಾಗಿ ಬರುವುದು ಮುಖ್ಯ. ಬದಲಾವಣೆ ಮಾಡೋಣ' ಎಂದು ಅವರು ಹೇಳಿದ್ದನ್ನು ನಾನು ಕೆಲವು ಬಾರಿ ಕೇಳಿದ್ದೇನೆ. 'ಕೆಲಸವಾಯಿತು' ಎನ್ನುವಷ್ಟರಲ್ಲಿ 'ಇಲ್ಲ, ಇನ್ನೂ ಸ್ವಲ್ಪ ಉಳಿದಿದೆ' ಎಂದು ಕೊನೆಯ ಹಂತದವರೆಗೂ ಒಗ್ಗಿಕೊಳ್ಳಲು ಸಿದ್ಧವಾಗಿರುತ್ತಿದ್ದ ಮನಸ್ಸು ಅವರದು.

ಪತ್ನಿಯನ್ನು ಕಳಕೊಂಡ ಮೇಲೆ ರಾಯರು ಮಾನಸಿಕವಾಗಿ ಜರ್ಜರಿತರಾಗಿದ್ದರು. 'ನಾನು ಇನ್ನೊಂದು ರೀತಿಯಲ್ಲಿ ಚಿಕಿತ್ಸೆಗೆ ಮುಂದುವರಿಯುತ್ತಿದ್ದರೆ ಉಳಿಯುತ್ತಿದ್ದರೇನೋ' ಎಂದು ಒಮ್ಮೊಮ್ಮೆ ವ್ಯಥೆಪಟ್ಟದ್ದುಂಟು. ಯಾವುದೇ ತೀರ್ಮಾನಕ್ಕೆ ಬರಲಾಗದ ಪ್ರಶ್ನೆ ಅದು. 'ಮಕ್ಕಳೆಲ್ಲ ಬೇರೆ ದೇಶದಲ್ಲಿ, ಸ್ನೇಹಿತರೆಲ್ಲ ಈ ದೇಶದಲ್ಲಿ, ತಾನು ಎಲ್ಲಿ' ಎಂಬ ತುಮುಲ ಅವರಿಗಿತ್ತು. 'ಅಲ್ಲಿ ಮತ್ತು ಇಲ್ಲಿ' ಎಂದುಕೊಂಡೇ 'ಪದಸಂಪದ'ದ ತಯಾರಿಗೆ ಹೆಗಲು ಕೊಟ್ಟರು. ಬರಹ, ಸಂಪಾದನೆ ಮತ್ತು ಪರಿಷ್ಕರಣೆಯೇ ಅವರಿಗಿದ್ದ ಚೈತನ್ಯದ ಚಿಲುಮೆಗಳು. ಮೊಮ್ಮಕ್ಕಳು ಚಿಕ್ಕವರಾಗಿರುವಾಗ ಚೆನ್ನಾದ ಒಡನಾಡಿಗಳಾಗುತ್ತಾರೆ. ದೊಡ್ಡವರಾದಂತೆ ಬಾಲ್ಯದ ಅಂತರ್ವರ್ತನೆ ಬದಲಾಗುತ್ತದೆ; ಒಡನಾಟದ ಶಿಸ್ತು ಬೇರೆಯಾಗುತ್ತದೆ. ಇದೆಲ್ಲವನ್ನೂ ಅವರು ತಿಳಿದಿದ್ದರು. ಹಾಗೆಯೇ ಮಕ್ಕಳ ಪ್ರೀತಿಯನ್ನು ಅರ್ಥಮಾಡಿಕೊಂಡ ಅವರು ಒಬ್ಬನಾಗಿ ಇರುವಂತಿರಲಿಲ್ಲ.

ಇತರರು ತನಗೆ ಮಾಡಿದ ಅಲ್ಪ ಸಹಾಯವನ್ನು ಕೆ.ಎಲ್.ಗೋ. ಅಂತರಾಳದಿಂದ ನೆನೆಯುತ್ತಿದ್ದರು. ನನಗೆ ತಿಳಿದಂತೆ, ತಾನು ಮಾಡಿದ ಸಹಾಯದ ಬಗ್ಗೆ ಅವರು ಹೇಳುತ್ತಿದ್ದವರಲ್ಲ.

೧೯೭೨ರ ವೇಳೆ 'ಜ್ಞಾನ ಗಂಗೋತ್ರಿ'ಗಾಗಿ ಫೋಟೊ ಸಂಗ್ರಹ - ಆಯ್ಕೆಗಾಗಿ ನಾನು ಮದ್ರಾಸಿನ 'ದ ಹಿಂದೂ' ಮತ್ತು ಸೋವಿಯತ್ ವಾರ್ತಾ ಕೇಂದ್ರಗಳಿಗೆ ಹೋಗಿದ್ದೆ. ನಾನು ಮಿದುಮಾತಿನ ರಾಯರನ್ನು ಮೊದಲು ಕಂಡದ್ದು ಆಗ. (ಶ್ರೀ ಸಿ. ಆರ್. ಕೃಷ್ಣರಾವ್ ಮತ್ತು ಕೆ. ಎಲ್. ಗೋಪಾಲಕೃಷ್ಣ ರಾವ್ ಜ್ಞಾನ ಗಂಗೋತ್ರಿಯ ಕೆಲಸದಲ್ಲಿ ಸಹಕರಿಸಿದ್ದರು).

ಹಲವಾರು ಸೋವಿಯತ್ ವಿಜ್ಞಾನ-ಗಣಿತ ಕೃತಿಗಳನ್ನು ಗೋಪಾಲಕೃಷ್ಣ ರಾಯರು ಅನುವಾದಿಸಿದರು; ಅನುವಾದಕರಾಗಿ ಸಾರ್ವತ್ರಿಕ ಮನ್ನಣೆ ಪಡೆದರು.

ನನಗೋ ಅವರ ಕಾರ್ಯನಿಷ್ಠೆ, ಮಾತು-ವರ್ತನೆಗಳ ಆತ್ಮೀಯತೆ ಹೆಚ್ಚು ಎದ್ದು ಕಾಣಿಸುತ್ತಿದೆ. ಮೊದಲೂ ಅಷ್ಟೆ, ಈಗಲೂ ಅಷ್ಟೆ. ನೆನಪು ಉಳಿಯುವುದೆಂದರೆ ಹೀಗೆ ಇರಬಹುದು.

**ಅಡ್ಯನಡ್ಕ ಕೃಷ್ಣಭಟ್**
ನಂ. ೨೩೦೧, ೨ನೇ ಅಡ್ಡರಸ್ತೆ, ವಿಜಯನಗರ ೨ನೇ ಹಂತ
ಮೈಸೂರು - ೫೭೦ ೦೧೭

# ಮೃದುಭಾಷಿ, ಅನುಪಮ ಅನುವಾದಕ

ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸಂಪರ್ಕಕ್ಕೆ ನಾನು ಬಂದದ್ದು ೧೯೮೧ರಲ್ಲಿ. 'ಅಲ್ಲಿ ರಾಜಾರಾಮ್ ಅವರನ್ನು ನೋಡಿ' ಎಂದು ಹೇಳಿದ್ದು ಹಿರಿಯ ವಿಜ್ಞಾನ ಲೇಖಕರಾದ ಪ್ರೊ॥ ಜಿ. ಟಿ. ನಾರಾಯಣ ರಾವ್ ಅವರು. ನನ್ನ ಪ್ರಕಟಿತ ಬಿಡಿ ವಿಜ್ಞಾನ ಲೇಖನಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲು ಸಾಧ್ಯವೇ ಎಂದು ಕೇಳಲು ಹೋಗಿದ್ದೆ. 'ನಮಗಾಗಿಯೇ ಹೊಸದಾಗಿ ಬರೆದು ಕೊಡಿ' ಎಂಬ ಸಲಹೆ ರಾಜಾರಾಮ್ ಅವರಿಂದ ಬಂದಿತ್ತು. ನನಗಿದು ಅನಿರೀಕ್ಷಿತ. ಒಂದೆರಡು ಬಾರಿ ನವಕರ್ನಾಟಕ ಪ್ರಕಾಶನ ಸಂಸ್ಥೆಗೆ ಬಂದು ಹೋಗುವಲ್ಲಿ ಕೆ. ಎಲ್. ಗೋಪಾಲಕೃಷ್ಣ ರಾವ್ ಮತ್ತು ಸಿ. ಆರ್. ಕೃಷ್ಣರಾವ್ ಅವರ ಪರಿಚಯವಾಯಿತು. ಈ ಎರಡು ದಶಕಗಳಲ್ಲಿ ನವಕರ್ನಾಟಕಕ್ಕೆ ಹತ್ತಿರವಾದಂತೆ ಈ ಇಬ್ಬರಿಗೂ ಹತ್ತಿರವಾದೆ – ಅಂದರೆ ಅವರೊಂದಿಗೆ ಕೆಲಸ ಮಾಡುವ ಅವಕಾಶಗಳು ಒದಗಿಬಂದವು. ಮೊದಲ ಕಂತಿನ ಪುಸ್ತಕಗಳಾಗಿ ನಾಲ್ಕು ಜನಪ್ರಿಯ ವಿಜ್ಞಾನ ಕೃತಿಗಳನ್ನು ಬರೆದಾಗ ಅದರ ಮೊದಲ ಓದು, ತಿದ್ದುಪಡಿ ಗೋಪಾಲಕೃಷ್ಣ ರಾವ್ ಅವರಿಂದ. ಅವರನ್ನು ಮೊದಲು ಭೇಟಿಯಾದಾಗಲೇ ಅವರ ಆತ್ಮೀಯತೆಯ ಅರಿವಾಗಿತ್ತು. ಅವರದು ಮೃದು ಮಾತು, ಆದರೆ ಖಚಿತ ಅಭಿಪ್ರಾಯ. ಎಲ್ಲೂ ಪೂರ್ವಗ್ರಹಕ್ಕೆ ಅವಕಾಶ ನೀಡದ ಮುಕ್ತಮನಸ್ಸು. ಅವರು ತಿದ್ದುಪಡಿ ಹಾಕಿದರೆಂದರೆ ಕೃತಿಯ ಮೌಲ್ಯ ವರ್ಧಿಸುತ್ತಿತ್ತು. ಕರಡು ಓದುವಾಗ ಅವರು ಪ್ರಶ್ನೆಗಳನ್ನು ಎತ್ತುತ್ತಿರಲಿಲ್ಲ, ಬದಲು ನವಿರಾಗಿ ಪಠ್ಯದ ಸುಲಲಿತ ಓಟಕ್ಕೆ ನೆರವಾಗುವಂತೆ ತಿದ್ದುವುದು ಅವರ ವೈಶಿಷ್ಟ್ಯ. ಅನುವಾದವಾದರಂತೂ ಸರಿಯೇ, ಅದರ ಬಿಗಿ ಬಂಧ ಓದಿಯೇ ಅರಿಯಬೇಕು. ಎಂದೂ ಅವರು ಮೂಲ ಕೃತಿಯ ಸಾರ ಸಂಗ್ರಹವನ್ನು ಒಪ್ಪುತ್ತಿರಲಿಲ್ಲ. ಅನುವಾದ ಮಾಡುವಾಗ ಮೂಲ ಪಠ್ಯಕ್ಕೆ ನಿಷ್ಠೆ ಎಂದರೆ ಅನುವಾದಗೊಂಡ ಇಡೀ ವಾಕ್ಯಗಳು ಮೂಲಾರ್ಥವನ್ನೇ ಧ್ವನಿಸುವಂತಿರಬೇಕು, ಹಾಗೆ ಮಾಡಬೇಕೆಂದರೆ ಯುಕ್ತ ಪದವನ್ನೇ



ವಿಜ್ಞಾನ ತಂತ್ರಜ್ಞಾನ ಪದಸಂಪದ ಲೋಕಾರ್ಪಣೆ. ಎಡದಿಂದ ಬಲಕ್ಕೆ ಟಿ. ಆರ್. ಅನಂತರಾಮು, ಸಿ. ಆರ್. ಕೃಷ್ಣರಾವ್, ಅಡ್ಯನಡ್ಕ ಕೃಷ್ಣಭಟ್ಟ, ಪ್ರೊ॥ ಸಿ. ವಿ. ವಿಶ್ವೇಶ್ವರ, ಕೆ. ಎಲ್. ಗೋಪಾಲಕೃಷ್ಣರಾವ್, ಆರ್. ಎಸ್. ರಾಜಾರಾಮ್



ಬಳಸಬೇಕು. ಇದು ಅವರು ಪಾಲಿಸುತ್ತಿದ್ದ ಶಿಸ್ತು.

ಮುಂದೆ ಅವರೊಂದಿಗೆ ಸಲಿಗೆ ಹೆಚ್ಚಾಗುತ್ತಾ ಬಂದಾಗ ಒಮ್ಮೊಮ್ಮೆ ಕೆಣಕುತ್ತಿದ್ದೆ. 'ಯಾಕೆ ಸರ್ ಇಷ್ಟೊಂದು ನಿಷ್ಠೆ?' ಅವರು ಅಷ್ಟೇ ದೃಢವಾಗಿ ಹೇಳುತ್ತಿದ್ದರು – ''ನೀವು ರಷ್ಯನ್ ಅನುವಾದಕರನ್ನು ನೋಡಬೇಕು, ಅರ್ಥಸ್ಪಷ್ಟತೆಗೆ ಅವರು ಎಷ್ಟು ಒತ್ತು ಕೊಡುತ್ತಾರೆಂದರೆ ಇದಕ್ಕೆ ಇದೇ ಪದ, ಇದೇ ಅರ್ಥ'' ಎಂದು ಹೇಳುತ್ತಿದ್ದರು. ಯಾವುದೇ ಹಸ್ತಪ್ರತಿಯನ್ನು ಅವರಿಗೆ ಒಪ್ಪಿಸಿದರಾಯಿತು, ಅದು ಅಚ್ಚಿಗೆ ಹೋಗುವ ಎಲ್ಲ ಗುಣಗಳನ್ನೂ ಪಡೆಯುತ್ತಿತ್ತು. ಅವರೊಡನೆ ನಿಕಟವಾಗಿ ಕೆಲಸ ಮಾಡುವ ಸಂದರ್ಭ ಎದುರಾದದ್ದು ಜಿ. ಟಿ. ನಾರಾಯಣ ರಾವ್ ಅವರ ಸಂಪಾದಕತ್ವದಲ್ಲಿ ೨೦೦೧ರಲ್ಲಿ ಹೊರತಂದ 'ನವಕರ್ನಾಟಕ ವಿಜ್ಞಾನ ಪದವಿವರಣ ಕೋಶ'ದ ರಚನೆಯಲ್ಲಿ ತೊಡಗಿಕೊಂಡಾಗ. ನಾವು ಪ್ರತಿವಾರವೂ ಸೇರುತ್ತಿದ್ದುದು ಬಸವನಗುಡಿಯ ಗಾಂಧಿಬಜಾರಿನ ಹಿಂಬದಿಯ ಸರ್ವೇಯರ್ ಸ್ಟ್ರೀಟ್‌ನ ಗೋಪಾಲಕೃಷ್ಣ ರಾವ್ ಅವರ ಮನೆಯಲ್ಲಿ. ಈಗಲೂ ಆ ರಸ್ತೆಗೆ ಬಾಂದುನವರ ರಸ್ತೆ ಎಂದೇ ಹೆಸರು. ಅನಂತರ ಅವರು ಚನ್ನಮ್ಮನಕೆರೆ ಬಡಾವಣೆಗೆ ಬದಲಾಯಿಸಿದಾಗ ನಮ್ಮ ಕಾರ್ಯಕ್ಷೇತ್ರವೂ ಇಲ್ಲಿಗೆ ವರ್ಗವಾಯಿತು. ತಮ್ಮ ವಿಳಾಸ ಹೇಳುವಾಗ 'ಸಿ. ಟಿ. ಬೆಡ್' ಎನ್ನುತ್ತಿದ್ದರು. ನಮಗೋ ಕಕ್ಕಾಬಿಕ್ಕಿ. ಸಿ. ಟಿ. ಬೆಡ್ ಎನ್ನುವುದು ಚೆನ್ನಮ್ಮನ ಕೆರೆಯ ಇಂಗ್ಲಿಷ್ ರೂಪ. ''ಬೆಂಗಳೂರಿನ ಎಂ. ಜಿ. ರಸ್ತೆಗೂ ಇದೇ ಅವಸ್ಥೆ ನೋಡಿ. ಲಕ್ಷಣವಾಗಿ ಮಹಾತ್ಮ ಗಾಂಧಿ ರಸ್ತೆ ಎನ್ನುವ ಬದಲು ಅದು ಎಂ. ಜಿ. ರಸ್ತೆಯಾಗಿದೆ'' ಎಂದು ವಿಷಾದದ ನಗು ನಗುತ್ತಿದ್ದರು.

ಅವರ ಮನೆಯ ಚಾವಣಿಯಲ್ಲಿ ಹತ್ತಾರು ಕುಂಡಗಳು. ತರಹೇವಾರಿ ಗಿಡಗಳನ್ನು ಇವರೇ ಬೆಳೆಸುತ್ತಿದ್ದರು. ಒಂದು ಸಲ ಅವರ ಕುಂಡದಲ್ಲಿ ರಾತ್ರಿ ರಾಣಿ ಬಿಟ್ಟಾಗ ಅಕ್ಕಪಕ್ಕದವರ ಮನೆಯವರೆಲ್ಲ ಬಂದು ನೋಡಿ ಸೋಜಿಗ ಪಟ್ಟಿದ್ದೂ ಪಟ್ಟಿದ್ದೇ, ಪವಾಡವೆಂಬಂತೆ. ಗೋಪಾಲಕೃಷ್ಣ ರಾವ್ ಅವರಿಗೂ ಖುಷಿ. ತಪ್ಪದೇ ಅದರ ಫೋಟೋ ನವಕರ್ನಾಟಕ ಸಂಸ್ಥೆಗೂ ಬರುತ್ತಿತ್ತು. ಅದನ್ನು ತೋರಿಸುವುದೇ ಅವರಿಗೆ ಸಂಭ್ರಮ. ಹೂಮನಸ್ಸಿನ ಮನುಷ್ಯ ಅವರು. 'ವಿಜ್ಞಾನ ಪದವಿವರಣ ಕೋಶ' ತಯಾರು ಮಾಡುವುದೇ ಒಂದು ಕಾರ್ಯಾಗಾರವಿದ್ದಂತೆ. ಒಬ್ಬರು ಪದ ಯಾವುದೆಂದು ಓದಬೇಕು, ಜಿ.ಟಿ.ಎನ್. ಏಕಾಗ್ರಚಿತ್ತರಾಗಿ ಪದಗಳ ವಿವರಣೆ ನೀಡಬೇಕು, ನಾವೆಲ್ಲ ಕೇಳಿಸಿಕೊಳ್ಳಬೇಕು, ಗೋಪಾಲಕೃಷ್ಣ ರಾವ್ ಅವರು ಬರವಣಿಗೆಗೆ ಇಳಿಸಬೇಕು. ಅನಂತರ ಚಿಂತನ-ಮಂಥನ. ಒಂದೊಂದು ಪದಕ್ಕೂ ಪ್ರತ್ಯೇಕ ಕಾರ್ಡ್. ಅಕಾರಾದಿಯಾಗಿ ಜೋಡಣೆ. ಮುಂದಿನ ಮೀಟಿಂಗಿಗೆ ಬರುವ ಹೊತ್ತಿಗೆ ಅವರ ದುಂಡಾದ ಕೈಬರಹದಲ್ಲಿ ಅಂತಿಮ ಪ್ರತಿ ತಯಾರಾಗುತ್ತಿತ್ತು. ಇದು ಅವರಾಗಿ ವಹಿಸಿಕೊಂಡ ಕೆಲಸ. ಕಾಲ, ತಾಳ್ಮೆ ಎರಡನ್ನೂ ಬೇಡುವ ಕೆಲಸ. ಇದಕ್ಕೆ ಅವರೇ ಸರಿ ಎಂದು ತೀರ್ಮಾನಿಸುವ ಅವಶ್ಯಕತೆಯೇ ಇರಲಿಲ್ಲ. ಮಧ್ಯೆ ಮಧ್ಯೆ ಜಿ.ಟಿ.ಎನ್. ಅವರ ಉಪಕಥೆಗಳು, ಇದ್ದಕ್ಕಿದ್ದಂತೆ 'ಲೆಟ್ ಅಸ್ ಸ್ಟಾಪ್' ಎನ್ನುವ ಗತ್ತಿನ ಮಾತು 'ನವಕರ್ನಾಟಕ ಸಂಸ್ಥೆ ನಮ್ಮ ಕೆಲಸಕ್ಕೆ ರೊಕ್ಕ ಕೊಡುತ್ತಿದೆ' ಎಂಬ ಆತ್ಮಸಾಕ್ಷಿಯ ನುಡಿಗಳು ಜಿ.ಟಿ.ಎನ್. ಅವರಿಂದ. ಮತ್ತೆ ಪ್ರಾರಂಭ ಕೋಶದ ರಚನೆ. ಸುಮಾರು ಒಂದೂವರೆ ಗಂಟೆಯಾಯಿತೆಂದರೆ ಗಡಿಯಾರ ಹೊಡೆದಂತೆ ಕೆಳಗಿನಿಂದ ಮೆಟ್ಟಿಲವರೆಗೆ ಬರುತ್ತಿದ್ದ ಶ್ರೀಮತಿ ವಿಮಲಾ ಗೋಪಾಲಕೃಷ್ಣ ರಾವ್ ಅವರು - ''ಏನೂ ಅಂದ್ರೆ'' ಎಂದರೆ ಸಾಕು, ನನಗಂತೂ ಪವಲೌನ ಶ್ವಾನದ ಪ್ರಯೋಗ ನೆನಪಾಗುತ್ತಿತ್ತು. ಅವರ ಶ್ರೀಮತಿಯವರದು ಮೆಟ್ಟಿಲುವರೆಗೆ ಸೇವಾರ್ಥ, ಗೋಪಾಲಕೃಷ್ಣ ರಾವ್ ಅವರದು ಮೆಟ್ಟಿಲು ಇಳಿದು ಬಿಸ್ಕತ್ತಿನೊಂದಿಗೆ ಕಾಫಿ ಟ್ರೇ ತಂದು ನಮ್ಮ ಮುಂದೆ ಇಡುವ ಕೈಂಕರ್ಯ. ಕುರುಕು ತಿಂಡಿಯ ಎಲ್ಲ ಪ್ರಯೋಗಗಳೂ ಇಲ್ಲಿ ನಡೆದಿವೆ - ಕಾಯಂ ಸದಸ್ಯರೆಂದರೆ ಸಿ.ಆರ್.ಕೆ., ಕೆ.ಎಲ್.ಜಿ. ಅವರ ಜೊತೆಗೆ ನಾನು ಮತ್ತು ಎಂ. ಕೆ. ರಾಜಗೋಪಾಲ್ ಅವರು. ಮಧ್ಯೆ ಮಧ್ಯೆ ಡಾ॥ ಎನ್. ಎಸ್. ಲೀಲಾ, ಜಿ. ಕೆ. ರಂಗನಾಥ್, ಕೆಲವೊಮ್ಮೆ ಕೆ. ಎಸ್. ನವೀನ್.

ಗೋಪಾಲಕೃಷ್ಣ ರಾವ್ ಅವರಿಗೆ ಕೆಲವು ಶಬ್ದಗಳ ಮೇಲೆ ವಿಶೇಷ ಮೋಹ. ನಾವು 'ಗುಂಪು' ಎಂದು ಬರೆದ ಅಥವಾ ಹೇಳಿದ ಕಡೆಯಲ್ಲೆಲ್ಲ ಅವರು 'ವೃಂದ' ಎಂದು ಬದಲಿಸಿಬಿಡುತ್ತಿದ್ದರು. ಆ ಶಬ್ದದ ಬಗೆಗೆ ಏನು ಅಕ್ಕರೆಯೋ. ಕೊನೆಯವರೆಗೂ ಕಾಪಾಡಿಕೊಂಡು ಬಂದರು. ''ನೋಡೀಪ್ಪಾ, ಅಲ್ಲಿ 'ಪ್ರಿಷಿಯಸ್ ಸ್ಟೋನ್' ಅಂಥ ಇದೆ, ನೀವು 'ರತ್ನ' ಅಂಥ ಹೇಳ್ತಿರಾ, ಆದ್ರೆ ಸ್ಟೋನ್‌ಗೆ ಕಲ್ಲು ಅನ್ನೋದೇ ಸರಿ ಅಲ್ವಾ?'' ಎಂದು ನನ್ನನ್ನು ಶಬ್ದದಲ್ಲಿ ಬಂಧಿಸಿದಾಗ ವಿಲಿವಿಲಿ ಒದ್ದಾಡಿ, ''ಬಿಡಿ ಸಾರ್ ಹಾಗೆಯೇ ಇರಲಿ'' ಎಂದು ಬಿಡುತ್ತಿದ್ದೆ. ಹಾಗೆಯೇ 'ಇರಾ' ಎನ್ನುವುದಕ್ಕೆ 'ಕಲ್ಪ' ಎನ್ನುವ ಪದ ಇರಲಿ ಸಾರ್ ಅಂದರೆ, ''ನೋಡೀಪ್ಪಾ, ಶಬ್ದಕೋಶದಲ್ಲಿ ಅದಕ್ಕೆ 'ಶಕ' ಅಂತ ಇದೆಯಲ್ಲಾ'' ಎಂದು ನನ್ನ ಮುಂದೆಯೇ ಆ ಪುಟವನ್ನು ಹಿಡಿಯುತ್ತಿದ್ದರು. ಮುಂದಿನ ಮೀಟಿಂಗ್ ಬರುವ ಹೊತ್ತಿಗೆ ನಾವು ಹಿಂದೆ ಚರ್ಚಿಸಿ, ಒಪ್ಪಿ, ಅಂತಿಮ ಎಂದು ಬರೆದದ್ದನ್ನು ಮತ್ತೊಮ್ಮೆ ಹಲವು ಶಬ್ದಕೋಶಗಳನ್ನು ತೆರೆದು ಖಚಿತಮಾಡಿಕೊಂಡೇ ಅವರು ಅಂತಿಮಗೊಳಿಸುತ್ತಿದ್ದರು. ಅದು ಅವರ ಕಾರ್ಯವೈಖರಿ. ಅವರ ಅತ್ತೆ ಲಲಿತಮ್ಮನವರು ಆದರ್ಶ ಅಧ್ಯಾಪಕಿ ಎಂದು ಪ್ರಶಸ್ತಿ ಪಡೆದವರು. ಶ್ರೀಮತಿ ವಿಮಲಾ ಅವರು ಅವರ ಏಕೈಕ ಪುತ್ರಿ-ಪುತ್ರ ಎಲ್ಲ. ಸಾಮಾನ್ಯವಾಗಿ ಅವರ ಮನೆಗೆ ಕಾಲಿರಿಸುತ್ತಲೇ ಲಲಿತಮ್ಮನವರನ್ನು ಮಾತಾಡಿಸಿಕೊಂಡೇ ಮುಂದೆ ಸಾಗುತ್ತಿದ್ದೆವು. ಒಮ್ಮೊಮ್ಮೆ ಲೋಕಾಭಿರಾಮವಾಗಿ ಮಾತನಾಡುತ್ತಿದ್ದರು. ಗಣಪತಿ ಹಬ್ಬದ ಹಿಂದಿನ ದಿನದ ಒಂದು ಪ್ರಸಂಗವನ್ನು ಮುಂದಿಡುತ್ತ ''ನಿಮ್ಮ ಸ್ನೇಹಿತರಿದ್ದಾರಲ್ಲಾ, ಅವರು ಎಂಥ ಕೆಲಸ ಮಾಡಿದರು ಅಂತೀರಿ. ಬಾಳೆಹಣ್ಣು ತರುತ್ತೇನೆ ಎಂದು ಗಾಂಧಿ ಬಜಾರಿಗೆ ಹೋದವರು ಒಂದು ಚಿಪ್ಪು ಬಾಳೆಹಣ್ಣು ತಂದರು. ಆ ಹಣ್ಣು ಹೇಗಿದ್ದವೆಂದರೆ ಸಿಪ್ಪೆಯೆಲ್ಲ ಕಪ್ಪು, ಉದುರಿಬೀಳುವ ಆತುರದಲ್ಲಿದ್ದವು. 'ಇದೇನು?' ಎಂದಾಗ ವಿಮಲಾಳ ಕಡೆಗೆ ತಿರುಗಿ, ''ನೋಡು ವಿಮಲಾ, ಆ ವ್ಯಾಪಾರಿ ದಿನಾ ಗೋಳಿಡುತ್ತಾನೆ. ಒಳಗೆ ಹಣ್ಣೇನೋ ಚೆನ್ನಾಗಿರುತ್ತದೆ, ಮೇಲೆ ಮಾತ್ರ ಕಪ್ಪು ಎಂದು ಎಷ್ಟು ಹೇಳಿದರೂ ಯಾವ ಗಿರಾಕಿಯೂ ಮುಟ್ಟುವುದಿಲ್ಲ ಎಂದು ಈ ದಿನವೂ ಹೇಳಿದ. ಪಾಪ ಅವನಿಗೇಕೆ ಲಾಸ್ ಆಗಬೇಕು ಎಂದು ನಾನೇ ಕೊಂಡುತಂದೆ



*ವಿಜ್ಞಾನ ಪದವಿವರಣ ಕೋಶದ ತಯಾರಿ. ಪ್ರೊ॥ ಸದಾನಂದ, ಪ್ರೊ॥ ಜಿ. ಟಿ. ನಾರಾಯಣ ರಾವ್*
*ಕೆ. ಎಲ್. ಗೋಪಾಲಕೃಷ್ಣರಾವ್, ಸಿ. ಆರ್. ಕೃಷ್ಣರಾವ್, ಪ್ರೊ॥ ಅಧ್ಯನಡ್ಕ ಕೃಷ್ಣಭಟ್ಟ*




ತಾತನ ಬರವಿಗೆ ಮೊಮ್ಮಗಳ ಸಂಭ್ರಮ

ಎಂದುಬಿಡುವುದೇ ಈ ಪುಣ್ಯಾತ್ಮ'' ಎಂದು ಮುಸಿಮುಸಿ ನಕ್ಕು ಹೇಳಿದ್ದರು ಲಲಿತಮ್ಮನವರು.

ಗೋಪಾಲಕೃಷ್ಣ ರಾವ್ ಅವರ ಮಹಡಿ ಮೇಲಿನ ಕೊಠಡಿಗೆ ಪ್ರವೇಶಿಸುತ್ತಲೇ ಎದ್ದು ಕಾಣುತ್ತಿದ್ದುದು ಪ್ರಸಿದ್ಧ ಕಲಾವಿದ ನಾಯ್ಡು ಅವರು ರಚಿಸಿದ ಚಿತ್ರಗಳು. ಇಬ್ಬರಿಗೂ ಆತ್ಮೀಯ ಗೆಳೆತನ. ಇವರಿಗೆಂದೇ ಕೊಟ್ಟ ಚಿತ್ರಗಳು ಅವು. ನಾಯ್ಡು ಅವರ ಕಲೆಯ ಬಗ್ಗೆ ಇವರಿಗೆ ಅತೀವ ಪ್ರೀತಿ. ಹಾಗೆಯೇ ನಾಯ್ಡು ಅವರ ಕೊನೆಯ ದಿನಗಳಲ್ಲಿ ಅವರು ಅನುಭವಿಸಿದ ಭ್ರಾಂತಿಯ ಬಗ್ಗೆ ಅನೇಕ ಬಾರಿ ನಮಗೆ ಹೇಳುತ್ತಿದ್ದರು. ಇನ್ನೊಂದು – ಅವರು ಅಪಾರವಾಗಿ ಪ್ರೀತಿಸುತ್ತಿದ್ದ ಪೋರ್ಟೆಬಲ್ ರೆಮಿಂಗ್ಟನ್ ಟೈಪ್‌ರೈಟರ್. ಕಂಪ್ಯೂಟರ್ ಬಳಕೆಗೆ ಬಂದ ಮೇಲೂ ಅದರ ಮೇಲಿನ ಮೋಹ ಹೋಗಿರಲಿಲ್ಲ.

ರಷ್ಯನ್ ಭಾಷೆಯಿಂದ ಸಾಹಿತ್ಯ ಕೃತಿಗಳನ್ನು ನೇರವಾಗಿ ಕನ್ನಡಕ್ಕೆ ಅನುವಾದ ಮಾಡಿದ ಶ್ರೇಯ ಕೆ.ಎಲ್.ಜಿ. ಅವರದ್ದು. ಪ್ರಾಯಃ ಕನ್ನಡದ ಮಟ್ಟಿಗೆ ಇದೊಂದು ದಾಖಲೆ. ಮಾಸ್ಕೋದಲ್ಲೇ ನೆಲೆಸಿ ದೀರ್ಘಕಾಲ ಅವರು ಅನುವಾದದಲ್ಲಿ ತೊಡಗಿದ್ದರು. ಮಿರ್ ಪ್ರಕಾಶನ ಹೊರತಂದ ಇವರ ಅನುವಾದ 'ಮನರಂಜನೆಗಾಗಿ ಭೌತಶಾಸ್ತ್ರ'ವನ್ನು ನಾನು ಮತ್ತೆ ಮತ್ತೆ ಓದಿ ಪುಲಕಗೊಂಡಿದ್ದೇನೆ. ವಾಸ್ತವವಾಗಿ ವಿಜ್ಞಾನದ ವಿದ್ಯಾರ್ಥಿಯಾಗಿ ಎಂಜಿನಿಯರಿಂಗ್‌ಗೂ ಪ್ರವೇಶ ಗಿಟ್ಟಿಸಿ ಅದರಲ್ಲಿ ಅನಾಸಕ್ತಿ ತಳೆದು ಇಂಗ್ಲಿಷ್‌ಗೆ ಹೊರಳಿದ ಗೋಪಾಲಕೃಷ್ಣ ರಾವ್ ಅನುವಾದದ ಬಗ್ಗೆ ಹೆಚ್ಚು ಆಸಕ್ತರಾದರು. ನಾವು 'ಟಾಲ್‌ಸ್ಟಾಯ್' ಎಂದರೆ ಅವರು ಒಡನೆಯೇ ತಿದ್ದಿ ಅದು 'ತೋಲ್‌ಸ್ತಾಯ್' ಆಗಬೇಕು ಎನ್ನುತ್ತಾರೆ. ದೋಸ್ತೋವಿಸ್ಕಿ ಎಂದರೆ ಅವರು ನಕ್ಕು ಅದು 'ದಸ್ತಯೇವ್‌ಸ್ಕಿ' ಎನ್ನುತ್ತಾರೆ. ಈ ಇಬ್ಬರ ನೀಳ್ಗತೆಗಳನ್ನು ಸೊಗಸಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಅನುವಾದ ಎಂದೊಡನೆ ಥಟ್ಟನೆ ಒಂದು ಸಂಗತಿ ನೆನಪಾಗುತ್ತದೆ. ''ನೀವು ಎಷ್ಟು ಕೃತಿಗಳನ್ನು ಅನುವಾದ ಮಾಡಿದ್ದೀರಿ ಎಂಬ ಪಟ್ಟಿ ನಿಮ್ಮಲ್ಲಿದೆಯೆ?'' ಎಂದು ರಾಜಾರಾಮ್ ಒಮ್ಮೆ ಕೇಳಿದ್ದರು. ''ಇಲ್ಲಪ್ಪಾ, ಎಲ್ಲಿವೆಯೋ'' ಎಂದು ಕೈಚೆಲ್ಲಿದರು ಗೋಪಾಲಕೃಷ್ಣ ರಾವ್. ಒತ್ತಾಯಿಸುತ್ತ ಬಂದಾಗ ಒಂದು ಅಪೂರ್ಣ ಪಟ್ಟಿ ಸಿದ್ಧಪಡಿಸಿದ್ದರು. ಅಲ್ಲೋ ಬರೀ ಗ್ಯಾಪ್‌ಗಳದ್ದೇ ಸಾಮ್ರಾಜ್ಯ. ಅವರನ್ನು ನಿಕಟವಾಗಿ ಬಲ್ಲ ಸಿ. ಆರ್. ಕೃಷ್ಣರಾವ್ ಹೇಳುವಂತೆ ೨೦೦ಕ್ಕೂ ಹೆಚ್ಚು ಕೃತಿಗಳನ್ನು ಅವರು ಅನುವಾದಿಸಿದ್ದಾರೆ. ಈಗ್ಗೆ ಎರಡು ವರ್ಷಗಳ ಹಿಂದೆ ಕುವೆಂಪು ಭಾಷಾ ಭಾರತಿ ಸಂಸ್ಥೆ ಅವರಿಗೆ 'ಉತ್ತಮ ಅನುವಾದಕ' ಪ್ರಶಸ್ತಿ ನೀಡಿದಾಗ ಅವರನ್ನು ಬಲ್ಲ ಎಲ್ಲರಿಗೂ ಮನಸ್ಸು ತುಂಬಿಬಂದಿತ್ತು. ಈ ಮಹಾರಾಯ ಅತ್ಯಂತ ಸಂಕೋಚಪಡುತ್ತಲೇ ಪ್ರಶಸ್ತಿಯನ್ನು ಸ್ವೀಕರಿಸಿದ್ದರು. ಎರಡೇ ಮಾತಲ್ಲಿ ಕೃತಜ್ಞತೆ ಅರ್ಪಿಸಿ ಕುಳಿತೇಬಿಟ್ಟರು. ಮಿತಭಾಷಿ, ಮೃದುಭಾಷಿ, ಸಜ್ಜನಿಕೆಯೇ ಅವರ ದೇಹದ ತುಂಬ ಪಸರಿಸಿತ್ತು.

'ಡೆಂಚರ್' ಸರಿಹೋಗಲಿಲ್ಲವೆಂದು ಕೃತಕ ದಂತಪಂಕ್ತಿಯನ್ನೇ ಆಚೆ ದೂಡಿದ್ದರು. ''ಯಾಕೋ ಇತ್ತೀಚೆಗೆ ಬಲಗೈ ನರ ಎಳೆಯುತ್ತಿದೆ' ಎನ್ನುತ್ತಿದ್ದರು - ಪರಿಚಿತರ ಹೆಸರುಗಳೇ ಮರೆತುಹೋಗುತ್ತಿವೆ'' ಎಂದು ನೊಂದು ನುಡಿಯುತ್ತಿದ್ದರು. ಮೂರು ವರ್ಷಗಳ ಹಿಂದೆ ಅವರ ಪತ್ನಿ ತೀರಿಕೊಂಡಾಗ ವಿಲಿವಿಲಿ ಒದ್ದಾಡಿದರು. ''ನಾನು ತಪ್ಪು ಮಾಡಿದೆ, ಬೇರೆ ಡಾಕ್ಟರಿಗೆ ತೋರಿಸಬೇಕಾಗಿತ್ತು'' ಎಂದು ಮತ್ತೆ ಮತ್ತೆ ನೊಂದು ನಿಟ್ಟುಸಿರುಬಿಡುತ್ತಿದ್ದರು. ಅವರ ಮೂವರು ಮಕ್ಕಳೂ ಮೋಹನ್, ಮುರಳಿ ಮತ್ತು ಪೂರ್ಣಿಮ ಅಮೆರಿಕದಲ್ಲೇ ನೆಲೆಸಿದ್ದಾರೆ. ಈ ಸಲವೂ ಅಮೆರಿಕಕ್ಕೆ ಹೋಗಿದ್ದರು. ಪಿಟ್ಸ್‌ಬರ್ಗ್‌ನಲ್ಲಿರುವ ಪೂರ್ಣಿಮ ಅವರ ಮಗಳು ರಿಯಾ ತನ್ನ ಶಾಲೆಯಲ್ಲಿ, ''ಈ ಬಾರಿ ಬೇಸಗೆಯಲ್ಲಿ ಏನು ಮಾಡುತ್ತೀಯಾ'' ಎಂದು ಕೇಳಿದ್ದಕ್ಕೆ ''ಈ ಬೇಸಗೆಯಲ್ಲಿ ತಾತ ನಮ್ಮ ಮನೆಗೆ ಬರಲಿದ್ದಾರೆ. ನನಗಂತೂ ಒಳ್ಳೇ ಮಜ. ಅವರು ಕಥೆ ಬರೆಯುತ್ತಾರೆ'' ಎಂದು ಮುದ್ದಾಗಿ ಬರೆದು ಅವರ ಟೀಚರ್‌ಗೆ ತೋರಿಸಿದ್ದಳು. ನಮ್ಮ ಮಟ್ಟಿಗೆ ಗೋಪಾಲಕೃಷ್ಣ ರಾವ್ ಮಾತ್ರ ಕಥೆಯಾಗಿಬಿಟ್ಟರು.

**ಟಿ. ಆರ್. ಅನಂತರಾಮು**
ನಂ. ೫೩೪, ೭೦ನೇ ಅಡ್ಡರಸ್ತೆ, ೧೪ನೇ ಮುಖ್ಯರಸ್ತೆ, ಕುಮಾರಸ್ವಾಮಿ ಬಡಾವಣೆ ೧ನೇ ಹಂತ,
ಬೆಂಗಳೂರು - ೫೬೦ ೦೭೮

# ಎಲೆಮರೆಯ ಹಣ್ಣು

ಜುಲೈ ೭ರಂದು (೨೦೧೨) ಅಮೆರಿಕದಲ್ಲಿ ನಿಧನರಾದ ಕೆ. ಎಲ್. ಗೋಪಾಲಕೃಷ್ಣ ರಾವ್ ಎಲೆಮರೆಯ ಹಣ್ಣಿನಂತೆ ಬದುಕಿ ಹೋದವರು. ನಮಗೆಲ್ಲ ಅವರು ಕೆ.ಎಲ್.ಜಿ. ಆಗಿದ್ದರು.

ರಷ್ಯಾದ ಅನೇಕ ಕೃತಿಗಳನ್ನು ಸಮರ್ಥವಾಗಿ ಕನ್ನಡಕ್ಕೆ ಅನುವಾದಿಸಿದವರು. ಪುಟ ಸಂಖ್ಯೆಯ ದೃಷ್ಟಿಯಿಂದ, ಹಾಗೆಯೇ ವೈವಿಧ್ಯದ ದೃಷ್ಟಿಯಿಂದ ಅವರು ಅನುವಾದಿಸಿರುವಷ್ಟು ಸಾಹಿತ್ಯವನ್ನು ಈವರೆಗೆ ಯಾರೂ ಅನುವಾದಿಸಿಲ್ಲ ಎಂದರೆ ಉತ್ಪ್ರೇಕ್ಷೆಯ ಮಾತಲ್ಲ, ಆದರೂ ತಮ್ಮ ಸಾಧನೆಯ ಬಗ್ಗೆ ಹಿಗ್ಗದ, ಸರಳ, ಸಜ್ಜನ, ಜೊತೆಗೆ ಸಂಕೋಚ ಸ್ವಭಾವದ ವ್ಯಕ್ತಿ!

ಇಂಗ್ಲಿಷ್ ಮತ್ತು ರಷ್ಯನ್ ಎರಡೂ ಭಾಷೆಗಳಿಂದ ಪುಸ್ತಕಗಳನ್ನು ಅನುವಾದಿಸಿದ್ದಾರೆ. ಮಕ್ಕಳ ಸಾಹಿತ್ಯದಿಂದ ಹಿಡಿದು ಮಾರ್ಕ್ಸ್‌ವಾದಿ ವಿಚಾರಧಾರೆ, ಇತಿಹಾಸ, ಅರ್ಥಶಾಸ್ತ್ರ, ತತ್ವಶಾಸ್ತ್ರ, ಜೀವನ ಚರಿತ್ರೆ, ಕಥಾ ಸಾಹಿತ್ಯ – ಹೀಗೆ ಕೆ.ಎಲ್.ಜಿ. ಅನುವಾದ ಮಾಡದ ವಿಷಯಗಳೇ ಇಲ್ಲ ಎನ್ನಬಹುದು.

ಮಾರ್ಕ್ಸ್, ಎಂಗೆಲ್ಸ್ ಮತ್ತು ಲೆನಿನರ ವಿಚಾರಗಳನ್ನು ಪರಿಚಯ ಮಾಡಿಕೊಡುವ ಕೃತಿಗಳಲ್ಲದೆ, ಲಿಯೊ ಟಾಲ್‌ಸ್ಟಾಯ್, ಲ್ಯಾವ್ರಿನೊವ್, ಅಲೆಕ್ಸಿ ಟಾಲ್‌ಸ್ಟಾಯ್, ಮ್ಯಾಕ್ಸಿಂ ಗಾರ್ಕಿ, ತುರ್ಗೆನೆವ್, ಫ್ಯೊದೋರ್ ದೊಸ್ತೊವ್‌ಸ್ಕಿ, ಚೆಂಗಿಜ್ ಐತ್ಮತೊವ್ – ಮುಂತಾದ ರಷ್ಯದ ಗಣ್ಯ ಸಾಹಿತಿಗಳ ಕೃತಿಗಳನ್ನು ಅನುವಾದಿಸಿದ್ದಾರೆ. ಮಾರ್ಕ್ಸ್‌ವಾದಿ ಅರ್ಥಶಾಸ್ತ್ರ ಮತ್ತು ತತ್ವಶಾಸ್ತ್ರಗಳಂಥ ಕ್ಲಿಷ್ಟ ವಿಚಾರಗಳನ್ನು ಸಮರ್ಥವಾಗಿ ಅನುವಾದಿಸಲು ಶ್ರಮಿಸಿದ್ದಾರೆ.

ಮಾಸ್ಕೋದ ರಾದುಗ, ಮಿರ್ ಮತ್ತು ಪ್ರಗತಿ ಪ್ರಕಾಶನ ಸಂಸ್ಥೆಗಳಲ್ಲಿ ಅನುವಾದಕರಾಗಿ, ಸುಮಾರು ಹದಿನೆಂಟು ವರ್ಷ ಕಾರ್ಯನಿರ್ವಹಿಸಿ ನಿವೃತ್ತರಾಗಿ, ಬೆಂಗಳೂರಿನಲ್ಲಿ ನೆಲಸಿದ್ದರು.



'ಹೊಸತು' ಸಂಪಾದಕ ವೃಂದದೊಂದಿಗೆ



*ಕುವೆಂಪು ಭಾಷಾ ಭಾರತಿ ಪ್ರಶಸ್ತಿ ಪ್ರದಾನ ಸಮಾರಂಭ*

ಕೆ.ಎಲ್.ಜಿ. - ವಿಮಲಾ ದಂಪತಿ ಮಾಸ್ಕೋದಲ್ಲಿ ಇದ್ದಾಗ ಅಲ್ಲಿಗೆ ಭೇಟಿ ನೀಡಿದ ಕನ್ನಡಿಗರು - ಬಸವರಾಜ ಕಟ್ಟೀಮನಿ, ಜಿ. ಎಸ್. ಶಿವರುದ್ರಪ್ಪ, ಹಾ. ಮಾ. ನಾಯಕರಂಥ ಕವಿ-ಸಾಹಿತಿಗಳಿಂದ ಹಿಡಿದು ಅಲ್ಲಿಗೆ ಹೋಗಿ ಬಂದ ಇತರ ಅನೇಕರು – ಅವರ ಆತಿಥ್ಯದ ರುಚಿ ಸವಿದಿದ್ದಾರೆ. ಅಪರಿಚಿತ ದೇಶದ ಪ್ರವಾಸದ ಸಂದರ್ಭದಲ್ಲಿ ರೂಢಿಯಿಲ್ಲದ ಆಹಾರ ತಿಂದು ಜಡ್ಡುಗಟ್ಟಿದ ನಾಲಿಗೆಗಳು ಶ್ರೀಮತಿ ವಿಮಲಾ ಅವರು ಆದರದಿಂದ ನೀಡಿದ ಉಪ್ಪಿಟ್ಟು, ಅನ್ನ, ತಿಳಿಸಾರಿನ ರುಚಿಯಿಂದ ಹಿಂದಿನ ಸ್ಥಿತಿಗೆ ತಲುಪಿದ್ದನ್ನು ಅನೇಕರು ಸ್ಮರಿಸಿಕೊಂಡಿದ್ದಾರೆ !

ಕೆ.ಎಲ್.ಜಿ.ಯವರ ಪರಿಚಯ ನನಗಾದದ್ದು ೧೯೬೦ರ ದಶಕದಲ್ಲಿ, ನಾನು ಮದರಾಸಿನಲ್ಲಿದ್ದ ಸೋವಿಯತ್ ವಾರ್ತಾ ಇಲಾಖೆಗೆ ಸೇರಿದಾಗ ಕೆ.ಎಲ್.ಜಿ. ಅಲ್ಲಿ 'ಸೋವಿಯತ್ ದೇಶ' ಪತ್ರಿಕೆಯ ಸಂಪಾದಕರಲ್ಲೊಬ್ಬರಾಗಿ ಕೆಲಸ ಮಾಡುತ್ತಿದ್ದರು. ಅದಕ್ಕೂ ಮುಂಚೆಯೆ ಅವರು ಅನುವಾದಿಸಿದ್ದ 'ಅಗ್ನಿದೀಕ್ಷೆ', 'ಬೇಟೆಯ ಚಿತ್ರಗಳು' – ಮುಂತಾದ ಕೃತಿಗಳ ಮೂಲಕ ಅವರ ಪರಿಚಯವಾಗಿತ್ತು. ಆಗಲೇ ಅವರಿಗೆ ಫೋಟೋಗ್ರಫಿಯಲ್ಲಿ ಆಸಕ್ತಿ ಇತ್ತು. ಸಂಪರ್ಕಕ್ಕೆ ಬಂದವರಿಗೆ ಪುಕ್ಕಟೆಯಾಗಿ ಫೋಟೋ ತೆಗೆದು ಕೊಡುತ್ತಿದ್ದರು. ಒಮ್ಮೆ ನಿರಂಜನ ಅವರಲ್ಲಿಗೆ ಭೇಟಿ ನೀಡಿದ್ದಾಗ, ನಾನು, ಕೆ. ವಿ. ಶೆಟ್ಟಿ ಮತ್ತು ಕೆ. ವಿ. ರಾವ್, ಕೆ.ಎಲ್.ಜಿ. ಮನೆಯಲ್ಲಿ ಸೇರಿದ್ದೆವು. ಆಗ ಅವರು ತೆಗೆದ ಒಂದು ಫೋಟೋ ಈಗಲೂ ನನ್ನಲ್ಲಿದೆ.

ಮುಂದೆ ಕೆಲವು ವರ್ಷಗಳಲ್ಲಿ ಅವರಿಗೆ ಮಾಸ್ಕೋದಲ್ಲಿ ಕೆಲಸ ಮಾಡುವ ಅವಕಾಶ ಸಿಕ್ಕಿತು. ಅವರು ಅಲ್ಲಿದ್ದ ಹದಿನೆಂಟು ವರ್ಷಗಳಲ್ಲಿ ರಷ್ಯಾದಲ್ಲಿಯೂ ಇತರೆಡೆಗಳಲ್ಲಿಯೂ ಸಾಕಷ್ಟು ಬದಲಾವಣೆಗಳಾಗಿದ್ದವು.

೧೯೯೦ರ ದಶಕದ ರಷ್ಯಾದ ವಿದ್ಯಮಾನಗಳಿಂದ, ಸಾಮಾನ್ಯವಾಗಿ ಎಲ್ಲ ಕಮ್ಯುನಿಸ್ಟರಿಗಾಗುವಂತೆ, ಕೆ.ಎಲ್.ಜಿ. ಅವರಿಗೆ ಭ್ರಮನಿರಸನವಾಗಿತ್ತು. ಒಂದು ಬಗೆಯ ಆಘಾತವಾಗಿತ್ತು. ಇತ್ತ ಬೆಂಗಳೂರಿನ ಬೃಹತ್ ಬೆಳವಣಿಗೆ ಅವರ ಗಾಬರಿಯನ್ನು ಮತ್ತಷ್ಟು ಹೆಚ್ಚಿಸಿತ್ತು. ಕೆಲವು ಸಮಯ ಅವರು ಪರಕೀಯ ಭಾವನೆಯನ್ನು ಅನುಭವಿಸಿದರು ಎನ್ನಬಹುದು ! ಸದಾ ಬರವಣಿಗೆಯ ಚಟುವಟಿಕೆಯಲ್ಲಿ ತೊಡಗಿರುತ್ತಿದ್ದ ಅವರಿಗೆ ಕೈ ಕಾಲು ಕಟ್ಟಿಹಾಕಿದಂಥ ಅನುಭವ.

ಮುಂದೆ, ನವಕರ್ನಾಟಕದ ಜ್ಞಾನ-ವಿಜ್ಞಾನ ಕೋಶದ ಸಂಪಾದಕರಲ್ಲೊಬ್ಬರಾಗಿ ನಿಯೋಜಿತರಾದರು. ಕ್ರಮೇಣ ಸಂಪಾದಕ ಬಳಗದೊಂದಿಗೆ ಕೆಲಸದಲ್ಲಿ ತೊಡಗಿಕೊಂಡು, ಆವರಿಸಿದ್ದ ಪರಕೀಯ ಭಾವನೆಯಿಂದ ಹೊರಬಂದರು. ಅನಂತರ, 'ವಿಜ್ಞಾನ ಪದವಿವರಣ ಕೋಶ'ದ ಕೆಲಸದಲ್ಲಿ ತೊಡಗಿಕೊಂಡರು. ಮತ್ತೆ ಸಂಪಾದಕ ಬಳಗದೊಂದಿಗಿನ ಒಡನಾಟದಿಂದ ಸಂಪೂರ್ಣ ಸಹಜ ಸ್ಥಿತಿಗೆ ಮರಳಿದರು.

ನವಕರ್ನಾಟಕ ಪ್ರಕಾಶನದ ಹಿರಿಯ ಸಂಪಾದಕರಾಗಿ ಅವರು ವಾರದಲ್ಲಿ ಎರಡು ಬಾರಿ ಆಫೀಸಿಗೆ ಬಂದು ಹೋಗುತ್ತಿದ್ದರು. ಹಸ್ತಪ್ರತಿಗಳನ್ನು ಓದಿ ಅಭಿಪ್ರಾಯ ತಿಳಿಸುತ್ತಿದ್ದರು. ನಮಗೆದುರಾಗುತ್ತಿದ್ದ ಸಣ್ಣಪುಟ್ಟ ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತಿದ್ದರು.

ಹೆಚ್ಚಿನ ಸಂದರ್ಭಗಳಲ್ಲಿ ಅವರು ಪರಿಶೀಲಿಸಿದ ಹಸ್ತಪ್ರತಿಯಲ್ಲಿ ಬೇರೆ ಯಾವುದೇ ಮಾರ್ಪಾಟಿನ ಅಗತ್ಯ ಬೀಳುತ್ತಿರಲಿಲ್ಲ. ಅವರು ಪರಿಶೀಲಿಸಿ, ತಿದ್ದಿ ಸರಿಪಡಿಸಿಕೊಟ್ಟ ಅನೇಕ ಹಸ್ತಪ್ರತಿಗಳ ಮೂಲ ಲೇಖಕರೇ ಅವರ ತಿದ್ದುಪಡಿಗಳನ್ನು ಒಪ್ಪಿಕೊಂಡು ಅವರನ್ನು ಮೆಚ್ಚಿ ಶ್ಲಾಘಿಸಿದ್ದಾರೆ. ತಮ್ಮ ತಿದ್ದುಪಡಿಯನ್ನು ಲೇಖಕರೂ ಒಪ್ಪಿಕೊಂಡರೇ ಅವರಿಗೆ ಸಂತೋಷ.

ಅಷ್ಟಾದರೂ ಕೆಎಲ್‌ಜಿ 'ಹೊಸತು' ಪತ್ರಿಕೆಗೆ ಲೇಖನ ಬರೆದಾಗ 'ಮೊದಲು ನೀವೊಮ್ಮೆ ಓದಿ ಕೊಡಿ' – ಎಂದು ನನ್ನಂಥ ಕಿರಿಯರಿಗೆ ನೀಡುತ್ತಿದ್ದರು. ಅಷ್ಟು ವಿನಯಶೀಲತೆ ಅವರದು !

ಅವರಿಗೆ ಇಬ್ಬರು ಗಂಡು ಮಕ್ಕಳು ಮುರಳಿ, ಮೋಹನ್. ಒಬ್ಬಳೇ ಮಗಳು ಪೂರ್ಣಿಮಾ. ಇವರು ಮಾಸ್ಕೋದಲ್ಲಿದ್ದಾಗಲೇ ಓದು ಮುಗಿಸಿದ್ದರು. ಮಗಳು ವೈದ್ಯೆ. ಅಮೆರಿಕದಲ್ಲಿ ಉದ್ಯೋಗದಲ್ಲಿದ್ದರು. ಅವರಿಗೆ ಬೆಂಗಳೂರಿನಲ್ಲಿಯೇ ಮದುವೆಗಳಾದುವು. ಮೊಮ್ಮಕ್ಕಳಾದುವು. ಕೆ.ಎಲ್.ಜಿ. ದಂಪತಿ ನಾಲ್ಕೈದು ಬಾರಿ ಅಮೆರಿಕಕ್ಕೆ ಹೋಗಿ ಮಕ್ಕಳ ಮನೆಯಲ್ಲಿದ್ದು, ಹಲವು ಸ್ಥಳಗಳಿಗೆ ಪ್ರವಾಸ ಮಾಡಿ ಬಂದರು. ಹೀಗೆ ಪ್ರವಾಸ ಹೋದಾಗಲೆಲ್ಲ ಆಫೀಸಿನ ಗೆಳೆಯರಿಗೆ ಏನಾದರೂ ಗಿಫ್ಟ್‌ಗಳನ್ನು ತಂದು ಕೊಡುವುದನ್ನು ಮರೆಯುತ್ತಿರಲಿಲ್ಲ. ಅದೇ ರೀತಿ ಸಂಕ್ರಾಂತಿ ಹಬ್ಬದಲ್ಲಿ ಅವರು ಬೆಂಗಳೂರಿನಲ್ಲಿದ್ದರೆ ಆಫೀಸಿನ ಎಲ್ಲರಿಗೆ ಎಳ್ಳು ಬೀರುವುದನ್ನು ತಪ್ಪಿಸುತ್ತಿರಲಿಲ್ಲ.

ಹೀಗಿರುತ್ತ, ಅವರ ಪತ್ನಿ ಒಮ್ಮೆ ಒಂದೆರಡು ದಿನದ ಅಸ್ವಸ್ಥತೆಯ ನಂತರ ಅಕಸ್ಮಾತ್ ನಿಧನರಾದಾಗ, ಇದನ್ನು ನಿರೀಕ್ಷಿಸದಿದ್ದ ಕೆ. ಎಲ್. ಗೋಪಾಲಕೃಷ್ಣ ರಾವ್ ಮಾನಸಿಕವಾಗಿ ಕುಗ್ಗಿಹೋದರು. ಆ ಸಂದರ್ಭದಲ್ಲಿ ಅವರು ಅನುಭವಿಸಿದ ವೇದನೆಯನ್ನು ಸಮೀಪರಾಗಿದ್ದವರು ಮಾತ್ರ ಬಲ್ಲರು.

ಆಫೀಸಿಗೆ ಬಂದಾಗ ತಮ್ಮ ಸ್ವಂತ ಸಂಕಟ ನೋವುಗಳನ್ನು ನಮ್ಮೊಂದಿಗೆ ಹಂಚಿಕೊಂಡು ಮನಸ್ಸನ್ನು ಹಗುರ ಮಾಡಿಕೊಳ್ಳುತ್ತಿದ್ದರು. ಕೆಲವು ವರ್ಷಗಳಿಂದಲೇ ವೃದ್ಧಾಪ್ಯದ ದಿನಗಳನ್ನು ಹೇಗೆ ಕಳೆಯುವುದೆಂಬುದರ ಬಗ್ಗೆ ಆಲೋಚಿಸುತ್ತಿದ್ದರು. ಬೆಂಗಳೂರಿನ ಚಾಮರಾಜಪೇಟೆ, ಬಸವನಗುಡಿ, ಅನಂತರ ವಾಸವಾಗಿದ್ದ ತ್ಯಾಗರಾಜನಗರ – ಇವು ಅವರಿಗೆ ಅತ್ಯಂತ ಪ್ರಿಯವಾಗಿದ್ದು ಇವನ್ನು ಬಿಟ್ಟು ಬೇರೆ ಕಡೆ, ಅದರಲ್ಲೂ ಅಮೆರಿಕದಂಥ ವಿದೇಶದಲ್ಲಿ ವಾಸಮಾಡುವ ವಿಷಯವನ್ನು ಅವರ ಮನಸ್ಸು ಒಪ್ಪುತ್ತಿರಲಿಲ್ಲವೆನ್ನಿಸುತ್ತದೆ.

ಕರ್ನಾಟಕ ಅನುವಾದ ಅಕಾಡೆಮಿ ಕೆ.ಎಲ್.ಜಿ. ಅವರು ಅನುವಾದಗಳ ಮೂಲಕ ಕನ್ನಡ ಸಾಹಿತ್ಯಲೋಕಕ್ಕೆ ನೀಡಿರುವ ಕೊಡುಗೆಯನ್ನು ಮಾನ್ಯ ಮಾಡಿ, ಅವರಿಗೆ ಪುರಸ್ಕಾರ ನೀಡಿತು. ಪ್ರಶಸ್ತಿ ಬಂದ ಬಗ್ಗೆ ಒಂದು ಕಡೆ ಸಂತೋಷವಾದರೂ, ಪತ್ನಿ ಜೀವಿಸಿದ್ದಾಗ ಬಂದಿದ್ದರೆ ಈ ಸಂತೋಷದ ಪಾಲು ಅವರಿಗೂ ಸಿಗುತ್ತಿತ್ತು – ಎಂಬ ವಿಚಾರ ಅವರ ಮನಸ್ಸಿನಲ್ಲಿ.

ಕೆ.ಎಲ್.ಜಿ. ಒಂಟಿಯಾದನಂತರ, ಅಮೆರಿಕೆಗೆ ಬಂದು ತಮ್ಮೊಂದಿಗಿರುವಂತೆ ಮಕ್ಕಳು ಸಲಹೆ ಮಾಡುತ್ತಿದ್ದರು. ಒತ್ತಾಯಪಡಿಸುತ್ತಿದ್ದರು. ಆಗಲೂ

ಕೆ.ಎಲ್.ಜಿ.ಯವರ ಮನಸ್ಸಿನಲ್ಲಿ ಇಲ್ಲಿರುವುದೋ ಅಲ್ಲಿಗೆ ಹೋಗುವುದೋ ಎಂಬ ತಾಕಲಾಟ. ಈ ವಿಷಯವನ್ನು ನಮ್ಮೊಂದಿಗೆ ಹಂಚಿಕೊಳ್ಳುತ್ತಿದ್ದರು. ಆಗ ಅವರು ಅನುಭವಿಸುತ್ತಿದ್ದ ಅಸಹಾಯಕತೆ ನಮಗೆ ತಿಳಿಯುತ್ತಿತ್ತು.

ಹೀಗೆ ತಾಕಲಾಟದಲ್ಲಿ ಅವರ ವೀಸಾ ಅವಧಿ ಮುಗಿದು, ಹೊಸದಾಗಿ ವೀಸಾ ಪಡೆಯಬೇಕಾದ ಅಗತ್ಯ ಉಂಟಾಯಿತು. ಚೆನ್ನೈನಲ್ಲಿರುವ ಅಮೆರಿಕದ ಕಾನ್ಸುಲೇಟ್ ಆಫೀಸಿಗೆ ಹೋಗಿ ಬರಬೇಕು. ಆ ಕೆಲಸ ಮುಗಿಯಲು ಕೊನೆಯ ಪಕ್ಷ ಮೂರು ದಿನಗಳಾಗಬಹುದು. ಇದಕ್ಕೆ ಯಾರದಾದರೂ ಸಹಾಯ ಬೇಕು ಎಂದು ಅವರು ಈ ವಿಷಯವನ್ನು ನನ್ನೊಂದಿಗೆ ಒಂದೆರಡು ಬಾರಿ ಪ್ರಸ್ತಾಪಿಸಿದರು.

ಅವರಿಗೆ ಯಾವ ರೀತಿಯಲ್ಲಿ ಸಹಾಯಕನಾಗಬಹುದು ಎಂಬುದನ್ನು ಆಲೋಚಿಸಿ, ಸಹಾಯ ಮಾಡಲು ಒಪ್ಪಿಕೊಂಡಾಗ ಅವರಿಗೆ ಸಂತೋಷವಾಗದೆ ಇರಲಿಲ್ಲ.

ಚೆನ್ನೈ ತೇನಾಂಪೇಟೆಯಲ್ಲಿ ವಾಸವಿದ್ದ ನನಗೆ ಸಮೀಪದ ಜೆಮಿನಿ ಸರ್ಕಲ್‌ನಲ್ಲಿರುವ ಅಮೆರಿಕನ್ ಕಾನ್ಸುಲೇಟ್ ಕಚೇರಿಯಲ್ಲಿ ಪಾಸ್‌ಪೋರ್ಟ್ ಮತ್ತು ವೀಸಾ ಪಡೆಯಲು ಅಭ್ಯರ್ಥಿಗಳು ಅನುಭವಿಸುತ್ತಿದ್ದ ಅವಸ್ಥೆಯ ಪರಿಚಯವಿತ್ತು. ದಕ್ಷಿಣ ಭಾರತದ ಎಲ್ಲ ಕಡೆಗಳಿಂದ ಅಮೆರಿಕದ ಕನಸನ್ನು ಕಣ್ಣಿನಲ್ಲಿ ತುಂಬಿಕೊಂಡು ಬರುತ್ತಿದ್ದ ಅಭ್ಯರ್ಥಿಗಳು ಬೆಳಗಿನ ಜಾವ ನಾಲ್ಕು ಗಂಟೆಯಿಂದಲೇ ಕ್ಯೂನಲ್ಲಿ ನಿಲ್ಲುತ್ತಿದ್ದರು. ಬಿಸಿಲೇರಿದಂತೆ ಕ್ಯೂ ಸಹ ಬೆಳೆಯುತ್ತಿತ್ತು. ಕ್ಯೂ ನಿಂತವರು ಚೆನ್ನೈನ ಚುರುಚುರು ಬಿಸಿಲಿನಲ್ಲಿ ಒಣಗಿ ಬೆಂಡಾಗುತ್ತಿದ್ದರು. ಆದರೂ ಹಟಬಿಡದೆ ಕ್ಯೂಗೆ ಅಂಟಿಕೊಂಡಿರುತ್ತಿದ್ದರು.

ಕೆ.ಎಲ್.ಜಿ. ಅಪೇಕ್ಷಿಸಿದಂತೆ ನಾನು ಅವರನ್ನು ಬೆಂಗಳೂರಿನಿಂದ ಚೆನ್ನೈಗೆ ಕರೆದೊಯ್ಯಬೇಕಿತ್ತು. ಅಲ್ಲಿ ಒಂದೆರಡು ದಿನ ಉಳಿದುಕೊಳ್ಳಲು ಮತ್ತು ಕಾನ್ಸುಲೇಟ್ ಆಫೀಸಿಗೆ, ಅಲ್ಲಿಂದ ವೈದ್ಯಕೀಯ ತಪಾಸಣೆ ಅಗತ್ಯವಾದರೆ ಅಪೊಲೊ ಆಸ್ಪತ್ರೆಗೆ ಕರೆದೊಯ್ಯಲು, ವಾಪಸು ಮನೆಗೆ ಕರೆತರಲು ಸಹಾಯ ಮಾಡಬೇಕಿತ್ತು.

ಚೆನ್ನೈ ವೆಸ್ಟ್ ಮಾಂಬಳಮ್‌ನಲ್ಲಿ ನನ್ನ ಅಳಿಯ, ಮಗಳು, ಮೊಮ್ಮಕ್ಕಳಿದ್ದಾರೆ. ಪುಟ್ಟ ಮನೆ. ಬೆಳಗ್ಗೆ ಸಂಜೆ ಬಿಸಿಲಿಗೊಡ್ಡಿಕೊಂಡು ಒಳಗಿರುವವರು ಒದ್ದಾಡುವಂತಾಗುತ್ತದೆ. ಕೆ.ಎಲ್.ಜಿ.ಯವರನ್ನು ಉಬ್ಬೆ ಒಲೆಯಂಥ ಸ್ಥಳದಲ್ಲಿ ಉಳಿಸುವುದು ಹೇಗೆಂಬ ಆತಂಕ ನನ್ನದು. ಇದರಿಂದ ಮನೆಯವರಿಗೆ ಕಿರಿಕಿರಿಯಾಗುವುದಂತೂ ನಿಜ.

ನನ್ನ ಅಳಿಯನೊಂದಿಗೆ ಸಮಾಲೋಚಿಸಿದೆ. ಕಾನ್ಸುಲೇಟ್ ಆಫೀಸಿಗೆ ಸಮೀಪದಲ್ಲಿರುವ ಪಾಮ್‌ಗ್ರೂವ್ ಹೋಟೇಲಿನಲ್ಲಿ ಒಂದು ರೂಮು ಬಾಡಿಗೆಗೆ ಹಿಡಿಯಬಹುದೆಂದು, ಜೊತೆಗೆ ನಮ್ಮನ್ನು ಬಸ್‌ಸ್ಟಾಂಡಿನಿಂದ ಕರೆತರಲು ಬೆಳಗ್ಗೆ ಕಾನ್ಸುಲೇಟ್ ಆಫೀಸಿಗೆ ಕರೆದೊಯ್ಯಲು, ಅಲ್ಲಿಂದ ಕರೆತರಲು ಕಾರು ಕಳಿಸಿಕೊಡಲು ಒಪ್ಪಿದರು.

ಈ ಮಧ್ಯೆ ಮತ್ತೊಂದು ಹೊಸ ಬೆಳವಣಿಗೆ. ಸೋವಿಯತ್ ಲ್ಯಾಂಡ್ ಆಫೀಸಿನಲ್ಲಿ ಕೆಲಸ ಮಾಡಿ ನಿವೃತ್ತರಾಗಿರುವ ರಾಮಕೃಷ್ಣರಾಯರಿಗೆ ಈ ವಿಷಯ ತಿಳಿದು, ಕೆ.ಎಲ್.ಜಿ. ತಮ್ಮ ಮನೆಯಲ್ಲೇ ಉಳಿದುಕೊಳ್ಳಬಹುದೆಂದೂ, ವೀಸಾ ಪಡೆಯುವ ವಿಷಯದಲ್ಲಿ ತಾನೇ ಅವರ ಜೊತೆಗಿದ್ದು ಸಹಕರಿಸುವುದಾಗಿ ಹೇಳಿದಾಗ ನನಗೂ ನಿರಾಳವೆನ್ನಿಸಿತು. ಕೆ.ಎಲ್.ಜಿ. ಮತ್ತು ರಾಮಕೃಷ್ಣರಾಯರು ಪರಸ್ಪರ ದೂರದ ಸಂಬಂಧಿಗಳು.

ಕೆ.ಎಲ್.ಜಿ. ಅವರ ನೆಪದಲ್ಲಿ ಎರಡು ಮೂರು ದಿನ ಮೊಮ್ಮಕ್ಕಳೊಡನೆ ಕಳೆಯುವುದೆಂದು ನಾನು, ನನ್ನ ಪತ್ನಿ ತೀರ್ಮಾನಿಸಿದೆವು. ಬೆಳಗ್ಗೆ ಏಳೂವರೆಗೆ ಶಾಂತಿನಗರದಿಂದ ಹೊರಡುವ ಬಸ್ಸಿನಲ್ಲಿ ಪಯಣ. ಕೆ.ಎಲ್.ಜಿ. ಅಲ್ಲಿಗೆ ಬಂದು ತಲುಪಿದರು. ನಮ್ಮಂತೆಯೇ ಅವರು ಸಹ ಬೆಳಗ್ಗೆ ಬರಿ ಹೊಟ್ಟೆಯಲ್ಲಿ ಬಂದಿದ್ದರು. ನಾವು ತಿಂಡಿ ತಿನ್ನಲು ಕುಳಿತಾಗ ತನಗೇನೂ ಬೇಡವೆಂದರು. ಆದರೆ ಒತ್ತಾಯಿಸಿದನಂತರ ಒಂದೇ ಒಂದು ಇಡ್ಲಿ ತಿಂದರು. ಬಸ್ಸಿನಲ್ಲಿ ಕುಳಿತಾಗ ಮೊದಲ ಬಾರಿಗೆ ವಿಮಲಾ ತನ್ನ ಜೊತೆಗಿಲ್ಲ ಎಂದು ಗದ್ಗದಿತರಾದರು. ನಾವು ಅವರನ್ನು ಸಮಾಧಾನಪಡಿಸಿದೆವು. ಅಂದು ಬಸ್ಸು ಚೆನ್ನೈ ತಲುಪಿದಾಗ ಸಂಜೆ ನಾಲ್ಕು ಗಂಟೆ. ಅವರು ಒಂದು ಇಡ್ಲಿ ಒಂದು ಬಾಳೆ ಹಣ್ಣಿನಲ್ಲಿ ಚೆನ್ನೈ ತಲುಪಿದ್ದರು. ಅಶೋಕ ಪಿಲ್ಲರ್ ಸಮೀಪದಿಂದ ಅವರನ್ನು ಕಾರಿನಲ್ಲಿ ಕರೆದೊಯ್ದು ಕೆ. ಕೆ. ನಗರದಲ್ಲಿರುವ ರಾಮಕೃಷ್ಣರಾಯರ ಮನೆಯಲ್ಲಿ ಬಿಟ್ಟು ಬಂದೆವು. ಅವರು ಅಂದಿನ ರಾತ್ರಿ ಸಹ ಸರಿಯಾಗಿ ಊಟ ಮಾಡಿಲ್ಲವೆಂದು ರಾಮಕೃಷ್ಣರಾಯರಿಂದ ತಿಳಿಯಿತು.

ಮುಂದೆ ಎಲ್ಲ ಸುಸೂತ್ರವಾಗಿ ನಡೆಯಿತು. ರಾಮಕೃಷ್ಣರಾಯರು ಕೆ.ಎಲ್.ಜಿ.ಯವರ ಸಹಾಯಕ್ಕೆ ನಿಂತರು. ಕಾರಿನ ಡ್ರೈವರ್ ವೇಳೆಗೆ ಸರಿಯಾಗಿ ಅವರು ಅಲ್ಲಿಗೆ ತಲುಪಲು ಸಹಾಯ ಮಾಡಿದ. ಹೋದ ಕೆಲಸ ಮುಗಿದನಂತರ ಚೆನ್ನೈನಿಂದ ರಾತ್ರಿ ರೈಲಿನಲ್ಲಿ ಬೆಂಗಳೂರಿಗೆ. ರೈಲು, ಬಸ್ಸಿಗೆಂದು ವೆಚ್ಚವಾಗಿದ್ದ ಹಣವನ್ನು ನನ್ನ ಜೇಬಿಗೆ ತುರುಕಲು ಮರೆಯಲಿಲ್ಲ.

ಈ ಸಹಾಯದಿಂದ ಸಂತೋಷಪಟ್ಟು ಕೆ.ಎಲ್.ಜಿ. ನಮ್ಮನ್ನು ಹೊಗಳಿದ್ದೇ ಹೊಗಳಿದ್ದು! ಈ ಬಗ್ಗೆ ಅಮೆರಿಕದಲ್ಲಿರುವ ಮಕ್ಕಳಿಗೂ ದೂರವಾಣಿ ಮೂಲಕ ತಿಳಿಸಿ ಅವರೂ ಸಂತೋಷಪಟ್ಟರಂತೆ. ಮುಂದೆ, ಹದಿನೈದು ದಿನಗಳನಂತರ ವೀಸಾ ಬಂದಾಗ, ಮತ್ತೊಮ್ಮೆ ನನ್ನ ಸಹಾಯಕ್ಕಾಗಿ ಕೃತಜ್ಞತೆ, ಜೊತೆಗೆ ನನಗೇ ಮುಜುಗರವಾಗುವಷ್ಟು ಹೊಗಳಿಕೆ !

ಅಮೆರಿಕದಿಂದ ಹಿಂದಿರುಗಿದಾಗ 'ಸೇಕ್ರೆಡ್ ಪ್ಲೇಸಸ್ ಆಫ್ ಎ ಲೈಫ್ ಟೈಮ್' ಎಂಬ ಸಚಿತ್ರ ಪುಸ್ತಕವನ್ನು ನನಗೆ ಉಡುಗೊರೆಯಾಗಿ ತಂದುಕೊಟ್ಟರು. ಮಕ್ಕಳ ಹೆಸರುಗಳನ್ನು ಅದರಲ್ಲಿ ಸೂಚಿಸಲು ಮರೆಯಲಿಲ್ಲ.

ಕಳೆದ ವರ್ಷ (೨೦೧೧) ಅವರು ಅಮೆರಿಕಕ್ಕೆ ಹೊರಟಾಗ ಆಫೀಸಿನಲ್ಲಿ ಏರ್ಪಡಿಸಿದ್ದ ವಿದಾಯ ಕೂಟದಲ್ಲಿ, ವಿದ್ಯಾರ್ಥಿದೆಸೆಯಲ್ಲೇ ಕಮ್ಯುನಿಸ್ಟ್ ವಿಚಾರಗಳತ್ತ ಆಕರ್ಷಿತರಾದುದನ್ನು, ಆಗಿನ ರಷ್ಯದ ಬದುಕು ಬವಣೆಗಳ ನೆನಪುಗಳಿಂದ ಅವರ ಗಂಟಲುಬ್ಬಿ ಬಂದಿತು. ಇದೇ ಸೆಪ್ಟೆಂಬರಿನಲ್ಲಿ ಅವರು ಹಿಂದಿರುಗಿ ಬಂದು 'ಪದಕೋಶ'ದ ಪರಿಷ್ಕರಣೆ ಕೆಲಸ ಮುಂದುವರಿಸಬೇಕಿತ್ತು...

ಆದರೆ...

ಕೆ.ಎಲ್.ಜಿ. ಅವರಿಗೆ 'ಹೊಸತು' ಮತ್ತು ನವಕರ್ನಾಟಕ ಬಳಗದ ನಮನಗಳು ಸಲ್ಲುತ್ತವೆ.

**ಕೆ. ಪಿ. ಸ್ವಾಮಿ**
ನಂ. ೧೦, ೧ನೇ ಮಹಡಿ, ೩ನೇ ಕ್ರಾಸ್, ಶ್ರೀರಾಮ ದೇವಾಲಯ ರಸ್ತೆ, ಈಜಿಪುರ
ವಿವೇಕನಗರ ಅಂಚೆ, ಬೆಂಗಳೂರು - ೫೬೦ ೦೪೭





*ಮೊಮ್ಮಕ್ಕಳೊಂದಿಗೆ ಕೆ. ಎಲ್. ಜಿ. ದಂಪತಿಗಳು*

'ಕಾಯ' ಬೇಕು ನಿಜ. ಅದಿಲ್ಲದಿದ್ದರೆ ಮನುಷ್ಯ ಭೂಮಿಯ ಮೇಲಿಂದಲೇ 'ಮಾಯ.' ದೇಹ ಬಿಟ್ಟರೆ ಇನ್ನೇನಿದೆ ? ಎಲ್ಲದಕ್ಕೂ ಅದೇ ಮಾಧ್ಯಮ. ಕಾಯದಿಂದಲೇ ಎಲ್ಲ ಕಾಯಕ. ಅದರಿಂದಲೇ ಆದಾಯ, ಸುಖ ಪ್ರದಾಯ. ಕಾಯದ ಕಳವಳದಲ್ಲಿಯೇ ಬದುಕು ಕಳೆದು ಹೋಗುತ್ತದೆ. 'ಕಾಯ'ದ ಕಳವಳ ನೀಗುವುದರಲ್ಲಿಯೇ ನರ ನಾರಾಯಣನಾಗುತ್ತಾನಂತೆ. ವಾಹ್ ! ಎಂಥಾ ಜಿಜ್ಞಾಸೆ ? ಎಲ್ಲದಕ್ಕೂ ಕಾಯಬೇಕು !



# ಬೆಂಗಳೂರಿನ 'ಪಾಳೇಗಾರರು'

ಈರಪ್ಪ ಎಂ. ಕಂಬಳಿ



ಪ್ಯಾಟಿಗೆ ಹೊರಟ ಎತ್ತಿನ ಗಾಡಿಯನ್ನು ಬೆಂಬತ್ತಿ ಹೋದ ನಾಯಿ ತಪ್ಪಿಸಿಕೊಂಡು ಹಿಂದಿರುಗುವ ಉಪಾಯಗಾಣದೆ ಅಲ್ಲೇ ಬೀದಿಪಾಲಾದ ಕತೆ. ಸಂತೆಯಲ್ಲಿ ನನ್ನನ್ನು ನಾನೇ ಕಳೆದುಕೊಂಡ ಹಳವಂಡ ನನ್ನದು. ಬೆಂಗಳೂರಿಗೆ ಬಂದಾಗಿನಿಂದಲೂ ಹೆಚ್ಚು ತಲೆಬ್ಯಾನಿ ಉಂಟುಮಾಡಿದ ಪದವೆಂದರೆ ಈ 'ಪಾಳಿ' ಎಂಬೋ ಸರದೀ ಸಾಲು. ಪಾಳೀ ಹಚ್ಚಿದವನಾಗಿ ನಾನೂ ಕೂಡ ಕಾಲ ಕ್ರಮೇಣ ಬೆಂಗಳೂರಿನ ಪಾಳೇಗಾರ ನಾದದ್ದು ಇವತ್ತು ಇತಿಹಾಸ.

ಇತಿಹಾಸವೆಂದಾಕ್ಷಣ ನೆನಪಾಗುತ್ತದೆ. 'ನಾಡಪ್ರಭು ಕೆಂಪೇಗೌಡ ಕಟ್ಟಿದ ಬೆಂಗಳೂರು' ಎಂದು ಬಾಯಿತುಂಬ ಹೇಳುತ್ತಾರೆ, ನಿಜ. ಹಾಗಾದರೆ ಯಾವ ನಾಡು? ಯಾವ ಗೌಡ? ಎಂದೇನಾದರೂ ಅಲವತ್ತುಕೊಂಡರೆ, ಯಲಹಂಕ ಪ್ರಭು ಕೆಂಪೇಗೌಡನೊ? ಮಾಗಡಿ ಪ್ರಭು ಕೆಂಪೇಗೌಡನೊ? ಎಂದೆಲ್ಲ ಹುಡುಕುತ್ತ ಹೋದರೆ, ಯಲಹಂಕ ನಾಡಿನ ಪ್ರಭು ಎಂಬ ಸಮಾಧಾನಕರ ಉತ್ತರ ದೊರಕುತ್ತದೆ. ಸಣ್ಣಪುಟ್ಟ ಪಾಳೆಯ ಪಟ್ಟುಗಳನ್ನೇ ಆಗ ನಾಡು ಎಂದು ಕರೆಯುವ ರೂಢಿಯಿತ್ತು, ಇರಲಿ. ನಮ್ಮಲ್ಲಿ 'ನಾಡ ಕಚೇರಿ' ಇದೆಯಲ್ಲ ಹಾಗೆ. ಬೆಂಗಳೂರಿನ ಹೊಟ್ಟೆಯೊಳಗೆ ಕಲಾಸಿಪಾಳ್ಯದಿಂದ ಪಟ್ಟೇಗಾರ ಪಾಳ್ಯದ ತನಕ ನೂರೆಂಟು ಪಾಳ್ಯಗಳು ಅಡಗಿವೆ. ಕ್ಷಮಿಸಿರಿ, ನನ್ನ ಆಲೋಚನಾ ಕ್ರಮ ತುಸು ದಾರಿ ತಪ್ಪಿತೆಂದು ಕಾಣುತ್ತದೆ. ಪಾಳೀ ಬಿಟ್ಟು ಪಾಳೆಯ ಪಟ್ಟಿಗೆ ಯಾಕೆ ಇವ ಕಟ್ಟುಬಿದ್ದನೆಂದು ದೂರದಿರಿ. ಸರಿ ದಾರಿಗೆ ಬರಲು ಯತ್ನಿಸುತ್ತೇನೆ.

ಮಲ ವಿಸರ್ಜನೆಯಂಥ ನೈಸರ್ಗಿಕ ಕರೆಗೆ ಓಗೊಡುವಲ್ಲಿ ನಮ್ಮ ಹಳ್ಳಿಗಳಲ್ಲಿ 'ಖುಲ್ಲಂ ಖುಲ್ಲಾ' ಮುಕ್ತ ಅವಕಾಶ. ಅಂಥ ಕಡೆ ಬೆಳೆದ ಹುಡುಗರು ಮೊದಲ ಬಾರಿಗೆ ಬೆಂಗಳೂರಿಗೆ ಬಂದಾಗ, ಈ ಜನಸಂದಣಿಯಲ್ಲಿ ಎಷ್ಟು ದಿನ ಅಂತ ಅದನ್ನು ಕಟ್ಟಿಕೊಂಡಿರಲು ಸಾಧ್ಯ ? ರೈಲು ನಿಲ್ದಾಣಕ್ಕೆ ಲಗತ್ತಾಗಿದ್ದ ತೋಟದಪ್ಪನ ಛತ್ರದಲ್ಲಿ ಸಾವಿರದೊಂಭೈನೂರ ಎಪ್ಪತ್ತರ ದಶಕದಲ್ಲಿ ಎರಡು ದಿನ ಬೀಡು ಬಿಟ್ಟಿದ್ದೆವು. ಬೆಳಗಾಗೆದ್ದು, ಶೌಚಾಲಯದ ಮುಂದೆ, ಹತ್ತಾರು ಗೆಳೆಯರು ಸಾಲುಗಟ್ಟಿ ನಿಂತು ಬೇರೆಯವರಿಗೆ ಅವಕಾಶ ಕೊಡದ ಹಾಗೆ, ನಮ್ಮ ನಮ್ಮೊಳಗೇ ಒಬ್ಬರ ನಂತರ ಒಬ್ಬರ ಕೈಗೆ ಚೊಂಬು ಕೊಟ್ಟು ಕೊಟ್ಟು 'ಖೋಖೋ', 'ರಿಲೇ ಓಟ' ಆಡಿದ್ದಕ್ಕೆ, ಅಲ್ಲಿಯ ಕಾಯಂ ವಿದ್ಯಾರ್ಥಿಗಳು ನಮ್ಮ ಮೇಲೆ ದೂರು ನೀಡಿದ್ದರು. ಏನು ಮಾಡುವುದು, ದೊಡ್ಡ ನಗರ, ಹೊಸ ಊರು, ಹೊಸ ಪರಿಸರ, ನಮಗೆ. ನಮ್ಮ ನಡವಳಿಕೆ ಬೇರೆಯವರಿಗೆ ಕಿರಿಕಿರಿ ಆಗಿದ್ದರೆ ಅದಕ್ಕೆ ನಾವಲ್ಲ ಹೊಣೆ. ಇಲ್ಲಿನ ಉದ್ದನೆಯ ಸರದೀ ಸಾಲು ನಮಗೊ ಗರದೀ ಗಮ್ಮತ್ತು, ಹೊಸ ಅನುಭವದ ಕುತೂಹಲದ ವಸ್ತು.

ಅದಾಗಿ ಹತ್ತು ವರ್ಷಗಳ ನಂತರ ಕಾಯಂ ಕೆಲಸದ ಮೇಲೆ ಬೆಂಗಳೂರಿನ ತೆಕ್ಕೆಗೇ ಬಂದು ಬಿದ್ದಮೇಲೆ, ಸಾರ್ವಜನಿಕ ನಲ್ಲಿಯ ಮುಂದೆ ಪಾಳೆ, ಮೂತ್ರಾಲಯದ ಮುಂದೆ ಪಾಳೆ, ಸಿನಿಮಾ ತಿಕೀಟಿಗಾಗಿ ಪಾಳೆ, ರೇಶನ್ ಅಂಗಡಿಯ ಮುಂದೆ ಪಾಳೆ, ಸೀಮೆ ಎಣ್ಣೆಗಾಗಿ ಪಾಳೆ, ನಿತ್ಯ ನಗರ ಸಾರಿಗೆ ಬಸ್ಸಿಗಾಗಿ ಕಾದ ಪಾಳೆ – ಹೀಗೆ ಒಲ್ಲದ ಮನಸ್ಸಿನಲ್ಲಿಯೇ ಹಲವು ಹತ್ತು ಕಡೆ ತರಾವರಿ ಪಾಳೆ ಹಚ್ಚಿದವನು; ಅದಕ್ಕೆ ದೇಹ ಮನಸ್ಸುಗಳನ್ನು ಶ್ರುತಿ ಮಾಡಿಕೊಳ್ಳುವುದು ಅನಿವಾರ್ಯವಾಗಿತ್ತು ನನಗೆ. ಹೀಗಾಗಿ ಈಗ ನಾನೂ ಒಬ್ಬ ಬೆಂಗಳೂರಿನ 'ಪಾಳೇಗಾರ' ಆಗಿದ್ದೇನೆ, ಅನುಮಾನವೇ ಇಲ್ಲ. 'ನೀನ್ಯಾವ ಸೀಮೆಯ ಪಾಳೇಗಾರನು ಲೇ' ಎಂದು ಹೀಗಳೆಯದಿರಿ. ನಾನಿನ್ನೂ ಅದೇ ಆಗ ಅಕ್ಷರಲೋಕಕ್ಕೆ ಕಣ್ಣು ಕಿಸಿಯುತ್ತಿದ್ದಾಗ ನಮ್ಮ ಮುಂದಿದ್ದದ್ದು ಲಂಕೇಶನೆಂಬೋ ಪಾಳೇಗಾರ. ಆ ರಾಕ್ಷಸನೇ ನಮ್ಮ ಆಗಿನ ಆರಾಧ್ಯ ದೈವ. 'ಪಾಳಿ' ಪದದಲ್ಲಿ

ಇರುವ 'ಇ'ಕಾರಾಂತ ಬೆಂಗಳೂರಿಗರ ಬಾಯಲ್ಲಿ 'ಎ'ಕಾರಾಂತವಾಗುತ್ತದೆ. ಬೇಕಾದರೆ ಜೀವಿ/ಚಿಮೂ ಮಾಸ್ತರರನ್ನೇ ಕೇಳಿ ನೋಡಿರಿ. ಇದಕ್ಕೆಲ್ಲ ಅವರೇ ವಾರಸುದಾರರು. ಏನಾದರೊಂದು ಭಾಷಾ ಪರಿಹಾರ ನೀಡಿಯಾರು.

'ಇಂದು ನನ್ನ ಪಾಳಿಯಾದರೆ, ನಾಳೆ ನಿನ್ನ ಪಾಳಿ' – ಇದು ನೈಸರ್ಗಿಕ ನ್ಯಾಯವನ್ನು ಉಗ್ಗಡಿಸುವ ಜಾನಪದ ನುಡಿಗಟ್ಟು, ಯಾಕೆಂದರೆ ಯಾರೂ ಭೂಮಿಯ ಮೇಲೆ ಗೂಟ ಬಡಿದುಕೊಂಡು ಇರಲು ಬಂದವರಲ್ಲ. ಆದರೂ ಬೆಂಗಳೂರಿನ ಜನಕ್ಕೆ ಅದೇನು ಅರ್ಜಂಟೋ! ವೈಕುಂಠ ಏಕಾದಶಿಯಂದು ಮಾತ್ರ ಉದ್ದನೆಯ ಪಾಳಿ ಹಚ್ಚಿರುತ್ತಾರೆ. ಅವರಲ್ಲಿ ತಿಕೀಟು ಸಿಕ್ಕುವದು ಅಪರೂಪವಾಗಿ ಯಾರೋ ಒಬ್ಬಿಬ್ಬರಿಗೆ. ಅದೂ ಆತ್ಮಹತ್ಯೆಯಂಥ ಸ್ವಯಂಕೃತ ಅಪರಾಧದಿಂದಾಗಿ!

ತಿಕೀಟು ಅಂದ ಕೂಡಲೇ ನೆನಪಾಯಿತು ನೋಡಿರಿ - ರೈಲು ಗಾಡಿ. ಮಾನವ ಬದುಕನ್ನು ಇಡಿಯಾಗಿ ಸಂಕೇತಿಸುವಂಥದ್ದು. ಓಡುವ ರೈಲು ಕಾಲವನ್ನೂ ಕಾಲವಶವಾಗುವುದನ್ನೂ ಸೂಚಿಸುತ್ತದೆ. 'ನಮ್ಮ ನಿಲ್ದಾಣ ಬಂದ ಕೂಡ್ಲೇ ನಾವು ಇಳಕೊಳ್ಳಬೇಕು. ಕೆಲವರು ಮಧ್ಯದಲ್ಲಿಯೇ ಹಾರಿಕೆಂಡು ಬಿಡತಾರ.' : ಅದು ಅಕಾಲಿಕ ಸಾವಿಗೀಡಾದವರನ್ನು ಕುರಿತು ಹೇಳುವ ಮಾತು. ಅಂದ ಹಾಗೇ ನನ್ನ ಊರಿನ ಹಿರೀಕರೊಬ್ಬರು ಮಾರ್ಮಿಕವಾಗಿ ಹೇಳುವ ಮಾತು : ''ನಮ್ಮ ಸಂತಿ ಮುಗದೈತಿ ತಮ್ಮ ಆಗಲೇ. ತಿಕೀಟು ಹಿಡಕೊಂಡು ಪ್ಲಾಟ್‌ಫಾರಮ್ಮಿನ್ಯಾಗ ಕುಂತೀವಿ. ಇನ್ನೇನು ಗಾಡಿ ಬರೋದು ಒಂದ ಸೊನ್ನಿ. ಹತ್ತಿಗೆಂಡು ಹೊಂಟುಬಿಡತೀವಿ, ಯಾರ ಕೈಗೂ ಸಿಗದಂಗ...'' ಇದು ಪ್ರತಿಯೊಬ್ಬರೂ ಕಾಯುವ ಸರದಿ ಸಾಲು ಇರಬಹುದು. ಇಲ್ಲಿರುವ ದರ್ಶನ ಮಾತ್ರ ಅದ್ಭುತವಾದದ್ದು.

'ತಾಳುವಿಕೆಗಿಂತ ತಪವಿಲ್ಲ' ಎಂದು ದಾಸರೇನೊ ಸಲೀಸಾಗಿ ಹೇಳಿಬಿಟ್ಟರು. ನಮ್ಮ ಈಗಿನ ಬೆಂಗಳೂರಿನ ಜನದೊತ್ತಡ ಕಂಡಿದ್ದರೆ ಅವರಿಗೆ ಗೊತ್ತಾಗುತ್ತಿತ್ತು. ಎಲ್ಲ ಕಡೆಗೂ ಸಾಲು ಗಟ್ಟಿ ನಿಂತು ಕಾದು ಕಾದು, ತಾಳ್ಮೆಗೆಟ್ಟವರಾಗಿ 'ಒತ್ತಡದ ರೋಗಿ'ಗಳಾಗಿ ಹೋಗುತ್ತಿರುವ ಅವಸ್ಥೆಯನ್ನು ದಾಸವರೇಣ್ಯರು ಖುದ್ದಾಗಿ ಕಂಡಿದ್ದರೆ ತಮ್ಮ ಅಭಿಪ್ರಾಯವನ್ನೇ ಬದಲಿಸಿಕೊಳ್ಳುತ್ತಿದ್ದರೇನೋ! ತಾಳುವ ತಪ ಯಾರಿಗೆ ಬೇಕಾಗಿದೆ? ಪ್ರತಿಯೊಂದು ಕಡೆಗೂ ಹೋಗಿ ಕಾದು ನಿಲ್ಲುವ ಸಂಕಟ ಬೇಡವೆಂದೇ ಕಾಸು ಪೀಕುವ (ಸ್ಪೀಡ್ ಮನಿ), ಇಲ್ಲಾ ಮಧ್ಯವರ್ತಿಗಳ ಮೊರೆ ಹೋಗುವ ಕಳ್ಳದಾರಿ ಹುಡುಕಿಕೊಳ್ಳುತ್ತಾರೆ ಜನ. ಭ್ರಷ್ಟಾಚಾರ ಕೂಡ ಸಾಮಾಜಿಕ ಮೌಲ್ಯ ಆಗಿಹೋದರೆ ಗತಿಯೇನು? ಹಲ್ಲುಕಚ್ಚಿ ಸಹಿಸುವ ಅಪಾರ ತಾಳ್ಮೆ ಇರುವ, ಕಳ್ಳ ಮಾರ್ಗದಲ್ಲಿ ನುಗ್ಗಲು ಹೇಸುವ ನನ್ನಂಥವರು ಮಾತ್ರವೇ ಪಾಳೆ ಹಚ್ಚಿ ಪಾಳೇಗಾರ ಬಿರುದು ಸಂಪಾದಿಸುತ್ತೇವೆ, ತಲೆಗಟ್ಟಿ ಇದೆಯೆಂದು ಗೋಡೆ ಹಾಯಲು ಸಿದ್ಧವಿರಬೇಕು. ಆಗ ಮಾತ್ರವೇ ಪಾಳೇಗಾರನಾಗಲು ಸಾಧ್ಯ. ಆಗ ಸುತ್ತಲಿದ್ದವರು ನನ್ನನ್ನು ಕಂಡು ಖೊಖಾಸಿ ನಗುತ್ತಾರೆ. ಬೆತ್ತಲಿದ್ದವರ ನಡುವೆ ಬಟ್ಟೆ ಹಾಕಿಕೊಂಡವನನ್ನು ಕಂಡು ಅಪಹಾಸ್ಯ ಮಾಡುವಂತೇ ಥೇಟು.




ಎರಡು ದಶಕದ ಹಿಂದೆ, ನಗರ ಸಾರಿಗೆಯನ್ನೇ ನೆಚ್ಚಿದವರಲ್ಲಿ ಸಾಚಾ ಜನಗಳೇ ಅಧಿಕವಾಗಿರುತ್ತಿದ್ದರು. ಬರಲಿರುವ ಬಸ್ಸುಗಳನ್ನೇ ನಂಬಿ, ದಿವ್ಯ ತಾಳ್ಮೆವಹಿಸಿದವರಾಗಿ ಕಾದು ಸ್ವಯಂಪ್ರೇರಿತರಾಗಿ ಸಾಲು ಗಟ್ಟಿ ನಿಲ್ಲುತ್ತಿದ್ದರು. ಬಸ್ಸು ಬಂದೊಡನೆ ಸಾವಧಾನದಿಂದ ಒಬ್ಬೊಬ್ಬರಾಗಿ ಹತ್ತಿ ಕುಳಿತೊ ನಿಂತೊ ಶಾಂತವಾಗಿ ಪ್ರಯಾಣಿಸುತ್ತಿದ್ದರು. ಉದ್ದನೆಯ ಸಾಲು ಕರಗುತ್ತಿತ್ತು, ಬರಲಿರುವ ಮತ್ತೊಂದು ಬಸ್ಸಿಗಾಗಿ ಬೆಳೆಯುತ್ತಿತ್ತು. ಅಂಥದೇ ದಿನಗಳಲ್ಲಿ, ಕೂತು ಪ್ರಯಾಣಿಸಬೇಕೆನ್ನುವವರು ಸಹನೆ ಮೂರ್ತಿಗಳಾಗಿ ಕ್ಯೂನಲ್ಲಿ ಕಾದು ನಿಲ್ಲುತ್ತಿದ್ದರು. ತುರ್ತು ಇರುವವರು ಪಕ್ಕದಲ್ಲೇ ನಿಂತು ಆಸನಗಳು ಭರ್ತಿಯಗಿ ಚಲಿಸುವ ಸಾಲು ನಿಂತೊಡನೆ, ನಿಂತು ಪ್ರಯಾಣಿಸುವ ಇರಾದೆಯಿಂದ (ಸಾಲುಗಟ್ಟಿದವರ ವಿತ್ ಪರ್ಮಿಶನ್) ಬಸ್ಸು ಹತ್ತುತ್ತಿದ್ದುದು ವಾಡಿಕೆ.

ಎಲ್ಲವೂ ಶಿಸ್ತಿನಿಂದ ನಡೆಯುತ್ತಿತ್ತು. ಸಾಲೋಲ್ಲಂಘನ ಮಾಡುವ ಜನ ಎಲ್ಲ ಕಡೆಗೂ ಇದ್ದು, ನಾಕಾರು ಜನ ಹತ್ತಿರದಲ್ಲಿಯೇ ಪಕ್ಕ ನಿಂತುಗೊಂಡಿದ್ದು, ಬಸ್ಸೊಳಗೆ ನಿಂತೇ ಪ್ರಯಾಣಿಸಲು ಸಿದ್ಧವಿರುವ ಮಳ್ಳರಂತೆ ಕಾದಿದ್ದು, ಬಸ್ಸು ಬಂದು ನಿಂತೊಡನೆ ಮೆತ್ತಗೆ ಸರದಿ ಸಾಲಿನಲ್ಲಿ ತೂರಿಬಿಡುತ್ತಿದ್ದರು. ಸಾಲಿನಲ್ಲಿ ಹಿಂದೆ ಕಾದಿದ್ದವರು ಅಸಹನೆಯಿಂದ ಮನಸ್ಸಿನೊಳಗೇ ಕುದಿಯುತ್ತಿದ್ದರೇ ವಿನಾ ಪ್ರತಿಭಟಿಸುತ್ತಿರಲಿಲ್ಲ. ನಿತ್ಯ ನೋಡಿ ನೋಡಿ ಬೇಸತ್ತ ಹುಡುಗನೊಬ್ಬ, ಸಾಲಲ್ಲಿ ಹಿಂದೆ ನಿಂತಿದ್ದವ, ಬಸ್ಸು ಬಂದು ನಿಂತೊಡನೆ ಸರದಿಯ ಸಾಲು ಚಲಿಸಬೇಕೆನ್ನುವಷ್ಟರಲ್ಲಿ, ಪಕ್ಕದಲ್ಲಿ ಆ ತನಕ ಅಮಾಯಕರಂತೆ ನಿಂತು, ಬಸ್ಸು ಬಂದೊಡನೆ ನಡುವೆ ತೂರಲು ಹೊಂಚುಹಾಕುತ್ತಿದ್ದವರನ್ನು ಉದ್ದೇಶಿಸಿ, ''ಮಧ್ಯ ನುಗ್ಗೋರು ಮಿಂಡ್ರಿಗುಟ್ಟಿದ ನನ್ಮಕ್ಳು, ಮಧ್ಯ ನುಗ್ಗೋರು...'' ಎಂದು ಕೀರಲು ದನಿಯಲ್ಲಿ ಒಂದೇ ಸಮನೆ ರೈಲು ನಿಲ್ದಾಣದಲ್ಲಿ 'ಧ್ಯಾನ್ ರಖೀಯೇ' ಎಂದು ಅನೌನ್ಸು ಮಾಡುವ ತೆರದಲ್ಲಿಯೇ ಅರಚಲಾರಂಭಿಸಿದಾಗ, ಆ ತನಕ ಸರತಿ ಸಾಲಿನಲ್ಲಿ ಸಹನೆಯಿಂದ ಕಾದವರು ಭೇಷ್ ಎಂಬಂತೆ ಮುಸಿ ಮುಸಿ ನಕ್ಕರು. ಸಾಲಲ್ಲಿ ತೂರಲು ಹೊಂಚು ಹಾಕಿದ್ದವರು ನಾಚಿಕೆಯಿಂದ ನುಗ್ಗುವದೋ ಬೇಡವೊ ಎಂಬ ಸಂದಿಗ್ಧಕ್ಕೆ ಒಳಗಾಗುತ್ತಿದ್ದು, ಸಾಲು ನಿರುಮ್ಮಳವಾಗಿ ಚಲಿಸುತ್ತಿತ್ತು. ಇದನ್ನು ಎಚ್ಚರಿಕೆ ಎನ್ನಬೇಕೋ ಪ್ರತಿಭಟನೆಯೆನ್ನಬೇಕೊ?

ಆ ಹುಡುಗನ ಸ್ವಯಂಸೇವೆಯನ್ನು ಕುರಿತು ಸಾಲಲ್ಲಿ ನಿಂತ 'ಪಾಳೇಗಾರರು' ಮೆಚ್ಚಿಕೊಂಡದ್ದಂತೂ ನಿಜ. ನಗರೀಕರಣದ ಭೀಕರ ಬದುಕಿನ ಗದ್ದಲದಲ್ಲಿ ಬಾಯಿ ಕಳೆದುಕೊಂಡವರೇ ಬಹಳ. ಅಂಥದ್ದರಲ್ಲಿ ಇಂಥ ಸಣ್ಣಪುಟ್ಟ ಪ್ರತಿಭಟನೆಗೂ ಎಷ್ಟೊಂದು ಬೆಲೆಯಿರುತ್ತದಲ್ಲವೆ? ತಣ್ಣಗಿನ ಕ್ರೌರ್ಯ ಎಸಗುವ ಕಡೆಗೆ ಮರ್ಮಾಂತಿಕ ಮಾತುಗಳಿಂದಲೇ ತಿವಿಯಬೇಕೇನೊ. ಆವಾಗಲೇ ನಾಗರಿಕ ಜಗತ್ತು ತುಸು ಜಗ್ಗುತ್ತದೆ, ತಗ್ಗುತ್ತದೆ, ತಲೆಬಾಗುತ್ತದೆ. ಇಲ್ಲದೆ ಹೋದರೆ ಎಲ್ಲವನ್ನೂ ಕಬಳಿಸುತ್ತದೆ. ರಾಜ್ಯಭ್ರಷ್ಟ ಪಾಳೇಗಾರರು ಏನು ಮಾಡಲೂ ಹೇಸದೆ ಕೊನೆಗೆ ತಂತಮ್ಮಲ್ಲೆ ಕತ್ತಿ ಮಸೆದು ಸರ್ವನಾಶ ಹೊಂದಿದವರಂತೇ ಥೇಟು! ನಗರದ ಬೀದಿ ಬದಿಯ ನಲ್ಲಿ ನೀರಿಗಾಗಿ ರಾತ್ರಿಯಿಡೀ ಕಾದು ಸಹನೆಗೆಟ್ಟವರಾಗಿ, ಪಾಳೇ ಹಚ್ಚಿದ ಸರದಿ ಸಾಲಿನಲ್ಲಿ ಮಾರಾಮಾರಿ ಹೊಡೆದಾಡಿ ಪ್ರಾಣ ಕಳೆದುಕೊಂಡ ಪಾಳೇಗಾರರೆಷ್ಟೋ ಈ ಬೆಂಗಳೂರಲ್ಲಿ. ನಗರ ಸಾರಿಗೆಯ ಬಸ್ಸಿಗಾಗಿ ಕಾದು, ನಿಂತ ಸರದಿ ಸಾಲಿನಲ್ಲಿಯೇ ಹೆರಿಗೆಯಾದ ಪ್ರಸಂಗಗಳೂ ಇವೆ. ಹೀಗಿದ್ದಾಗ ಮಾನವತೆ ಮಿಡಿಯುವ ಧ್ವನಿಗೆ ಎಲ್ಲ ಕಾಲಕ್ಕೂ ಶಭಾಶಗಿರಿಯಿರುತ್ತದೆ.

ನಗರೀಕರಣದ ಒತ್ತಡದ ಬದುಕಿನ ಶೈಲಿಯಲ್ಲಿ ಹೆಜ್ಜೆ ಹೆಜ್ಜೆಗೂ ಯಂತ್ರಗಳ ದಾಸರಾಗುತ್ತಿರುವ ಮನುಷ್ಯನೂ ಒಂದು ಯಂತ್ರವೇ ಆದಂತಾಗಿ ಕೃತಕ ನಡವಳಿಕೆಯನ್ನು ಆವಾಹಿಸಿಕೊಂಡವನಾಗಿ, ನಮ್ಮನ್ನು ನಾವೇ ಕಳೆದುಕೊಂಡ ತಹತಹಿಕೆ. ಹುತ್ತಗಟ್ಟಿದ ಹಿಂಡು ಇರುವೆಯ ಸಾಲು, ಪರಸ್ಪರ ಎದುರಾದಾಗಲೂ ಮೂಸಿ ನೋಡಿ ಸ್ಪರ್ಶಿಸಿ ಮುಂದುವರಿಯುವ ಅವುಗಳ ಗುಣ ಮನುಷ್ಯರಲ್ಲಿ ಇಲ್ಲವಾಗಿದೆ. ನಗರದ ಒತ್ತಡದಲ್ಲಿ ಪರಸ್ಪರ ಭೇಟಿಯ ವ್ಯವಧಾನವಿಲ್ಲದೆ, ಒಬ್ಬೊಬ್ಬರೂ ಒಂದೊಂದು ನಡುಗಡ್ಡೆಯಾಗಿ ಹೋಗುತ್ತಿರುವ ಆತಂಕ. ಆಪ್ತವಾದ ಒಡನಾಟವಿರಲಿ, ಎದುರುಬದುರಾದಾಗಲೂ 'ಕುಂತು-ನಿಂತು' ಮಾತಾಡುವ ಸುಖದಿಂದಲೇ ವಂಚಿತರಾಗಿದ್ದೇವೆ. ಪರಿಹಾರವೆಲ್ಲಿದೆ? ನಗರದ ಬದುಕಿನ ಶೈಲಿ ನಮ್ಮ ನಾಗರಿಕ ಬದುಕಿಗೆ ಹೊಸ ಬಣ್ಣಗಟ್ಟಿತೆ? ಇಲ್ಲಾ ಬಣ್ಣಗೆಟ್ಟಿತೆ? ಇಲ್ಲಾ ಒಟ್ಟಾರೆಯಾಗಿ ಭಂಡಗೆಟ್ಟಿತೆ? ಎಲ್ಲ ಅಯೋಮಯ ನನಗೆ ಇಲ್ಲಿ!

'ಕಾಯುವ ನೋವು' ಯಾರಿಗೆ ಬೇಕಾಗಿದೆ ಈಗ! ನೋವಿನ ಹಿಂದೆಯೇ ಸಿಗುವ ಸೆಳೆ ಮಿಂಚಿನ ಸುಖದ ಪರಿಕಲ್ಪನೆಗಾಗಿ ಹಂಬಲಿಸುವವರು ಎಲ್ಲಿದ್ದಾರೆ? ಒತ್ತಿ ಹಣ್ಣು ಮಾಡುವುದರಲ್ಲೇ ನಿರತವಾಗಿದೆ ನಿರ್ಲಜ್ಜ ನಾಗರಿಕ ಸಮಾಜ. ತಮ್ಮ ಎಳೆಯ ಹಸುಳೆಗಳನ್ನು ಎಳೆದೊಯ್ದು ರಜಾ ಕಾಲದ ಎರಡು ತಿಂಗಳು ನೃತ್ಯಶಾಲೆಗೆ ಸೇರಿಸಿ, ಬೆಳಕು ಹರಿಯುವುದರೊಳಗಾಗಿ ಹಣ-ಹೆಸರು ಗಳಿಸುವ ಮೂಲಕ, ಟಿ.ವಿ. ಪೆಟ್ಟಿಗೆಯಲ್ಲಿ ಮಿಂಚಬೇಕೆಂದು ಕನಸು ಕಾಣುವ ಭ್ರಮಿಷ್ಟ ನಾಗರಿಕರು ನಮ್ಮ ನಡುವೆ. ಹಾರ್ಮೋನು ಚುಚ್ಚುಮದ್ದು ತೆಗೆದುಕೊಂಡಾದರೂ ದೇಹವನ್ನು ಅರಳಿಸಿಕೊಳ್ಳುವ ಆತುರ ಮತ್ತೆ ಕೆಲ ಹುಡುಗಿಯರಿಗೆ.

ಅದೇ ರೀತಿ, ದಿನ ತುಂಬಿದ ಹೆರಿಗೆಗಾಗಿ ಎದುರು ನೋಡದೆ, ಹೆರಿಗೆ ನೋವು ತಿನ್ನುವ ಸಹನೆ ಕಳೆದುಕೊಂಡವರು - ಮಗು ಪೂರ್ಣ ಪ್ರಮಾಣದಲ್ಲಿ ಬೆಳೆದು ತಾನಾಗೇ ತೊಟ್ಟು ಕಳಚುವವರೆಗೂ ಕಾಯಲಾರರು. ಏನೇನೂ ನಾಗರಿಕ ಸೌಲಭ್ಯಗಳಿಲ್ಲದ ಕಾಲದಲ್ಲಿ ಹೆರಿಗೆ ಮಾಡಿಸುವ ಜವಾಬ್ದಾರಿ ಹೊರುವ ಅನುಭವೀ ಹೆಂಗಸರ ನಡೆ-ನುಡಿ

## ಕ್ಷಮಿಸು ಕಂದ

ಕ್ಷಮೆ ಯಾಚಿಸುವೆ
ಕಂದ ನಾ
ನಿನ್ನಲ್ಲಿ;
ನಿನ್ನ ನಗುವಿಗೂ
ಅಳುವಿಗೂ
ಕಾರಣ ತಿಳಿದವರು
ಯಾರಿಲ್ಲಿ?

**ಡಾ|| ವಿ. ಪುಗಳೇಂದಿ**, ಬಳ್ಳಾರಿ

---

ಅದೆಷ್ಟು ಅರ್ಥಗರ್ಭಿತ! 'ಕೊಡದೊಳಗಿನ ಕುಂಬಳಕಾಯಿ ಹೊರಗೆ ಬರುವುದೆಂದರೆ ಹುಡುಗಾಟವೇನು?' ವಾಹ್! ಈ ನುಡಿಗಟ್ಟಿನ ಹಿಂದಿರುವ ಶ್ಲೇಷಾರ್ಥ ಗಮನಿಸಬೇಕು. ಕುಂಬಳ ಬಳ್ಳಿಯು ಬಿಟ್ಟ ಹೂವು ಉದುರಿ ಹೀಚುಗಾಯಿ ಹಿಡಿದೊಡನೆ, ಹೊಸ ಮಣ್ಣಿನ ಕೊಡವನ್ನು ಒಯ್ದು ಅದಕ್ಕೆ ತೊಡಿಸುತ್ತಿದ್ದರು. ದಿನದಿಂದ ದಿನಕ್ಕೆ ಕೊಡದೊಳಗೇ ಕಾಯಿ ಬೆಳೆಯುತ್ತ ಬೆಳೆಯುತ್ತ ತನ್ನ ಗಾತ್ರ ಹಿಗ್ಗಿಸಿಕೊಂಡು, ತಿಂಗಳು ಒಂದೂವರೆ ತಿಂಗಳಷ್ಟೊತ್ತಿಗೆ ಕೊಡದೊಳಗೇ ಮೈದುಂಬಿ, ಅದರದೇ ಶೇಪು ತಳೆದು, ಪೂರ್ಣ ಪ್ರಮಾಣದಲ್ಲಿ ಬಲಿತಿದೆಯೆನ್ನುವಾಗ ಅದನ್ನು ತಿರುಗಿಸಿ-ಬಾರಿಸಿ ನೋಡಿ ಖಚಿತಪಡಿಸಿಕೊಂಡ ರೈತರು, ಅದರ ತೊಟ್ಟು ಕೊಯ್ದು, ಕೊಡದ ಸಮೇತ ಮನೆಗೆ ಹೊತ್ತೊಯ್ದು ಅಟ್ಟದ ಮೇಲೆ ಕಾಪಿಡುತ್ತಿದ್ದರು. ವರ್ಷ ಕಳೆದರೂ ಸದರಿ ಕುಂಬಳಕಾಯಿ ಮಣ್ಣಿನ ಕೊಡಪಾನದ ಚೌಕಟ್ಟಿನಲ್ಲಿ ಕೆಡದೆ ಸುರಕ್ಷಿತವಾಗಿರುತ್ತಿತ್ತು. ಇದು ನಮ್ಮ ಹಳ್ಳಿಗರು ಕಂಡುಹಿಡಿದ ನೈಸರ್ಗಿಕ ಶೈತ್ಯಾಗಾರ.

ಸದರಿ ಕುಂಬಳಕಾಯಿಯನ್ನು ಬಳಸಬೇಕೆಂದಾಗ, ಕೊಡದ ಬಾಯಿ ಚಿಕ್ಕದಿರುವುದರಿಂದಾಗಿ, ಅನಿವಾರ್ಯವಾಗಿ ಆಗ ಮಣ್ಣಿನ ಕೊಡವನ್ನು ಒಡೆದುಹಾಕಿ, ಕುಂಬಳಕಾಯಿ ಪಡೆಯುತ್ತಿದ್ದರು. ಗರ್ಭಸ್ಥ ಶಿಶುವನ್ನು ಕೊಡದೊಳಗೆ ಅಡಗಿದ ಕುಂಬಳಕಾಯಿಗೆ ಹೋಲಿಸಿರುವುದು ಸೊಗಸಾದ ರೂಪಕ! ದಿನ ತುಂಬಿದ ಮಗು ತಾಯಿಯ ಹೊಟ್ಟೆಯಿಂದ ಜಾರಿ ಹೊರಬರಬೇಕಾದರೆ ಸ್ನಾಯುಗಳ ಹಿಗ್ಗುವಿಕೆ ಸಹಜ. ಅಂಥ ಸಹಜ ಹೆರಿಗೆ ನೋವು ತಿನ್ನಲು ತಯಾರಿಲ್ಲದ ಆಧುನಿಕ ನಾಗರಿಕ ಜಗತ್ತಿನ ಮಹಿಳಾಮಣಿಗಳು ಸೀದಾ ನೋವಿಲ್ಲದ ಹೆರಿಗೆ – ಸಿಸೇರಿಯನ್ ಆಪರೇಷನ್‌ಗೆ ಶರಣಾಗುತ್ತಾರೆ. ಅದು ಒಂದು ಅರ್ಥದಲ್ಲಿ, ಹಲಸಿನ ಹಣ್ಣಿನ ಹೊಟ್ಟೆಗೆ ಚೂರಿ ಹಾಕಿ, ಒಳಗಿದ್ದ ತೊಳೆಯನ್ನು ಉಪಾಯವಾಗಿ ಕತ್ತರಿಸಿ ಹೊರತೆಗೆದು ಮೇಜಿನ ಮೇಲಿಟ್ಟಂತೆಯೇ ಥೇಟು. ಅಂಥ ಹೆರಿಗೆಯನ್ನೆ ಬಯಸುವವರ ಸಂಖ್ಯೆ ಬೆಳೆಯುತ್ತಿರುವಾಗ, ಅದಕ್ಕಾಗೇ ಕಾದಿದ್ದ ನರ್ಸಿಂಗ್ ಹೋಮುಗಳ ಸಂಖ್ಯೆ ಹೆಚ್ಚುತ್ತಿವೆ. ದುಡ್ಡೊಂದು ಇರಬೇಕು ಚೆಲ್ಲುವುದಕ್ಕೆ. ಅಷ್ಟೇ ಅಲ್ಲ, ಜ್ಯೋತಿಷಿಗಳು ಹೇಳಿಕೊಟ್ಟ ಗಳಿಗೆಯಲ್ಲಿಯೇ ಬೇಕಾದರೆ ಮಗುವನ್ನು ಹೊರಜಗತ್ತಿಗೆ ತರಬಹುದು. 'ಭವಿಷ್ಯ' ಎನ್ನುವುದು ಸಾಧನೆಯಲ್ಲಿದೆಯೇ ಹೊರತು ಅದೃಷ್ಟದಲ್ಲಿ ಇಲ್ಲ ಎಂಬ ಸರಳ ಸತ್ಯ ಎಷ್ಟು ಮಂದಿಯ ಮನಸ್ಸಿನಲ್ಲಿದೆ? ನಮ್ಮ ಕಲಿತ ಜ್ಞಾನದಿಂದ ಗಳಿಸಿದ ಸೌಲಭ್ಯಗಳನ್ನು ಬಳಸಿ ನಿಸರ್ಗದ ಕಣ್ಣಿಗೆ ಆಗೀಗ ಬೊಗಸೆ ಬೊಗಸೆ ಮಣ್ಣು ಎರಚಬಹುದು. ಎಲ್ಲದಕ್ಕೂ ಎಲ್ಲ ಕಾಲಕ್ಕೂ ಆ ಆಟ ನಡೆಯದು. ಒಂದು ಹಂತದವರೆಗೂ ಸಹಿಸುತ್ತದೆ ಪ್ರಕೃತಿ. ಮನುಷ್ಯನ ಅಟ್ಟಹಾಸ ಮಿತಿಮೀರಿದಾಗ ಹೊಸಕಿ ಹಾಕಿ, 'ನಿಸರ್ಗದ ಮುಂದೆ ನೀನೂ ಒಂದು ಕ್ರಿಮಿ' ಎಂಬುದನ್ನು ಆಗಾಗ ನೆನಪಿಸುತ್ತದೆ.

ಬಾಲ್ಯದ ಪಠ್ಯಪುಸ್ತಕದಲ್ಲಿ ಓದಿದ್ದ ದೋಹೆಯೊಂದು ನೆನಪಾಗುತ್ತದೆ :

ಧೀರೇ ಧೀರೇ ರೇ ಮನಾ ಧೀರೇ ಸಬ್‌ಕುಛ್ ಹೋಯ್
ಮಾಲಿ ಸೀಂಚೆ ಸೌ ಘಡಾ ಋತು ಆಯೆ ಫಲ ಹೋಯ್

– ಇದನ್ನೇ ನಮ್ಮ ಜನಪದರ 'ಎಲ್ಲದಕ್ಕೂ ಕಾಲಕೂಡಿ ಬರಬೇಕು' ಎಂಬ ಸಾಂತ್ವನದ ನುಡಿ ಕಾಯುವಿಕೆಯನ್ನೇ ಸೂಚಿಸುತ್ತದೆ.

ಆರಕ್ಕೇರದ ಮೂರಕ್ಕಿಳಿಯದ ನಗರವಾಸಿ ಮಧ್ಯಮ ವರ್ಗದ ಜನರು ನಗರ ಸಾರಿಗೆ ಬಸ್ಸಿಗಾಗಿ ಗಂಟೆಗಟ್ಟಲೆ ಕಾದು ನಿಲ್ಲುವುದರಿಂದ ಹಿಡಿದು, ಹಲವು ಹತ್ತು ಸರದಿ ಸಾಲಿನಲ್ಲಿ ಕುಳಿತೊ - ನಿಂತೊ ಬೇಸತ್ತು, ತಮ್ಮ ಜೀವಿತಾವಧಿಯ ಕಾಲುಭಾಗ ಆಯಸ್ಸನ್ನು ಕಾಯುವುದರಲ್ಲೇ ಕಳೆದುಕೊಂಡಿರುತ್ತಾರೇನೋ. ಅದು ಲೆಕ್ಕಕ್ಕೆ ಸಿಗುವುದಲ್ಲ, ಬಗೆಹರಿಯುವುದೂ ಇಲ್ಲ. ನಾವೆಲ್ಲ ನಿನ್ನೆ ಮೊನ್ನೆ ಬೆಂಗಳೂರಿನ ತೆಕ್ಕೆಗೆ ಬಂದು ಬಿದ್ದ ಹಾಗಿದೆ. ಆಗಲೇ ಮೂರು ದಶಕಗಳು ಸರ್‍ರನೆ ಉರುಳಿಹೋಗಿವೆ. ಮಚ್ ವಾಟರ್ ಹ್ಯಾಸ್ ಫ್ಲೋನ್ ಅಂಡರ್ ದಿ ಬ್ರಿಡ್ಜ್. ನಮ್ಮ ಕಾಲ ಕೆಳಗೆ ಅಗಾಧವಾದ ಕಾಲ ಸದ್ದಿಲ್ಲದೆ ಸರಿದುಹೋಗಿದೆ. ನಮಗದರ ಪರಿವೆಯೇ ಇಲ್ಲ. ಕಾಲಚಕ್ರಕ್ಕೆ ಅದೆಂಥಾ ಹರಿತವಾದ ಹಲ್ಲುಗಳು? ನೋಡನೋಡುತ್ತಿದ್ದಂತೆಯೇ ಮೂಗಿನ ಮೇಲೆ ನಿರ್ದಾಕ್ಷಿಣ್ಯವಾಗಿ ಕನ್ನಡಕ ಹತ್ತಿ ಕುಳಿತಿದೆ. ಮೀಸೆಯಲ್ಲಿ ಬೆಳ್ಳಿ ಕೂದಲು ಮಿಂಚುತ್ತವೆ. ಇದನ್ನೇ ಕಾಲದೊಂದಿಗೆ ಕಾಲು ಹಾಕಿ ಸ್ಪಂದಿಸುವ ಶರೀರ ಧರ್ಮವೆನ್ನಬೇಕು. ಒಪ್ಪಿಕೊಳ್ಳದೆ ವಿಧಿಯಿಲ್ಲ.

ಸಮುದ್ರದೊಳಗಿದ್ದೂ ಕುಡಿಯಲಾಗದ ನೀರಿನಂತೆ, ಜನಸಂದಣಿಯಲ್ಲಿದ್ದೂ ಬಹುತೇಕರಿಗೆ ಒಂಟಿತನ ಕಾಡುತ್ತದೆ. ತುಸು ಆತ್ಮವಿಮರ್ಶೆ ಮಾಡಿಕೊಂಡರೆ, ನಾವು ನಗರಿಗರು ಎಲ್ಲ ಇದ್ದೂ ದಿಕ್ಕಿಲ್ಲದ ಪರದೇಶಿಗಳಂತೆ ಪ್ರಲಾಪಿಸುವುದು ವಾಡಿಕೆ. ಒಂದು ನಮೂನಿ ಬೆಂಗಳೂರಿನ ಬೇವಾರಿಸಿಗಳಾಗಿ ತೋರುತ್ತೇವೇನೋ - ಮನೋವಿಜ್ಞಾನಿಗಳೇ ಪರಾಮರ್ಶಿಸಬೇಕು. 'ಪ್ರಪಂಚ ಹುಚ್ಚರ ಸಂತೆ' ಎಂದು ಬಹಳ ಹಿಂದೆಯೇ ಭಾರತೀಯ ಸಾಧುಸಂತರು ಸಾರಿದ್ದಾರೆ. ಆ ಮಾತಿನ ಸಾಕ್ಷಾತ್ ದರ್ಶನ ಪಡೆಯಬೇಕೆಂದರೆ ನಮ್ಮ ಬೆಂಗಳೂರಿನ ಯಾವುದಾದರೊಂದು ನಾಕು ರಸ್ತೆ ಸೇರುವ ಕೂಟದಲ್ಲಿ ನಿಂತರೆ ಸಾಕು. ಗ್ರೀನ್ ಸಿಗ್ನಲ್ ಬೀಳುವುದೇ ತಡ, ಮುಂದಿದ್ದ ವಾಹನ ಕದಲಲು ಎರಡು ಸೆಕೆಂಡು ತಡವರಿಸಿದರೆ ಸಾಕು ಹಿಂದಿದ್ದ ವಾಹನಗಳು ಹಾರ್ನ್ ಹೊಡೆದುಕೊಳ್ಳುತ್ತ ಬೊಂಬಟಾ ಬಜಾಯಿಸುತ್ತಾರೆ.

ನಗರದಲ್ಲಿ ಅದೆಷ್ಟು ಜನ ಒತ್ತಡ ರೋಗಿಗಳಿದ್ದಾರಲ್ಲ ಎಂಬ ಲೆಕ್ಕ ಅಲ್ಲಿಯೇ ಸಿಗುತ್ತದೆ. 'ನಿಮ್ಹಾನ್ಸ್'ನಲ್ಲಿ ಸೇರಲು ಸ್ಥಳಾವಕಾಶವಿಲ್ಲದ್ದಕ್ಕೆ, ಹೊರಗಡೆಯೇ ಭ್ರಮಿಷ್ಟರ ಸಂಖ್ಯೆ ದೊಡ್ಡ ಪ್ರಮಾಣದಲ್ಲಿ ಇರುವುದು ಸಾಬೀತಾಗುತ್ತದೆ. 'ತಾಳಿದವನು ಬಾಳಿಯಾನು' ಎಂದು ಗಾದೆ ಹೇಳುವುದು ಸುಲಭ. ವೇಗದ ನಾಗರಿಕತೆಯಲ್ಲಿ, ಓಡುವ ಧಾವಂತದಲ್ಲಿರುವ ಮನುಷ್ಯನಿಗೆ ತಾಳುವ/ಬಾಳುವ ಸಹನಶೀಲ ಬದುಕು ಯಾರಿಗೆ ಬೇಕಾಗಿದೆ ಈಗ? ಮತ್ತದೇ ದಾಸರು ತಲೆ ತಿನ್ನುತ್ತಾರೆ : 'ಉತ್ತಮ ಪ್ರಭುತ್ವ ಲೊಳಲೊಟ್ಟೆ!'

'ಕಾಯ'ಬೇಕು ನಿಜ. ಅದಿಲ್ಲದಿದ್ದರೆ ಮನುಷ್ಯ ಭೂಮಿಯ ಮೇಲಿಂದಲೇ 'ಮಾಯ.' ದೇಹ ಬಿಟ್ಟರೆ ಇನ್ನೇನಿದೆ? ಎಲ್ಲದಕ್ಕೂ ಅದೇ ಮಾಧ್ಯಮ. ಕಾಯದಿಂದಲೇ ಎಲ್ಲ ಕಾಯಕ. ಅದರಿಂದಲೇ ಆದಾಯ, ಸುಖ ಪ್ರದಾಯ. ಕಾಯದ ಕಳವಳದಲ್ಲಿಯೇ ಬದುಕು ಕಳೆದು ಹೋಗುತ್ತದೆ. 'ಕಾಯ'ದ ಕಳವಳ ನೀಗುವುದರಲ್ಲಿಯೇ ನರ ನಾರಾಯಣನಾಗುತ್ತಾನಂತೆ. ವಾಹ್! ಎಂಥಾ ಜಿಜ್ಞಾಸೆ? ಎಲ್ಲದಕ್ಕೂ ಕಾಯಬೇಕು!

'ಬದುಕಿದ್ದು ಸಾಕಿನ್ನು' ಅನ್ನಿಸುವವರೆಗೂ ಕಾಯಬಾರದು. 'ಇನ್ನೂ ಇರಬೇಕಿತ್ತು' ಅನ್ನುವಾಗಲೇ ಪ್ರಪಂಚಕ್ಕೆ ವಿದಾಯ ಹೇಳಬೇಕು. ಆವಾಗಲೇ ಮನುಷ್ಯ ಜೀವಿತಕ್ಕೊಂದು ಬೆಲೆಯಿರುತ್ತದೆ, ನಿಜ. ಎಂಭತ್ತರ ವಯೋಮಾನದ ನಂತರ ದುರ್ಬಲ ದೇಹ ತನ್ನ ಸ್ವಾಧೀನತೆ ಕಳೆದುಕೊಂಡು ಪ್ರತಿಯೊಂದಕ್ಕೂ ಪರಾವಲಂಬಿಯಾಗುವ ಹಂಗಿನರಮನೆಯ ಬದುಕು ಯಾರಿಗೆ ಬೇಕು! ಎಂಭತ್ತರ 'ತುಂಬು ಬದುಕು' ಬಾಳೋದು ಒತ್ತಟ್ಟಿಗಿರಲಿ; ಇತ್ತೀಚಿಗೆ ಅರಳುವ ಮುನ್ನವೇ ತಮ್ಮನ್ನು ತಾವೇ ಹೊಸಕಿಕೊಳ್ಳುವ ಹದಿಹರೆಯದ ಎಳೆಜೀವಗಳು ಆತ್ಮಹತ್ಯೆಗೆ ಶರಣಾಗುವುದು ಅದೆಂಥಾ ಮೋಸ? ಸಾಮಾಜಿಕ ಬದುಕು ಎಲ್ಲೋ ಹದ ತಪ್ಪುತ್ತಿದೆ ಅಂತ ಅನ್ನಿಸುತ್ತಿಲ್ಲವೆ ನಿಮಗೆ!

**ಈರಪ್ಪ ಎಂ. ಕಂಬಳಿ**
ಉಪ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ, ವಿಶ್ವೇಶ್ವರಯ್ಯ ಕೇಂದ್ರ, ಪೋಡಿಯಂ ಬ್ಲಾಕ್,
ಡಾ|| ಅಂಬೇಡ್ಕರ್ ವೀಧಿ, ಬೆಂಗಳೂರು - ೫೬೦ ೦೦೧





## ಹಸಿರು ಹೆಜ್ಜೆ

ಮಾಧವ ಐತಾಳ್

**ಪುಟ :** ೧೪೮

**ಬೆಲೆ : ರೂ.** ೧೦೦

**ಋತ ಪುಸ್ತಕ,** ನಂ. ೮೯೧, ಮೊದಲ ಮಹಡಿ, ೩ನೇ ಎ ಮುಖ್ಯರಸ್ತೆ, ಡಿ ಬ್ಲಾಕ್, ೨ನೇ ಹಂತ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

'ವಿನಾಶಕಾಲೇ ವಿಪರೀತ ಬುದ್ಧಿ' - ಇಂಥ ಕಿವಿ ಮಾತನ್ನು ಕಿವಿಗೇ ಹಾಕಿಕೊಳ್ಳದೆ ಮನುಷ್ಯ ತನ್ನ ವಿಪರೀತ ಸೌಕರ್ಯಗಳಿಗಾಗಿ ತನ್ನ ಸುತ್ತಲ ಪರಿಸರವನ್ನು ಹಾಳುಗೆಡವಿದ್ದಾನೆ. ತನಗಿಂತ ಮೊದಲೂ ಈ ಭೂಮಿಯಿತ್ತು, ತಾನೂ ಅದಕ್ಕೆ ಸೇರಬೇಕಾದವನೆಂಬ ಸತ್ಯ, ವಿವೇಕ ನಮ್ಮ ಪೂರ್ವಿಕರಿಗೆ ಇತ್ತು. ಮನುಷ್ಯ ಎಷ್ಟೇ ಬುದ್ಧಿವಂತನಾದರೂ ವಿವೇಕ ಕಳೆದುಕೊಂಡಾಗ ಅಪಾಯ ಕಾದಿರುತ್ತದೆ. ಪರಿಸರ ಸಂರಕ್ಷಣೆಯ ಮಾತು ಇಂದು ಎಲ್ಲೆಡೆ ಬಲವಾಗಿ ಕೇಳಿಬರುತ್ತಿದೆ. ನಾವಿಂದು ನಮ್ಮ ಜೀವನಾಧಾರಗಳಾದ ನೆಲ-ಜಲ-ಗಾಳಿಗಳನ್ನೆಲ್ಲ ಕಲುಷಿತಗೊಳಿಸಿ ಅಭಿವೃದ್ಧಿಯ ನೆಪದಲ್ಲಿ ಹಲವಾರು ಸಮಸ್ಯೆಗಳನ್ನು, ನೈಸರ್ಗಿಕ ಆಪತ್ತುಗಳನ್ನು ಆಹ್ವಾನಿಸಿದ್ದೇವೆ. ಇದನ್ನು ಬುದ್ಧಿಪೂರ್ವಕ ಮಾಡಿದ್ದಲ್ಲವಾದರೂ ಏನೋ ಮಾಡಲು ಹೋಗಿ ಇನ್ನೇನೋ ಆಗಿದೆ. ಪ್ರಾಕೃತಿಕ ಸಂಪನ್ಮೂಲಗಳನ್ನು ದೋಚಿ ನಗರಗಳನ್ನು ಕಟ್ಟಿ ಮೆರೆಯುತ್ತಿರುವ ಮನುಷ್ಯ ಇಂದು ಹಾಳುಗೆಡವಿದ ಪರಿಸರದಲ್ಲೇ ಬದುಕಬೇಕಾದ ಅನಿವಾರ್ಯತೆಗೆ ಸಿಲುಕಿದ್ದಾನೆ. ಇದನ್ನೆಲ್ಲ ತಡವಾಗಿಯಾದರೂ ಅರಿತುಕೊಂಡು ಪರಿಸರ ಸಂರಕ್ಷಣೆಯ ಅಗತ್ಯಕ್ಕಾಗಿ ಜಾಗತಿಕ ಮಟ್ಟದಲ್ಲಿ ಜಾಗೃತಿ ಮೂಡಿಸಲು ಶೃಂಗಸಭೆ - ಸಮಾವೇಶಗಳು ನಡೆದಿವೆ. ಎಚ್ಚರಿಕೆಯ ಗಂಟೆ ಬಾರಿಸಲಾಗಿದೆ, ಕಳಕಳಿಯ ಮನವಿ ಮಾಡಲಾಗಿದೆ. ಶ್ರೀಮಂತಿಕೆಯ ಸುಖದ ಸವಿಕಂಡ ದೇಶಗಳು ಸ್ಪಂದಿಸುತ್ತಿಲ್ಲ. ಪ್ರಪಂಚದ ಎಲ್ಲರಿಗೂ ಸಂಬಂಧಿಸಿದ ಈ ಸಮಸ್ಯೆ ಬಗ್ಗೆ ಇಲ್ಲಿನ ಲೇಖನಗಳಲ್ಲಿನ ಮಾಹಿತಿ ತುಂಬ ಮುಖ್ಯ. ಮನುಷ್ಯ ಮಾಡಿದ ಹಾವಳಿ ಎಷ್ಟೆಂದು ಇಲ್ಲಿ ಓದಿ ನೋಡಿ !

## ಧೀಮತಿಯರು

ನಾಗಮಣಿ ಎಸ್. ರಾವ್

**ಪುಟ :** ೧೫೨ **ಬೆಲೆ : ರೂ.** ೯೫

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೭, ಬೆಂಗಳೂರು - ೫೬೦ ೦೦೧

ವಿವಿಧ ಕ್ಷೇತ್ರಗಳಲ್ಲಿ ತಮ್ಮ ಪ್ರತಿಭೆ ತೋರಿದ ನಮ್ಮ ನಾಡಿನ ಮಹಿಳಾ ಸಾಧಕಿಯರನ್ನು ಪರಿಚಯಿಸುವ ಅಪರೂಪದ ಪುಸ್ತಕ. ಅಡುಗೆ ಮನೆ-ಮದುವೆ ಮನೆ ಇಷ್ಟೇ ತಮ್ಮ ಪ್ರಪಂಚವೆಂದು ಆಕೆ ತಿಳಿದುಕೊಂಡ ಕಾಲವೊಂದಿತ್ತು. ಅವಳು ಹೊರಗೆ ಕಾಲಿಡುವುದು ಗಂಡನ ಜೊತೆಗೆ. ಇಂಥ ಸ್ಥಿತಿಯಿಂದ ವಿದ್ಯಾಭ್ಯಾಸದ ನೆರವಿನೊಂದಿಗೆ ಅವಳು ಒಂದು ಉನ್ನತ ಸ್ಥಾನ ಗಳಿಸಬೇಕಾದರೆ ಎದುರಿಸಿದ ಕಷ್ಟಕಾರ್ಪಣ್ಯಗಳು ಲೆಕ್ಕವಿಲ್ಲದಷ್ಟು. ಗೃಹಿಣಿಯಾಗಿದ್ದು ಮನೆಯ ಜವಾಬ್ದಾರಿಗಳೊಂದಿಗೆ ಸಾಹಿತ್ಯಕ್ಷೇತ್ರಕ್ಕೂ ಹೆಜ್ಜೆಯಿರಿಸಿ ಯಶಸ್ವೀ ಲೇಖಕಿಯರಾಗಿದ್ದು ಅದೆಷ್ಟೋ ಮಂದಿ. ಜೊತೆಗೆ ಸಾಮಾಜಿಕ ಜವಾಬ್ದಾರಿಯನ್ನರಿತುಕೊಂಡು ಸಮಾಜಸೇವೆಗೈದವರು, ಪತ್ರಿಕಾರಂಗ - ಆಕಾಶವಾಣಿ ಮುಂತಾದ ಕಛೇರಿಗಳಿಗೂ ಕಾಲಿಟ್ಟು ಸೈ ಎನಿಸಿಕೊಂಡವರು ಇಲ್ಲಿನ ಲೇಖನಗಳ ಮೂಲಕ ಪರಿಚಯವಾಗುತ್ತಾರೆ. ಒಂದೆರಡು ತಲೆಮಾರಿನ ಹಿಂದಿನವರ – ನಮ್ಮ ಕಣ್ಮುಂದಿನ ಇಂದಿನ ಬರಹಗಾರ್ತಿಯರ ವಿಚಾರಲಹರಿ ಸಂಗಮಿಸುವಂತೆ ಪರಸ್ಪರ ಸೆಳೆತವೊಂದು ಇಲ್ಲಿ ಮೂಡಿಬರುತ್ತಿದೆ. ಜೊತೆಗೆ ಸ್ತ್ರೀವಾದದ ಪ್ರಖರ ಕಿರಣಗಳನ್ನು ಹೊಮ್ಮಿಸುವಂತೆ ಕಾಣುವ ಸಾಧಕಿಯರ ಹೆಜ್ಜೆಗುರುತು ಮೂಡಿಸುವ ಪ್ರಯತ್ನದೊಂದಿಗೆ ಸೋಲು-ಗೆಲುವನ್ನೂ ಗಮನಿಸಬೇಕಾಗಿದೆ. ಇನ್ನು ಮುಖಪುಟ - ಆಹಾ, ಅಂತಃಚಕ್ಷುಗಳನ್ನು ತೆರೆದು ಬಾಹ್ಯದೃಷ್ಟಿಯ ಹಂಗಿಲ್ಲದೆ ಬುದ್ಧಿವಂತ ಮನಸ್ಸುಗಳೊಂದಾಗಿ ನಡೆಸುವ ಸಮ್ಮೇಳನದಂತಿರುವ ಚಿತ್ರವನ್ನು ರಚಿಸಿದ ಕಲಾವಿದ ಕಮಲಂ ಅರಸು ಕಲ್ಪನೆ ಅತ್ಯದ್ಭುತ ! ಇಲ್ಲಿ ಬುದ್ಧಿಭಾವಗಳನ್ನು ಅರಳಿದ ಹೂಗಳು ಪ್ರತಿನಿಧಿಸಿವೆ.




## ಕಮಲಾದೇವಿ ಚಟ್ಟೋಪಾಧ್ಯಾಯ (ಬದುಕು - ಸಾಧನೆ)

*ಕೊಂಕಣಿ ಮೂಲ : ಡಾ|| ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್; ಕನ್ನಡ ಅನು : ಡಾ|| ಗೀತಾ ಶೆಣೈ*

**ಪುಟ :** ೧೨೦ **ಬೆಲೆ : ರೂ.** ೭೦

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ದೇಶಕ್ಕಾಗಿ ಜೀವನವನ್ನೇ ಮುಡುಪಾಗಿಟ್ಟು ಸಮರ್ಪಣಾಭಾವದಿಂದ ರಾಷ್ಟ್ರೀಯ ಮಟ್ಟದಲ್ಲಿ ಸ್ವಾತಂತ್ರ್ಯ ಚಳುವಳಿಯ ಎಲ್ಲ ಮಜಲುಗಳಲ್ಲಿ ಪಾಲ್ಗೊಂಡ ಧೀರೋದಾತ್ತ ಮಹಿಳೆ ಕಮಲಾದೇವಿ ಚಟ್ಟೋಪಾಧ್ಯಾಯ. ಸ್ವದೇಶಿ ಆಂದೋಲನದ ಕಾವು ಮುಗಿಲುಮುಟ್ಟಿದ್ದ ಕಾಲವದು. ಸ್ವಯಂಸೇವಿಕೆಯಾಗಿ ಸೇವಾದಲದಲ್ಲಿ ಪ್ರವೇಶ ಪಡೆದು ಸಕ್ರಿಯ ರಾಜಕಾರಣಕ್ಕೆ ಧುಮುಕಿ ಹೋರಾಟಗಳಲ್ಲಿ ತೊಡಗಿಕೊಂಡರು. ಗಾಂಧೀಜಿಯವರನ್ನೂ ಒಳಗೊಂಡಂತೆ ಅಂದಿನ ರಾಜಕೀಯ ಮುತ್ಸದ್ದಿ-ದೇಶಪ್ರೇಮಿ ಧುರೀಣರೊಂದಿಗೆ ನಿಕಟ ಸಂಪರ್ಕವಿದ್ದ ಈಕೆ ಒದಗಿಬಂದ ದೇಶಸೇವೆಯ ಯಾವ ಅವಕಾಶವನ್ನೂ ಬಿಟ್ಟುಕೊಡಲಿಲ್ಲ. ಕಾಂಗ್ರೆಸ್ ಅಧಿವೇಶನದಲ್ಲಿ – ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದರು. ಧೈರ್ಯ- ಸಾಹಸ-ಛಲ-ಸ್ವಾಭಿಮಾನ ಧಮನಿ ಧಮನಿಗಳಲ್ಲೂ ಉಕ್ಕುತ್ತಿರುವಾಗ ಕಮಲಾದೇವಿಯಂತಹ ದೇಶಾಭಿಮಾನಿ ಮಹಿಳೆ ಹೇಗೆ ಸುಮ್ಮನಿರಲು ಸಾಧ್ಯ ? ಅವರು ವೈಯಕ್ತಿಕ ಸುಖ-ಸಂತೋಷಗಳನ್ನು ಬಲಿಗೊಟ್ಟರು. ಕಠಿಣ ಕಾರಾಗೃಹವಾಸ ಅನುಭವಿಸಿದರು. ಸಾರ್ವಜನಿಕ ಸೇವೆ ಅವರ ಪ್ರಥಮಾದ್ಯತೆ ಆಗಿತ್ತು. ಅವರ ಕುಟುಂಬಜೀವನ ಭಗ್ನಗೊಂಡಿತ್ತಾದರೂ ಅವರು ಅದನ್ನು ಸಂಘರ್ಷವನ್ನಾಗಿ ಎಂದೂ ಮಾರ್ಪಡಿಸಿರಲಿಲ್ಲ. ಪ್ರಚಾರದ ಭರಾಟೆಯಿಲ್ಲದೆ ತ್ಯಾಗಮನೋಭಾವದಿಂದ ಮಾಡಿದ ನಿಸ್ಪೃಹ ಸೇವೆಯನ್ನು ಗುರುತಿಸಿ ವಿವಿಧ ಪುರಸ್ಕಾರಗಳು ಇವರಿಗೆ ಸಂದಿವೆ. ಭಾರತ ಸರಕಾರದ ಪದ್ಮಭೂಷಣ, ಪದ್ಮವಿಭೂಷಣ ಪ್ರಶಸ್ತಿಗೆ ಭಾಜನರು. ಇವರ ಬಗ್ಗೆ ಸುಲಭ ಲಭ್ಯವಲ್ಲದ ಅಮೂಲ್ಯ ಮಾಹಿತಿಗಳನ್ನು ಶ್ರಮವಹಿಸಿ ಸಂಗ್ರಹಿಸಿ ಜೀವನ-ಸಾಧನೆಗಳನ್ನು ಕೊಂಕಣಿ ಭಾಷೆಯಲ್ಲಿ ಬರೆದವರು ಜ್ಯೋತ್ಸ್ನಾ ಕಾಮತ್ ಹಾಗೂ ಕನ್ನಡಕ್ಕೆ ಅನುವಾದಿಸಿದ ಗೀತಾ ಶೆಣೈ ಅವರ ಸಾಧನೆಯೇನೂ ಕಡಿಮೆಯದಲ್ಲ.

## ಜವನಕ್ಕ (ಕಾದಂಬರಿ)

ಎನ್. ಬೋರಲಿಂಗಯ್ಯ

**ಪುಟ :** ೨೩೨ **ಬೆಲೆ : ರೂ.** ೧೫೦

**ದಾರಿದೀಪ ಪ್ರಕಾಶನ,** ೪೪, ೮ನೇ ಮುಖ್ಯರಸ್ತೆ, ೧೨ನೇ ಅಡ್ಡರಸ್ತೆ, ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತಿಪುರಂ, ಮೈಸೂರು - ೫೭೦ ೦೦೯




ಇಂದಿನ ನಮ್ಮ ಬದುಕಿನ ರೀತಿನೀತಿಗಳು ಶೀಘ್ರಗತಿಯಲ್ಲಿ – ಅಂದರೆ ಒಂದೆರಡು ತಲೆಮಾರಿನ ಅಂತರದಲ್ಲೇ ಸಂಪೂರ್ಣ ಬದಲಾಗಿದ್ದು ನಮ್ಮ ನಡವಳಿಕೆಯಿಂದ ತಿಳಿಯುತ್ತದೆ. ಕಣ್ಣಿಗೆ ರಾಚುವಂತೆ ಸಕಲವೂ ಪರಿವರ್ತನೆಗೊಂಡುದು ಏಕೆಂಬ ಪ್ರಶ್ನೆಗೆ ವಿಜ್ಞಾನ - ತಂತ್ರಜ್ಞಾನ - ನಾಗರಿಕತೆ ಮುಂತಾದ ಹಲವು ಹತ್ತು ಉತ್ತರಗಳು ಸಿಕ್ಕಾವು. ನೆಲ ಸಂಸ್ಕೃತಿಯ ಒಳ್ಳೆಯತನಗಳು ಕಣ್ಮರೆಯಾಗಿ ಪ್ರತಿಯೊಂದೂ ತನಗೆ ಬೇಕೆಂಬ ದಾಹ ಹೆಚ್ಚುತ್ತಿರುವ ಈ ದಿನಗಳಲ್ಲಿ ಈ ಕಾದಂಬರಿಯ ಮುಖ್ಯಪಾತ್ರ ಜವನಕ್ಕ ಮಾದರಿಯಾಗಬಲ್ಲಳು. ಗ್ರಾಮ ಸಮುದಾಯದ ಕುಟುಂಬಗಳು, ತಮ್ಮ ಪಾಲಿಗೆ ಬಂದ ಭೂಮಿ ಕಾಣಿಯನ್ನೇ ನಂಬಿಕೊಂಡು ದುರಾಸೆಯಿಲ್ಲದೆ, ಬದುಕುತ್ತಿದ್ದ ರೀತಿ, ಯಾರಾದರೂ ದಾರಿ ತಪ್ಪಿ ನಡೆಯುತ್ತಿದ್ದರೆ ಬುದ್ಧಿಹೇಳುವ ಹಿರಿಯರು, ಸಮಾಜದಲ್ಲಿನ ಅಶಕ್ತ, ಅಬಲೆ, ಬಡವರನ್ನು ಲೆಕ್ಕಾಚಾರಗಳಿಲ್ಲದೆ ಸಂಭಾಳಿಸಿಕೊಂಡು ಹೋಗುತ್ತಿದ್ದುದು – ಓಹ್, ಇದನ್ನೇ ಅಲ್ಲವೇ ನಾವಿಂದು ಬಯಸುತ್ತಿರುವುದು ? ಪತನಗೊಂಡ ನೈತಿಕ ಮೌಲ್ಯಗಳನ್ನು ನಾವು ಹುಡುಕುವುದು ಇಂಥ ತಳಹದಿಯಲ್ಲೇ ಅಲ್ಲವೆ ? ನಾವೇಕೆ ಅಂದು ನಮ್ಮದಲ್ಲದ, ನಮಗೆಟುಕದ, ನಮಗವಶ್ಯವೇ ಇಲ್ಲದ ಯಾವುದೋ ಒಂದನ್ನು ಹಿಂಬಾಲಿಸಿ ನೆಮ್ಮದಿ ಕಳೆದುಕೊಂಡೆವು ? ಈ ಕಾದಂಬರಿಯನ್ನೋದುವಾಗ ಇಂಥ ಪ್ರಶ್ನೆಗಳನ್ನು ನಮಗೆ ನಾವೇ ಕೇಳಿಕೊಳ್ಳುತ್ತೇವೆ. ಇಂದಿನ ತಂತ್ರಜ್ಞಾನ ನಮ್ಮ ಪ್ರಪಂಚವನ್ನೇ ಬದಲಿಸಿಬಿಡುವಷ್ಟು ಶಕ್ತವಾಗಿದೆ. ಜೊತೆಗೆ ಆತನನ್ನು ಸುಖದ ಸಾಮ್ರಾಜ್ಯಕ್ಕೆ ಎಳೆದಿದೆ. ಎಚ್ಚರ ತಪ್ಪಿ ಬಳಸಿದ್ದರಿಂದ ವಿನಾಶಕ್ಕೂ ಎಳೆದಿದೆ.

## ಮನದ ಮುಂದಣ ಆಸೆ (ಷೇಕ್ಸ್‌ಪಿಯರ್ ಮಹಾಕವಿಯ ಮ್ಯಾಕ್‌ಬೆತ್ ನಾಟಕದ ರೂಪಾಂತರ)

*ಪ್ರೊ|| ಸಂಪಿಗೆ ತೋಂಟದಾರ್ಯ*

**ಪುಟ : x + ೧೪೮ = ೧೫೮** **ಬೆಲೆ : ರೂ. ೧೨೦**

**ಕರ್ನಾಟಕ ಸಾಹಿತ್ಯ ಪರಿಷತ್ತು**, ೮೩/ಇ, ೧೫ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು - ೫೬೦ ೦೪೦

ಮಹಾಕವಿ ಷೇಕ್ಸ್‌ಪಿಯರ್‌ನ ನಾಟಕಗಳೆಂದರೆ ಜಗತ್ತಿನಾದ್ಯಂತ ಅದೇನೋ ಸೆಳೆತ, ಆಕರ್ಷಣೆ, ಮೆಚ್ಚುಗೆ. ರೂಪಾಂತರಗಳು, ಅನುವಾದಗಳು ಲೆಕ್ಕವಿಲ್ಲದಷ್ಟು ಬಂದಿವೆ. ಮನುಷ್ಯನ ಮನಸ್ಸೇ ಆತನ ಒಳಿತು-ಕೆಡುಕುಗಳಿಗೆ ಕಾರಣವೆಂದು ಅಂತಿಮವಾಗಿ ಸತ್ಯದರ್ಶನ ಮಾಡಿಸುವ ನಾಟಕಗಳವು. ಏಕಚಕ್ರಾಧಿಪತ್ಯವನ್ನು ಬಯಸುವ ಸಾಮ್ರಾಜ್ಯ ವಿಸ್ತರಣೆ, ಅದಕ್ಕಾಗಿ ರಕ್ತಪಾತಗಳು – ಇವೆಲ್ಲಾ ಮನುಷ್ಯನ ಸ್ವಾರ್ಥಪರ ಕೆಟ್ಟಯೋಚನೆಗಳು. ಆದರಿಂದ ಯಾರೋ ಒಬ್ಬ ರಾಜ ಸುಖ-ಸಂಪತ್ತನ್ನು ಗಳಿಸಿದರೂ ಅಂತರ್ಯದಲ್ಲಿ ಆತ ಸುಖಿ ಅಲ್ಲ. ಮನಸ್ಸಿನ ವಿಕಾರಗಳು, ದುರಾಸೆಗಳು ಎತ್ತರಕ್ಕೇರಿದಷ್ಟೂ ಅಧಃಪತನದ ಕಡೆ ಆತ ಇಳಿಯುತ್ತಿದ್ದಾನೆಂದು ಷೇಕ್ಸ್‌ಪಿಯರ್‌ನ ದುರಂತ ನಾಟಕಗಳು ನೀತಿಯನ್ನು ಹೇಳುತ್ತವೆ. ಪ್ರಸ್ತುತ ಕೃತಿ 'ಮ್ಯಾಕ್‌ಬೆತ್' ನಾಟಕದ ಪುನರ್‌ದರ್ಶನ. ನಮ್ಮಲ್ಲೂ ಮಾನವರು, ದೇವತೆಗಳು, ದಾನವರು ಪುರಾಣಗಳಲ್ಲಿನ ಪಾತ್ರಗಳು. ಹಿಂದೆ ಮೇಳಗಳು ದೊಡ್ಡಾಟ - ಬಯಲಾಟ ಎಂದು ಅಂತಹ ಪ್ರಸಂಗಗಳನ್ನಾಡುತ್ತಿದ್ದರು. ಇಲ್ಲಿಯೂ ಸಹ ಅಬ್ಬರದ ವಿಶೇಷ ಕುಣಿತದ ಪ್ರಕಾರಕ್ಕೆ ತಕ್ಕಂತೆ 'ಮ್ಯಾಕ್‌ಬೆತ್' ಅನ್ನು ರೂಪಾಂತರಿಸಿ ಅಣಿಗೊಳಿಸಲಾಗಿದೆ. ಅಲ್ಲಿನ ಪಾತ್ರಗಳಿಗೆ ಇಲ್ಲಿನ ಉಡುಗೆ-ತೊಡಿಗೆಯ ವೇಷ ಹಾಕಲಾಗಿದೆ. ಹಿಂದೆ ದೊಡ್ಡಾಟವಾಡಿಸಲು ಊರಿನ ಗಣ್ಯರು - ಅಭಿಮಾನಿಗಳು ಮುಂದೆ ಬಂದಂತೆ ಇದೀಗ ಖ್ಯಾತ ರಂಗ ನಿರ್ದೇಶಕರು ಇದನ್ನು ರಂಗವೇದಿಕೆಗೆ ತರಲು ಮನಸ್ಸು ಮಾಡಬೇಕಾಗಿದೆ. ಲೋಕಕ್ಕೆಲ್ಲ ಇಷ್ಟೊಂದು ನೈತಿಕ-ಮೌಲ್ಯಯುತ ಸಂದೇಶಗಳನ್ನು ನಾಟಕಗಳ ಮೂಲಕ ಬಿತ್ತರಿಸಿದರೂ ಕ್ರೌರ್ಯ ಇನ್ನೂ ಎಲ್ಲೆಲ್ಲೂ ವಿಜೃಂಭಿಸುತ್ತಿರುವುದೇಕೋ ಅಚ್ಚರಿಯ ವಿಷಯ.

## ಕನ್ನಡ ಸಾಹಿತ್ಯ ವಾಗ್ವಾದಗಳು

*ಡಾ|| ರಹಮತ್ ತರೀಕೆರೆ*

**ಪುಟ : x + ೨೨೦** **ಬೆಲೆ : ರೂ. ೧೨೦**

**ನಿರ್ದೇಶಕರು, ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ಬರೆದುದೆಲ್ಲ ಮೌಲಿಕವಾಗಿ, ಓದುಗ ತಲೆದೂಗುವಂತಹ ವಸ್ತುನಿಷ್ಠ ಬರವಣಿಗೆ ರಹಮತ್ ಅವರದು. ಕನ್ನಡದ ಶ್ರೇಷ್ಠ ಬರಹಗಾರರೆಂದು ಪ್ರಸಿದ್ಧರಾದವರ ಸಾಹಿತ್ಯಕೃತಿಗಳ ಬಗೆಗಿನ ವಿಮರ್ಶೆಗಳನ್ನು ಅವಲೋಕಿಸಿ ಈ ಕೃತಿ ರಚಿಸಲಾಗಿದೆ. ಕೃತಿಯೊಂದು ಪ್ರಕಟವಾದಾಗ ಪರ-ವಿರೋಧ ಅನಿಸಿಕೆಗಳು ವಿಮರ್ಶೆಯ ರೂಪದಲ್ಲಿ ಬಂದೇ ಬರುತ್ತವೆ. ಜಾತಿ-ಧರ್ಮ-ಮತಗಳ ಬಗ್ಗೆ ವಸ್ತುವಿದ್ದಾಗ ಅಥವಾ ಈಗಾಗಲೇ ಅಂಗೀಕೃತವೆಂದು ಪರಿಗಣಿಸಲಾದ ಮೌಲ್ಯ-ಸಿದ್ಧಾಂತಗಳ ವಿರುದ್ಧ ದನಿಯೆತ್ತಿದಾಗ ಪರಸ್ಪರ ವಾಗ್ವಾದ-ವಿವಾದ ತಾರಕಕ್ಕೆ ಏರುವುದೂ ಇದೆ. 'ಸೀತಾಯಣ'ದಂಥ ಕೃತಿಗಳು ಬಂದಾಗ ಹಲ್ಲೆಗಳೂ ನಡೆದಿವೆ. 'ಅನಾವರಣ', 'ಆನು ದೇವಾ ಹೊರಗಣವನು' ಕೃತಿಗಳು ಪ್ರಕಟವಾದಾಗಲೂ ವಿವಾದ - ಚರ್ಚೆ - ಖಂಡನೆ - ಪರ - ವಿರೋಧ ಮುಂತಾದವೂ ನಡೆದಿದ್ದವು. ಇವು ಸಾಹಿತ್ಯ ಸಂಘರ್ಷದ ರೂಪತಾಳಿ ಎಷ್ಟೋ ಮನಸ್ಸುಗಳು ಘಾಸಿಗೊಂಡು ಒಬ್ಬೊಬ್ಬರ ಚಿಂತನೆ ಒಂದೊಂದು ದಿಕ್ಕಿಗೆ ಹರಿದು ಓದುಗ ಕಂಗಾಲಾಗಿದ್ದೂ ಇದೆ. ಕುವೆಂಪು, ಮಾಸ್ತಿ, ಬೇಂದ್ರೆ, ತೇಜಸ್ವಿ, ಕಟ್ಟೀಮನಿಯವರಂತಹ ಪ್ರಗತಿಪರ - ನವ್ಯಸಾಹಿತಿಗಳ ಬರಹಗಳು ಸಾಕಷ್ಟು ವಿಮರ್ಶೆಗೆ ಒಳಪಟ್ಟಿವೆ. ಅವುಗಳ ಸ್ವರೂಪ ಹೇಗಿತ್ತು ಮತ್ತು ಸಾಹಿತ್ಯ ಸಂಘರ್ಷಕ್ಕೆ ಯಾವ ನೆಲೆಯಲ್ಲಿ ವೇದಿಕೆ ಸಿದ್ಧವಾಗಿತ್ತು ಎಂಬುದನ್ನೂ, ಮತ್ತೆ ಕೆಲವು ಚರ್ಚೆಗಳು ಆರೋಗ್ಯಕರವಾಗಿದ್ದು ಹೇಗೆ ಸೌಹಾರ್ದತೆ ಮೂಡಿತ್ತೆಂಬುದನ್ನೂ ಇಲ್ಲಿನ ಲೇಖನಗಳು ತಿಳಿಸುತ್ತವೆ. ವಾಗ್ವಾದಗಳೆಲ್ಲ ವಿವಾದಗಳಲ್ಲ ಎಂಬುದೂ ಇಲ್ಲಿ ಮುಖ್ಯವಾಗುತ್ತದೆ. ಇದೊಂದು ಮಥನವಷ್ಟೇ ಅಲ್ಲದೆ ಬರಹಗಾರರಿಗೊಂದು ಎಚ್ಚರಿಕೆಯೂ ಹೌದು.

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಸಾದರ ಸ್ವೀಕಾರ

**ಅಪರೂಪದ ಸಮಾಜಸೇವಕ ಹರೇಕಳ ಹಾಜಬ್ಬ**
ಇಸ್ಮತ್ ಪಜೀರ್
**ಪುಟ : ೫೬** **ಬೆಲೆ : ನಮೂದಿಸಿಲ್ಲ**
**ಕಾಂತಾವರ ಕನ್ನಡ ಸಂಘ (ರಿ.),** ಕಾಂತಾವರ - ೫೭೪ ೧೨೯, ಕಾರ್ಕಳ, ಉಡುಪಿ ಜಿಲ್ಲೆ

**ಅರಚುವ ಆಂಫಿಬಿಯನ್ ಮತ್ತು ಬುಸುಗುಟ್ಟುವ ರೆಪ್ಟೈಲ್**
ಶಾಂತಾರಾಮ ಸೋಮಯಾಜಿ
**ಪುಟ : ೯೦** **ಬೆಲೆ : ರೂ. ೫೦**
**ವಸಂತ ಪ್ರಕಾಶನ,** ನಂ, ೩೬೦, ೧೦ನೇ 'ಬಿ' ಮುಖ್ಯರಸ್ತೆ, ೩ನೇ ಬ್ಲಾಕ್ ಜಯನಗರ, ಬೆಂಗಳೂರು - ೫೬೦ ೦೧೧

**ಸಾವಿರ ಮುತ್ತುಗಳು** ಸಂ. : ಶಂಕರ ಎಂ. ಮುತ್ತಣ್ಣವರ
**ಪುಟ : ೮೦ + iv** **ಬೆಲೆ : ರೂ. ೬೦**

**ಆರೋಗ್ಯಕ್ಕೆ ಅಮೃತ** (ಚುಟುಕು ಸಂಕಲನ)
ಶಂಕರ ಎಂ. ಮುತ್ತಣ್ಣವರ
**ಪುಟ : ೬೪ + iv** **ಬೆಲೆ : ರೂ. ೫೦**

ಮೇಲಿನ ಎರಡು ಕೃತಿಗಳ ಪ್ರಕಾಶಕರು
**ಶ್ರೀ ರಾಮಕೃಷ್ಣ ಪ್ರಕಾಶನ, ಯಡಹಳ್ಳಿ,** (ಗಲಗಲಿ) - ೫೮೭೧೧೭, ಬೀಳಗಿ ತಾಲೂಕು, ಬಾಗಲಕೋಟ ಜಿಲ್ಲೆ

**ಸಾಹಿತ್ಯ ತತ್ತ್ವ** (Theory of Literature)
ಮೂಲ : ರೆನೆ ವೆಲಕ್, ಆಸ್ಟಿನ್ ವಾರೆನ್
ಭಾಷಾಂತರ : ಸಿಪಿಕೆ
**ಪುಟ : ೧೮೮** **ಬೆಲೆ : ರೂ. ೧೦೦**
**ತನು ಮನು ಪ್ರಕಾಶನ,** ಹೆಚ್.ಐ.ಜಿ. ೧೨೬೭, 'ಕಾವ್ಯಲೋಕ', ೧ನೇ ತಿರುವು, ೨ನೇ ಹಂತ, ಶ್ರೀರಾಂಪುರ ಬಡಾವಣೆ, ಮೈಸೂರು - ೨೩

**ಹಕ್ಕಿ ಚೆಲ್ಲಿದ ಬೀಜ** ಸಿ. ಎನ್. ರಾಮಚಂದ್ರ
**ಪುಟ : ೧೦೬** **ಬೆಲೆ : ರೂ. ೭೦**
**ಸುಮುಖ ಪ್ರಕಾಶನ,** ೧೭೪ಇ/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಟೋಲ್‌ಗೇಟ್, ಬೆಂಗಳೂರು - ೫೬೦ ೦೨೩

**ಜೀವಿ ವಚನ ಶತಕ** (ಗ – ಪದ್ಯ) ಡಾ|| 'ಜೀವಿ' ಕುಲಕರ್ಣಿ
**ಪುಟ : ೧೪೪** **ಬೆಲೆ : ರೂ. ೭೫**
**ಪುರೋಗಾಮಿ ಸಾಹಿತ್ಯ ಪ್ರಕಾಶನ,** ೪, ಪತ್ರಕರ್ತರ ಕಾಲೋನಿ, ಹುಬ್ಬಳ್ಳಿ - ೩೨

**ವೀರರಾಣಿ ಕಿತ್ತೂರು ಚೆನ್ನಮ್ಮ**
ಡಾ|| ಅರ್ಕಸಾಲಿ ವೃಷಭೇಂದ್ರಾಚಾರ್
**ಪುಟ : ೨೦೦** **ಬೆಲೆ : ರೂ. ೧೨೦**
**ದಾಮಿನಿ ಸಾಹಿತ್ಯ,** ನಂ. ೫೫೯, ೯ನೇ ಮುಖ್ಯರಸ್ತೆ, ಎಂ. ಸಿ. ಲೇಔಟ್, ವಿಜಯನಗರ, ಬೆಂಗಳೂರು - ೫೬೦ ೦೪೦

**ರವೀಂದ್ರನಾಥ ಠಾಕೂರ್‌ರ ಗೃಹ ಪ್ರವೇಶ** (ನಾಟಕ)
ಅನುವಾದ : ಶ್ರೀನಿವಾಸ್ ವಿ. ಸುತ್ರಾವೆ
**ಪುಟ : xvi + ೬೬** **ಬೆಲೆ : ರೂ. ೬೦**
**ದರ್ಪಣ ಪ್ರಕಾಶನ,** 'ಚಂದ್ರಕಿರಣ' ೭೯, ೨ನೆಯ ಅಡ್ಡರಸ್ತೆ, ೨ನೆಯ ಮುಖ್ಯರಸ್ತೆ, ಶಕ್ತಿನಗರ, ಧಾರವಾಡ - ೪

**ಪರಿಕಲ್ಪನೆ** ಬಿ. ಜಿ. ಸತ್ಯಮೂರ್ತಿ
**ಪುಟ : xii + ೧೬೮ = ೧೮೦** **ಬೆಲೆ : ರೂ. ೧೨೫**
**ಬಿ. ಜಿ. ಸತ್ಯಮೂರ್ತಿ,** ನಂ. ೫೩/೪, ಡಬ್ಲ್ಯು, ೨೩ನೇ ಅಡ್ಡರಸ್ತೆ, ಸೋಮೇಶ್ವರ ಬಡಾವಣೆ (ಕೆಂಪಮ್ಮ ದೇವಸ್ಥಾನದ ಹಿಂದೆ), ಹುಳಿಮಾವು, ಬನ್ನೇರುಘಟ್ಟ ರಸ್ತೆ, ಬೆಂಗಳೂರು - ೫೬೦ ೦೭೬

**ಕಂಗುಂದಿಕುಪ್ಪಂ ಬೀದಿ ನಾಟಕಗಳು ಶಾಸ್ತ್ರಾನುಶೀಲನೆ**
ತೆಲುಗು ಮೂಲ : ಡಾ|| ಆರ್. ವಾಸುದೇವ ಸಿಂಗ್
ಕನ್ನಡಕ್ಕೆ : ಡಾ|| ಅರ್ಕಸಾಲಿ ವೃಷಭೇಂದ್ರಾಚಾರ್
**ಪುಟ : ೩೦೬** **ಬೆಲೆ : ರೂ. ೧೮೦**
**ನಿರ್ದೇಶಕರು, ಪ್ರಸಾರಾಂಗ,** ದ್ರಾವಿಡ ವಿಶ್ವವಿದ್ಯಾಲಯ, ಶ್ರೀನಿವಾಸವನಂ, ಕುಪ್ಪಂ - ೫೧೭ ೪೨೬

**ಸ್ವಾತಂತ್ರ್ಯೋತ್ತರ ಕನ್ನಡ ಹಾಗೂ ತೆಲುಗು ಕಾವ್ಯಗಳಲ್ಲಿ ಸಾಮಾಜಿಕ ಪ್ರಜ್ಞೆ** ಡಾ|| ಅರ್ಕಸಾಲಿ ವೃಷಭೇಂದ್ರಾಚಾರ್
**ಪುಟ : xxii + ೬೧೦ = ೬೩೨** **ಬೆಲೆ : ರೂ. ೪೮೦**
**ಭಾಗ್ಯಶ್ರೀ ಎಂಟರ್‌ಪ್ರೈಸಸ್,** ನಂ. ೫೫೯/೧, ೯ನೇ ಮುಖ್ಯರಸ್ತೆ, ಎಂ. ಸಿ. ಬಡಾವಣೆ, ವಿಜಯನಗರ, ಬೆಂಗಳೂರು - ೫೬೦ ೦೪೦

**ಸ್ಫಟಿಕದ ಶಲಾಕೆಯಂತೆ** (ಸಂದರ್ಶನಗಳು)
ಶ್ರೀನಿವಾಸ ಜೋಕಟ್ಟೆ
**ಪುಟ : ೩೬೮ + iv** **ಬೆಲೆ : ರೂ. ೧೯೦**

**ತೀರದ ಮರಳ ಕಣಗಳು** (ತರಹೇವಾರಿ ಬರೆಹಗಳು)
ವಿ. ಗ. ನಾಯಕ
**ಪುಟ : viii + ೨೧೪ + iv** **ಬೆಲೆ : ರೂ. ೧೧೫**

ಮೇಲಿನ ಎರಡು ಕೃತಿಗಳ ಪ್ರಕಾಶಕರು
**ಶ್ರೀನಿವಾಸ ಪುಸ್ತಕ ಪ್ರಕಾಶನ,** ನಂ. ೧೬೪/ಎ, ಮೊದಲನೇ ಮಹಡಿ, ಎಂ.ಆರ್.ಎನ್. ಬಿಲ್ಡಿಂಗ್, ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

# 'ಹೋಳಿ' ಶೃಂಗಾರದ ತುತ್ತು

ಶ್ರೀಮಂತ ಎಸ್. ಮೇತ್ರಿ

ಭಾರತೀಯರ ಎಲ್ಲಾ ಹಬ್ಬಗಳಂತೆ ಹೋಳಿ ಹಬ್ಬವು ಪ್ರಮುಖವಾಗಿದೆ. ಇದು ಫಾಲ್ಗುಣ ಮಾಸದಲ್ಲಿ ಹಾಗೂ ಸಂವತ್ಸರದ ಕೊನೆಗೆ ಬರುತ್ತದೆ. ಹಲವು ಹಬ್ಬಗಳು ತಮ್ಮದೇ ಆದ ವೈಶಿಷ್ಟ್ಯ ಹೊಂದಿರುವಂತೆ ಹೋಳಿ ಹಬ್ಬವೂ ಕೂಡ ತನ್ನದೆ ಆದ ವೈಶಿಷ್ಟ್ಯವನ್ನು ಹೊಂದಿದೆ. ಹಲವು ಪ್ರದೇಶಗಳ ಉದ್ದಗಲಕ್ಕೂ ಈ ಹಬ್ಬವನ್ನು ವೈವಿಧ್ಯಮಯವಾಗಿ, ಸಡಗರ ಸಂಭ್ರಮದಿಂದ ಆಚರಿಸಿದರೂ, ಆಯಾ ಪ್ರದೇಶಕ್ಕೆ ತಕ್ಕಂತೆ ವಿವಿಧ ಹೆಸರುಗಳಲ್ಲಿ ವ್ಯಕ್ತವಾದರೂ ಅದರ ಆಚರಣೆಯ ಉದ್ದೇಶ ಒಂದೇ ಆಗಿರುತ್ತದೆ. ಇದನ್ನು 'ಹೋಳಿ', 'ಹೋಲಿ', 'ಹೋಲಿಕಾ', 'ಹೋಲಿಕಾ ದಹನ', 'ಕಾಮದಹನ', 'ಬಣ್ಣದ ಹಬ್ಬ', 'ವಸಂತೋತ್ಸವ' ಎನ್ನುವ ಹಲವಾರು ಹೆಸರುಗಳಲ್ಲಿ ಕರೆಯುತ್ತಾರೆ. ಇಲ್ಲಿ ಹಲವಾರು ಭಾಷೆಗಳ ಸಂಗಮವಿರುವುದರಿಂದ ಹೆಸರುಗಳಲ್ಲಿಯೂ ಕೂಡ ಹಿಂದಿ, ಉರ್ದು ಮುಂತಾದ ಭಾಷೆಗಳ ಮಿಶ್ರಣ ಕಾಣಿಸುತ್ತದೆ. ಎಲ್ಲಾ ಜಾತಿಯ ಜನಾಂಗಗಳು ಭೇದವಿಲ್ಲದೆ ಬಣ್ಣದ ಓಕಳಿಯನ್ನು ಸಡಗರದಿಂದ ಆಚರಿಸುತ್ತಾರೆ. ಬೆಳಗಾವಿ ಜಿಲ್ಲೆಯ ಕಡೆ (ಶಿರಗಾಪುರದಲ್ಲಿ) 'ಹೋಳಿ' ಜಾತ್ರೆಯೂ ನಡೆಯುತ್ತದಂತೆ. ಶಿವನು ತನ್ನ ತಪಸ್ಸನ್ನು ಭಗ್ನಗೊಳಿಸಿದ ಕಾಮದೇವನನ್ನು ಹಣೆಗಣ್ಣಿನಿಂದ ಸುಟ್ಟು ಬೂದಿ ಮಾಡಿದ್ದರ ಪ್ರತೀಕ ರತಿಯ ಪ್ರಲಾಪದ ಪೌರಾಣಿಕ ಹಿನ್ನೆಲೆಯಲ್ಲಿ ಹಬ್ಬದ ಆಚರಣೆಯನ್ನು ಜನಪದರು 'ಹುಣ್ಣಿಮೆ' ಮತ್ತು 'ಬೂದಿ' ಎಂದು ಎರಡು ದಿನಗಳವರೆಗೆ ವೈಭವದೊಂದಿಗೆ ಆಚರಿಸುತ್ತಾರೆ. ವಿವಿಧ ಬಗೆಯ ತಿಂಡಿ-ತಿನಿಸುಗಳನ್ನು ಮಾಡಿ ತಿನ್ನುತ್ತಾರೆ.

ಜನಪದರು ಆಚರಿಸುವ ಹೋಳಿಯ ಹಬ್ಬಗಳಲ್ಲಿ ಅನೇಕ ಹಾಡುಗಳನ್ನು ಬಣ್ಣ ಆಡುತ್ತ, ಬೊಬ್ಬೆ ಹೊಡೆಯುತ್ತ, ಮನೋರಂಜನೆಯನ್ನು ಅನುಭವಿಸುತ್ತ ಸ್ನೇಹಿತರೆಲ್ಲರೂ ಕೂಡಿ ಹಾಡುವ ಅನೇಕ ಹಾಡುಗಳು ನಮಗೆ ಸಿಗುತ್ತವೆ. ಹೋಳಿಯ ಪದಗಳು ವೈವಿಧ್ಯಪೂರ್ಣವಾಗಿವೆ. ಅವುಗಳು ತ್ರಿಪದಿಯಾಗಿ, ಚೌಪದಿಯಾಗಿ, ಲಾವಣಿಯಾಗಿ, ದುಂದುಮೆ ಹಾಡುಗಳಾಗಿ ಮತ್ತು ಕೋಲಾಟದ ಹಾಡುಗಳಾಗಿ ಈ ಹಬ್ಬದಲ್ಲಿ ಬೈಯುವುದು, ಅಶ್ಲೀಲ ಪದಗಳ ಬಳಕೆ ಪ್ರಧಾನವಾಗಿ ತೋರುತ್ತದೆ. ಇಲ್ಲಿ ಅಶ್ಲೀಲತೆ ಹೆಚ್ಚಾಗಿ ಇರುವುದರಿಂದಾಗಿ ಗಂಡಸರು ಕಾಣುತ್ತಾರೆಯೇ ಹೊರತು ಹೆಂಗಸರು ಅಷ್ಟಾಗಿ ಇರದಿದ್ದರೂ ಈಗಿನ ಹೆಂಗಸರೂ ಕೂಡ ಬಣ್ಣದೋಕುಳಿ ಆಡಿ ಮನೋರಂಜನೆಗಾಗಿ ಹೋಳಿಯನ್ನು ಆಚರಿಸುತ್ತಾರೆ.

ಈ ಹೋಳಿ ಹಾಡುಗಳಲ್ಲಿ ಕರುಣಾರಸ, ಭಕ್ತಿರಸ, ವೀರರಸ ಪ್ರಧಾನವಾಗಿ ಕಂಡರೂ ಶೃಂಗಾರಕ್ಕೆ ಪ್ರಾಧಾನ್ಯತೆ ಸಿಕ್ಕಂತೆ ಕಾಣುತ್ತದೆ. ಹಾಡುಗನಿಗೆ ಹಾಡು ಹಾಡಿ, ಕೇಳಿ ಬೇಸರವಾದಂತೆ ಕಾಣುತ್ತದೆ. ಅಂದಹಾಗೆ ಅವನು ಸಹಜವಾಗಿಯೆ ಶೃಂಗಾರದ ಮೊರೆ ಹೋಗಿ ವರ್ಣಿಸಲು ಪ್ರಾರಂಭಿಸಿದ. ಇಲ್ಲಿ ಸಹಜ ಶೃಂಗಾರ, ಸಂಭೋಗ ಶೃಂಗಾರ, ವಿಪ್ರಲಂಭ ಶೃಂಗಾರಗಳ ಎಲ್ಲೆಯನ್ನು ಮೀರಿ ಅಶ್ಲೀಲಕ್ಕೂ ಕೈ ಹಾಕಿದ್ದಾನೆ. ಆದರೆ ಇಲ್ಲಿ ಅವನ ಸಹಜ ಭಾವನಾ ಪ್ರತಿಭೆಗೆ ಒಲಿದ ಉಸಿರು ವರ್ಣಪದಗಳಾಗಿ ಹೊರಹೊಮ್ಮಿವೆ.

ಜಾನಪದ ಕವಿ ಶಿಷ್ಟ ಕವಿಗೆ ಮಣಿದಿಲ್ಲ, ಏಕೆಂದರೆ ಪ್ರಕೃತಿಯ ಮಡಿಲಲ್ಲಿ ಕೂಸಾಗಿ ಅನುಭವಿಸಿದ್ದನ್ನು ಸಹಜವಾಗಿ ಹಾಡಿದ್ದಾನೆ. ಆದರೆ ಶಿಷ್ಟ ಕವಿ ಜಾನಪದೀಯನ ನೆರಳಲ್ಲಿ ನಡೆದು ತಿಣುಕಿ ಬರೆದು ಹೆಸರು ಮಾಡಿಕೊಳ್ಳಲು ಬೆನ್ನುಬಿದ್ದಾತ. ಜಾನಪದ ಕವಿ ಕುಂದಗೋಳ ಬಸಲಿಂಗ ರಚಿಸಿದ ಸಾಮಾನ್ಯ ವರ್ಣನೆ 'ಕೃಷ್ಣಗೊಲ್ಲತಿಯರ' ಸನ್ನಿವೇಶದಲ್ಲಿ ಹೀಗೆ ವರ್ಣಿಸಿದ್ದಾನೆ:

*ವಾಣಿಯ ವರದ ಕಲ್ಯಾಣಿಯ ಘನತರ*
*ವೀಣೆಯ ಕಡುಚೆಲ್ವ ಪಾಣಿಯಳ। ಸುಖ*
*ಶ್ರೇಣಿಯ ಅತಿ ಮೃದುವಾಣಿಯಳ। ಫಣಿ*
*ವೇಣಿಯ ಕರಚೆಲ್ವ ಜಾಣೆಯಳ। ಸುಪ್ರ*
*ವೀಣೆಯ ಬ್ರಹ್ಮನ ರಾಣಿಯ ಅತಿವಿದ್ಯ*
*ತ್ರಾಣೆಯ ಬಿಡದಿಂಥ ಚೂಣಿಯ ಪೊಗಳ್ವೆ ॥*

ಪ್ರತಿಭೆ ಇದ್ದರೆ ಅವನ ಮೋಡಿಗೆ ಬಗ್ಗದ ವಸ್ತು ಯಾವುದೂ ಇಲ್ಲ. ಇಂಥ ಅಗಾಧವಾದ ವರ್ಣನೆಗೆ ಅವನಲ್ಲಿರುವ ಪ್ರತಿಭೆಯೆ ಕಾರಣವಾಗಿದೆ. ಶಿಷ್ಟ ಕವಿಗಿಂತ ನಾವೇನು ಕಡಿಮೆ ಇಲ್ಲವೆಂದು ತೋರಿಸಿದ್ದಾನೆ ಜಾನಪದ ಕವಿ:

*ಅಕ್ಷರ ಕಲಿತಿಲ್ಲ ಬಳಪವ ಹಿಡಿದಿಲ್ಲ*
*ಶ್ರೀಗುರು ನಮಗ ಕಲಿಸಿಲ್ಲ॥ ಕೇಳ್ರಪ್ಪ*
*ಲೇಖನಿಕೀ ನಮಗ ಗೊತ್ತಿಲ್ಲ*

ಇಲ್ಲಿ ಯಾರಿಂದಲೂ ಕಲಿತಿಲ್ಲ, ಯಾರೂ ಕಲಿಸಿಲ್ಲ, ಲೇಖನಿ ಕೂಡ ನಮಗೆ ಗೊತ್ತಿಲ್ಲ ಎನ್ನುವ ಮಾತು ಕಟು ಸತ್ಯವಾಗಿದೆ. ಅವನ ಅನುಭವವೇ ಅವನ ಗುರುವಾಗಿದೆ. ಅವನ ಸಹಜ ಪ್ರತಿಭೆಯೇ ಅವನ ಕಾವ್ಯವಾಗಿದೆ. ಹರಿವ ನೀರಿನಂತೆ ಶುದ್ಧ ಮನಸ್ಸು ಅವನದಾಗಿರುವುದರಿಂದಲೆ ಬಹು ಸುಂದರವಾದ, ಶಬ್ದದೋಷವಿರದ ಹಾಡುಗಳನ್ನು ಹಾಡಿದ್ದಾನೆ. ಇಂಥ ಒಂದು ತ್ರಿಪದಿಯಲ್ಲಿ ತನ್ನ





ಆಂತರಿಕ ಭಾವನೆ ಬಿಚ್ಚಿಟ್ಟು ತನ್ನತನವನ್ನು ಮರೆದಿದ್ದಾನೆ.

*ಆನಿಗಂಬಾರಿ ಚಂದ ಕುದುರಿಗಿ ಥಡಿ ಚಂದ।*
*ಸದರಿಗಿ ಚಂದ ಕಾಮಣ್ಣ। ಬಗಲಾಗ*
*ರೂಪಕ ಚಂದ ರತಿದೇವಿ*
*ಹೊರಳ್ಯಾಡಿ ಆಳಬ್ಯಾಡ ಎರವಾದ ಕಿಚ್ಚಿಗಿ।*
*ಕರೆದಾಗ ಬರುವೆ ರತಿದೇವಿ। ಮನದಾಗ*
*ಚಿರವಂತ ಕಾಮ ನೆನೆದಾಗ॥*

– ಎಂದರೆ ಇಲ್ಲಿ ಗಂಡು ಬಿಟ್ಟು ಹೆಣ್ಣಿಲ್ಲ, ಹೆಣ್ಣು ಬಿಟ್ಟು ಗಂಡಿಲ್ಲ, ಒಂದಕ್ಕೊಂದು ಅನ್ಯೋನ್ಯವಾದ ಸಂಬಂಧ ಹೊಂದಿವೆ. ಒಂದು ನಾಣ್ಯದ ಎರಡು ಮುಖಗಳಿದ್ದಂತೆ ಎನ್ನಬಹುದು. ಸದಾ ಕಾಲ ಜಾಗರೂಕತೆಯಲ್ಲಿರುವ ಕಾಮವು ರತಿಯನ್ನು ನೆನೆದಾಗ ಆಕೆಯನ್ನು ಹಂಬಲಿಸಿದಾಗ ಸಿದ್ಧವಾಗಿರುತ್ತದೆನ್ನಬಹುದು. ಇಲ್ಲಿ ಹೆಣ್ಣಿನ ಮತ್ತು ಗಂಡಿನ ಎರಡರ ವರ್ಣನೆ ಬರುತ್ತದೆ. ಕಾಮಿನಿ, ಭಾಮಿನಿ, ಶಿರೋಮಣಿ, ಸುಂದರಿ, ಸುಗುಣ, ಸುಗುಣಿ, ರತಿ, ಮನ್ಮಥ, ರಮಣಿ, ಚಿಗರಿಹೆಣ್ಣು ಮುಂತಾದ ಹೆಸರುಗಳು ಇಲ್ಲಿ ಜಾನಪದ ಕವಿಗಳು ಬಳಸಿರುವುದನ್ನು ಕಾಣುತ್ತೇವೆ. ಇದು ಗಂಡಸರ ಹಬ್ಬವಾಗಿರುವುದರಿಂದ ಹೆಚ್ಚಾಗಿ ಹೆಣ್ಣಿನ ವರ್ಣನೆ, ಆಕೆಯ ಅಂಗಾಂಗದ ನಡೆ, ನುಡಿ, ಪ್ರತಿಯೊಂದು ಕೂಡ ಶೃಂಗಾರದ ರಸದ ತುತ್ತಾಗಿವೆ. ಹೆಚ್ಚುಹೆಚ್ಚಾಗಿ ಸಹಜ ಶೃಂಗಾರಕ್ಕಿಂತಲೂ 'ಸಂಭೋಗ ಶೃಂಗಾರ' ಮತ್ತು 'ವಿಪ್ರಲಂಭ ಶೃಂಗಾರ' ಯಾವುದೇ ಮುಚ್ಚುಮರೆಯಿಲ್ಲದೆ ಸರಳವಾಗಿ ವರ್ಣಿಸಿದ್ದಾರೆ:

*ನಾರಿ ಸ್ವರೂಪಕ್ಕೆ ಸರಿ*
*ಯಾರು ಇಲ್ಲ ಮರ್ತ್ಯದೊಳು*
*ತಾರೆಯೊಳಗೆ ಮೂಡಿದಂಥ*
*ಚಂದ್ರಾಮನಂಗಿರುವಳು*
*ಕನ್ನೆ ಪ್ರಾಯದ ಹೆಣ್ಣು ದೊಡ್ಡ*
*ಕಣ್ಣು ನಿಂಬಿ ಹೋಳಿನಂಗ*
*ಬಣ್ಣ ಬಂಗಾರ ವರ್ಣದಂತೆ*
*ಮೈಯ ಕಿರಣ ಹೊಳೆಯುತ*

– ಈ ಮೇಲಿನ ಹಾಡುಗಳಲ್ಲಿ ಜಾನಪದ ಕವಿಯು ನಾರಿಯ ಸರಿ ಯಾರೂ ಇಲ್ಲ; ತಾರೆಯೊಳಗಿನ ಚಂದ್ರಮನಂತೆ, ನಿಂಬಿಯ ಹೋಳಿನಂತೆ ಬಂಗಾರ ವರ್ಣದ ಕಿರಣದಂತೆ ಎನ್ನುವಲ್ಲಿ ಅಲಂಕಾರ ಕೂಡ ಉಪಯೋಗಿಸಿದ್ದಾನೆ.

ಉಡುರಾಜಮುಖಿಯಳೆ ಧ್ವನಿಗೇಳಿ ಕೋಗಿಲೆ
ಬಿಡದೆ ಹಾರಿದುದು ವನಾಂತರಕೆ। ಸಖಿ
ಮುಡಿ ಕಂಡು ನವಿಲು ಕಾನಾಂತರಕೆ। ಬಾಲೆ
ಜಡಿಗೆ ನಾಚುತಲಿ ಸರ್ಪನು ಹುತ್ತಕ್ಕೆ। ಇಂಥ
*ಕಡು ಚೆಲ್ವಮಡದಿಯ ತಡಿತೋಳ ಕಾಣುತ*
*ಬಿಡದೆ ಬಾಡುತ ಬಾಳಿವನ ಶಿರಬಾಗೆ*
*ದಂತವ ಕಂಡು ದಾಳಿಂಬರ ನಾಚುತ*
*ಚಿಂತಿಯಿಂದಲಿ ಬಾಯ ಬಿಟ್ಟಿಹುದು। ಮುಖ*
*ಕಾಂತಿಗೆ ಚಂದ್ರ ಕಪ್ಪಾಗಿಹುದು। ಭೃಂಗ*
*ಕುಂತಳ ಕಂಡು ಕಮಲದೊಳಿಹುದು। ಇಂಥ*
*ಪಂಥದ ನಾರಿಯಪ್ರಾಂತದೊಳಗೆ ಕಾಣೆ.*

ಆಕೆಯ ಬಂಗಾರದ ವರ್ಣದ ಕಿರಣ, ಧ್ವನಿ, ಚೆಲ್ವು, ಮೈಕಟ್ಟು, ದಂತ, ತುಂಬು ಯೌವನದ ಪ್ರಾಯದ ಕಾಂತಿಗಳೆಲ್ಲ ನೋಡಿ ಕೋಗಿಲೆ, ನವಿಲು, ಸರ್ಪ, ಬಾಳಿವನ, ದಾಳಿಂಬೆ ಎಲ್ಲವೂ ಸೋತು ಮೌನವಾಗಿ ಚಂದ್ರನು ಕಪ್ಪಾಗಿದ್ದಾನೆ. ಇಂಥ ಚೆಲ್ವಿಕೆಗೆ ಪ್ರಕೃತಿಯ ಜಲಚರಗಳೆಲ್ಲ ಸೋತದ್ದಾದರೆ ಭಾವನೆಯ ಏಣಿ ಏರುತ್ತಿರುವ ಪುರುಷ, ನವಯುವಕ ಹೇಗೆ ಸುಮ್ಮನಿರುತ್ತಾನೆ. ಆದಷ್ಟು ಆಕೆಯನ್ನು ಹೊಗಳಿ, ವರ್ಣಿಸಿ ಪ್ರೇಮದ ಬಲೆ ಬೀಸಿ ತನ್ನ ರತಿಕ್ರೀಡೆಗೆ, ಸರಸಕ್ಕೆ ಸಹಜವಾಗಿ ಮನ್ಮಥನ ಬಾಣಗೆ ಗುರಿಯಾಗಿಸಿ ಅವಳನ್ನು ಸೋಲಿಸುತ್ತಾನೆ.

*ಕೆನೆವಾಲು ಸಕ್ಕರೆ ಘೃತಗಳು ಇನಿತೆಲ್ಲ*
*ಘನ ಹರಿವಾಣದೊಳಿರಿಸಿದಳು। ಮೇಲೆ*
*ಗೊನೆಯ ಬಾಳಿಯ ಹಣ್ಣ ತಿನಿಸಿದಳು। ಬಾಳ*
*ಮನ ಹರುಷದಲಿ ಉಪಚರಿಸಿದಳು। ಬೇಗ*
*ಇನಿಯಗೆ ಕರ್ಪೂರ ವೀಳ್ಯವ ಕೊಟ್ಟಂತೆ*
*ಮನುಮಥನಾಟಕ್ಕೆ ಅನುವಿನಿಂ ನಡೆಯೆ*

## ಪ್ರತಿಕ್ರಿಯೆ

ಕಾಂಪೌಂಡೊಳಗೆ
ನುಸುಳಿದ್ದಕ್ಕೆ
ಕ್ಯಾಕರಿಸಿ
ಉಗಿದು
ಎಸೆದವಗೆ
ಮಣ್ಣುಹುಳದ
ತಣ್ಣನೆಯ
ಪ್ರತಿಕ್ರಿಯೆ
ವ್ಯಂಗ್ಯ ನಗು !

**ಮ. ಶ್ರೀ ಮುರಳಿ ಕೃಷ್ಣ**
೩೮, ೩ನೇ ಕ್ರಾಸ್, ರಾಜಗಾರ್ಡನಿಯಾ ಲೇಔಟ್
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು - ೬೧

ಗಂಡಸಿಗೆ ಮನಸೋತ ಆ ಹೆಣ್ಣು ಮನ್ಮಥನಾಟಕ್ಕಾಗಿ ಅನುವು ನೀಡಿ (ಒಪ್ಪಿಗೆ) ಸಕ್ಕರೆ, ಕೆನೆಹಾಲು, ಬಾಳೆಯ ಹಣ್ಣು, ಮನದ ಆಸೆ ಈಡೇರುವುದೆಂದು ಮನೆಗೆ ಹರುಷದಲ್ಲಿ ಇನ್ನಿತರ ಖಾದ್ಯ ಪದಾರ್ಥಗಳಿಂದ ಉಪಚರಿಸುತ್ತಾಳೆ. ಇಂಥದೆಲ್ಲವನ್ನು ಅನುಭವಿಸಿ ಆಕೆಯ ಮನಸ್ಸಿನ ಭಾವನೆ ಅರಿತು ಮಾಡಿದ ಉಪಚಾರಕ್ಕೆ ಮಣಿದು ತನ್ನ ಭಾವನೆಯನ್ನು ತಿಳಿಸುತ್ತಾನೆ:

*ಬಿಟ್ಟೇನು ನಾ ನಿನ್ನ ಆ ತ್ವಾಟ*
*ಬಂಗಾರ ಮುಂದೆ ಬತ್ತೀಸ ಕೂಟ ಕಳೆಗಾರಾ।*
*ಅಂತಿಗಂತ ಇದ್ಯೋ ನಿನ್ನ ಭ್ರಾಂತಿ ತೀರಲಿಲ್ಲೋ*
*ಗೆಳೆಯಾ ಸಂತೋಷ ಮಾಡಿ ಹೋಗೋ ಇಂದಿನ ರಾತ್ರಿ।*

ಏರು ಜವ್ವನದ ಆ ಯೌವನೆಯ ಮೇಲೆ ಒಂದಿಷ್ಟು ಸಂಶಯಪಟ್ಟಿರುವ ಯುವಕನ ಮನಸಿಗಾದ ನೋವನ್ನು ನಿವಾರಿಸುತ್ತಾಳೆ. ನಿನ್ನನ್ನು ನಾನು ತನುಮನವೆಲ್ಲ ಅರ್ಪಿಸುತ್ತೇನೆ. ಗೆಳೆಯ ಬತ್ತೀಸ ಕೂಟಗಳಿಗ ನೆರವೇರಿಸುತ್ತೇನೆ. ಎಷ್ಟೇ ಮಾಡಿದರೂ ನಿನ್ನ ಭ್ರಾಂತಿ ನನಗೆ ತೀರಲಿಲ್ಲ. ಇಂದಿನ ರಾತ್ರಿ ನಾವಿಬ್ಬರ ಏಕಾಂತದಲ್ಲಿ ಸಂತೋಷಪಡಿಸೋ ಗೆಳೆಯಾ ಎಂದು ಅಂಗಲಾಚುತ್ತಾಳೆ. ಮುಂದೆ ಈಕೆಯ ಬಯಕೆ ಕೂಡ ಈಡೇರುತ್ತದೆ. ತನಗಾದ ಸಂತೋಷವನ್ನು ಅವಳಿಂದಲೇ ಈ ಕೆಳಗಿನಂತೆ ಹೊರಹೊಮ್ಮಿದೆ.

''ಪ್ರೀತಿಯಿಂದ ನಿನ್ನಗೂಡ ನೀತಿಯಿಂದ ಆಡುವೆನು ಸೋತು ಬಾ(ರೆ)ರೋ ಸದನದೊಳು'' ಎನ್ನುವಂತೆ ಒಬ್ಬರಿಗೊಬ್ಬರು ಅರಿತುಕೊಂಡು ಬೆರೆತು ಬಾಳುವ ಬಾಳ್ವೆಯಲ್ಲಿ ಐಕ್ಯತೆಯ ಗಂಟು ಬಿಚ್ಚಿದಂತೆ ಬಾಳಿನ ಮರಕ್ಕೆ ಸಿಡಿಲು ಹೊಡೆದು ಸೀಳಿದಂತೆ ಪರಿತಪಿಸುವ ಆ ಜೀವಗಳು ಅಷ್ಟಿಷ್ಟಲ್ಲ. ಅವರೆಲ್ಲ ಸುರಿಸಿರುವ ಕಣ್ಣೀರೆಲ್ಲವೂ ಸೇರಿ ಸಮುದ್ರವೆಲ್ಲ ತುಂಬಿ ಉಪ್ಪಾಗಿರಬಹುದು.

*ನಾರಿಯು ಕಣ್ಮುಂದೆ ಸುಳಿದಂತಾಗಲು ಬಾಬಾ*
*ನೀರೆ ಎನ್ನುತ ಬಯಲಪ್ಪುವನು। ಸನ್ನಿ*
*ಏರಿದ ಮಾನ್ವರಂತೊಪ್ಪುವನು। ಚಿಂತೆ*
*ದೋರುತ ಭವಣೆಯೊಳಿಪ್ಪವನು। ಅರ್ಥ*
*ಧೈರ್ಯದೊಳ್। ಬಾಳವೀರ್ಯದೊಳ್।*
*ಕಾಮತೂರ್ಯ। ದೊಳ್*
*ಈ ರೀತಿ ವಿರಹದೊಳಿರಲಾಗ ರವಿ ತಾನು*
*ಭೋರನೆ ಪಡುವಣ ದೆಸೆಗೆ ಸೇರಿದನು*

ಮನಸ್ಸನ್ನು ನೀಡಿ ಮನಸ್ಸನ್ನು ಗೆದ್ದ ಆಕೆ ಅವನನ್ನು ತೊರೆದು ಹೋಗಿರಬಹುದು. ವಿನಾಕಾರಣದಿಂದ ಅಗಲಿರ ಬಹುದು. ಆದರೆ ಇಲ್ಲಿ ಅನುಭವಿಸಿದ ಅನುಭವಗಳು ಮರೆಯಲಾಗದು ಅವುಗಳೆಲ್ಲ ಮರುಕಳಿಸುತ್ತವೆ.

ಅವರು ಆಡಿದ ಆಟ, ಪ್ರೀತಿ, ಮಮತೆ, ತ್ಯಾಗ, ರಸಿಕತೆ, ಬಂಧನದ ಭಾವ, ಒಬ್ಬರಿಗೊಬ್ಬರು ನೀಡಿದ ಭಾಷೆಗಳೆಲ್ಲವೂ ಇಲ್ಲಿ ಮಸುಕಿನ ಮಬ್ಬಿನಲ್ಲಿ ಮಾಯವಾಗಿವೆ. ಈ ಮೇಲಿನ ವರ್ಣನೆಯಲ್ಲಿ ವಿಪ್ರಲಂಭ ಶೃಂಗಾರ ವ್ಯಕ್ತವಾಗಿದೆ. ಧೈರ್ಯವನ್ನು ಕಳೆದುಕೊಂಡು ಬಾಳನ್ನೆ ಸೊನ್ನೆಯಾಗಿಸಿಕೊಂಡು ಆಕೆಯ ವಿರಹದ ತಾಪದಲ್ಲಿ ಪರಿತಪಿಸುತ್ತಿರುವಾಗಲೆ ಅವನ ಬಾಳೆ ಕತ್ತಲೆ ಎನ್ನುವ ಸಂಕೇತದಲ್ಲಿ ಆ ಸೂರ್ಯ ಕೂಡ ಅಸ್ತನಾಗುತ್ತಾನೆ.

''ಆಗೋದಾಗಲಿ ಗೆಳೆಯಾ ಹೋಗಲಾರೆನು ನಾನು ಭೋಗ ಮಂದಿರವನು ಬಿಡಲಾರೆನು'' ಎನ್ನುವಂತೆ ''ಪರಿಪರಿ ಭೋಗದ ಅರಗಿಳಿ ನಿನ್ನಂಥ ಪ್ರಿಯ ಎಂದೆಂದೂ ಹುಟ್ಟಾಕಿಲ್ಲೊ ಗೆಣಿಯಾ'' ನಿನ್ನ ಬಿಟ್ಟು ಇರಲಾಗದು ಗೆಣಿಯ ಎಂದು ಪರಿತಪಿಸುವಲ್ಲಿ ಅವನದು ಕೂಡ ಅಗಲಿದ ಪ್ರಸಂಗವಿಲ್ಲಿ ಕಾಣುತ್ತದೆ. ಅರಗಿಳಿ, ಸುಗುಣೆ, ಸುಂದರಿ, ಭಾಮಿನಿ, ಮೋಹಿನಿ ಮುಂತಾದ ಸಂಬೋಧನಾ ಶಬ್ದಗಳಿಂದ ಹೊಗಳಿಸಿಕೊಂಡು ಒಮ್ಮಿಂದೊಮ್ಮೆಲೆ ದೂರವಾದರೆ ಗತಿಯೆಂತು ? ತುಂಬಿದ ದೇಹ ಕಣ್ಣಿಗೆ ಮಬ್ಬು ತರಿಸುವಂತಹದು. ವಿರಹದಿಂದಾಗಿ ಕರಗಿ ಸೊರಗಿ ಪೊರಕೆಯಂತೆ ಆಗಲೂ ತಡವಿಲ್ಲ, ಎಲ್ಲಾ ರೀತಿಯ ಶಬ್ದ ಸಂಗ್ರಹ ಕವಿಯಲ್ಲಿ ಇರುವುದರಿಂದ ಶೀಲಕ್ಕೆ ಧಕ್ಕೆ ತರದಂತೆ ನೋಡಿಕೊಂಡಿದ್ದಾನೆ.

*ಏನು ಮನಸ್ಸು ಮಾಡಿದೆನಲ್ಲ*
*ಅಂವಾ ಮನಿಗೆ ಬರುವಲ್ಲ*
*ಸಿಟ್ಯಾಕ ಸುಗುಣ ಎನ್ನಕಡಿ ತಪ್ಪಿಲ್ಲ*
*ಜರಾ ಸಂತೋಷ ಇಲ್ಲ*

ಪ್ರೀತಿಯಿಂದ ಆಕಿಗೆ ಏನೂ ಹೇಳದೆ ಅವನು ಅಗಲಿ ಹೋಗಿರಬೇಕು. ಆಕೆಯ ಮೇಲೆ ಸಿಟ್ಟಾಗಿರಬೇಕು ಅಥವಾ ಹತ್ತಿರವೆ ಇದ್ದುಕೊಂಡು ಆಕೆಯನ್ನು ಸ್ಪಂದಿಸದಂತೆ ದೂರವಿರ ಬೇಕು. ಅಂದಾಗಲೆ ಆಕೆ ಅವನನ್ನು ಪ್ರಶ್ನೆ ಮಾಡುತ್ತಾಳೆ. ''ನಾನೇನು ಮಾಡಿದ್ದೇನೆ. ಮನೆಗೆ ಏಕೆ ಬರುವಲ್ಲಿ ನನ್ನದೇನೂ ಕೂಡ ತಪ್ಪಿಲ್ಲ ನನಗೆ ಸ್ವಲ್ಪವೂ ಮನಸ್ಸಿಗೆ ನೆಮ್ಮದಿ ಇಲ್ಲ, ಜರಾನೂ (ಎಳ್ಳಷ್ಟು) ಸಂತೋಷವಿಲ್ಲ'' ಎನ್ನುತ್ತಾಳೆ. ಏಕೆಂದರೆ ಅವನ ಮೇಲಿನ ಹಂಬಲ ತೀರಿಲ್ಲ, ಅವನನ್ನು ಕಳೆದುಕೊಳ್ಳುವಂಥದ್ದು ಅವಳಿಗೆ ಬಂದಿಲ್ಲ.



# ಚರಿತ್ರೆ

ಚರಿತ್ರೆ ರೈಲು ಹಳಿಗಳಂತಲ್ಲ
ಒಂದರ ಮೇಲೆ ಇನ್ನೊಂದು
ಹರಿದು ಬಂದದ್ದು
ನೆಲದಿಂದ ಮೇಲೆದ್ದದ್ದು
ಮೇಲಿನದು ಕೆಳಗಿನದರ ಮೇಲೆ ಬಿದ್ದದ್ದು
ಒಂದು ಇತಿಹಾಸ
ಅದು ಸಿದ್ಧಾಂತ
ಇನ್ನೊಂದು ಪುರಾಣ
ಅದು ವೇದಾಂತ
ಪುರಾಣವನ್ನೇ ಇತಿಹಾಸವನ್ನಾಗಿಸಿದ್ದು
ಪುರಾಣದಲ್ಲಿ ಇತಿಹಾಸದ ಹುಡುಕಾಟ

ಚರ್ಮದಿಂದ ಚಪ್ಪಲಿ ಬಿಗಿದ ಚಮ್ಮಾರ
ತಲೆ ಸ್ವಚ್ಛಗೊಳಿಸಿದ ನಾವಲಿಗ
ಶುಚಿಗೊಳಿಸಿದ ಅಗಸ
ಬೀಜ ಫಲವಾಗಿಸಿದ ಹೊಲೆಯ
ಹಾಲು ಹೈನಾಗಿಸಿದ ಗೊಲ್ಲ
ಮಣ್ಣು ಮಡಿಕೆಯನ್ನಾಗಿಸಿದ ಕುಂಬಾರ
ಕಟ್ಟಿಗೆ ನೇಗಿಲವನ್ನಾಗಿಸಿದ ಬಡಿಗ
ಹಗ್ಗ ಹೊಸೆದ ಮಾದಿಗ
ತೊಟ್ಟಿಲ ತೂಗಿದ ನಾಗರಿಕರು
ನೇಗಿಲು ಸಾಲುಗಳ ಸಂಧಿ ಸಮಾಸಗಳಲ್ಲಿ
ಬೆವರು ಹರಿಬಿಟ್ಟು
ನವಿಲಿಗೆ ನಾಟ್ಯ ಕಲಿಸಿ
ಪಕ್ಷಿಗಳಿಂದ ಹಾಡು ಹಾಡಿಸಿ
ದನಕರುಗಳಿಗೆ ಗಂಟೆ ಕಟ್ಟಿ
ಸಂಸ್ಕೃತಿಯ ಪಲ್ಲವಿ ಹೇಳಿದವರು

ಇವರಿಗೆ ಸವತಿಯರ ಸೆಣಸಾಟ ಸಲ್ಲ
ಸಹೋದರರು ತೊಡೆ ತಟ್ಟಲಿಲ್ಲ
ಸೊಸೆಯಂದಿರು ಸೆರಗ ಹರಿಯಲಿಲ್ಲ
ಮನುಷ್ಯರ ಮೇಲೆ ದಂಡಯಾತ್ರೆ ಮಾಡಲಿಲ್ಲ
ವಾಲ್ಮೀಕಿ ರಾಮಾಯಣ ಬರೆಯುವಾಗ
ಕಲ್ಲೊಳಗೆ ಬೆಳಕು ಕಂಡವರು
ವ್ಯಾಸ ಭಾರತ ಬರೆಯುವಾಗ
ಶಿಲೆಗಳಿಗೆ ಜೀವ ತುಂಬಿದವರು
ಕೃಷ್ಣ ಗೀತೆ ಬೋಧಿಸಿ
ಒಡಹುಟ್ಟಿದವರನ್ನು ಛೂ ಬಿಟ್ಟಾಗ

ಮಣ್ಣಲ್ಲಿ ಬೆವರಿಳಿಸಿ
ಕೆಸರಿನಲ್ಲಿ ಚಿತ್ತಾರ ಬಿಡಿಸಿದವರು
ರಥಗಳಲ್ಲಿ ತಲೆ ಉರುಳುವಾಗ
ಎತ್ತುಗಳಿಗೆ ಮಾತು ಕಲಿಸಿದವರು

ಋಷಿಗಳು ಬಿಲ್ಲುಬಾಣಗಳ ಕಟ್ಟಿ
ತಲೆ ಕತ್ತರಿಸುವ ಪಾಠ ಹೇಳುವಾಗ
ಕೈಕಾಲು ಮೂಡಿಸಿದವರು
ಇವರೊಳಗಿನ ತಿಕ್ಕಲರು ಎಂಜಲಿಗೆ
ಭಾರತ ಬರೆಯುವಾಗ
ಭಾರತ ಕಟ್ಟಿದವರು
ಹಾದರದ ಮಗುವನ್ನು ಬಿಸಾಡಿದಾಗ
ಎತ್ತಿ ಘಡಕಿಯೊಳಗೆ ಸುತ್ತಿ
ಮುತ್ತು ಕೊಟ್ಟವರು
ಇವರಿಗೆ 'ನಿನ್ನೆ' ರಾಮಲೀಲೆ ಅಲ್ಲ
'ನಾಳೆ' ರಾಮನ ಪಟ್ಟಾಭಿಷೇಕವೂ ಅಲ್ಲ
ನಿನ್ನೆಯ ಕುರಿಮರಿಯನ್ನು
ಇಂದು ಕುರಿಯನ್ನಾಗಿಸಿದವರು
ನಿನ್ನೆಯ ಕರುವನ್ನು
ಇಂದು ಹಸುವನ್ನಾಗಿಸಿದವರು
ಇಂದಿನ ಫಸಲಿಗೆ
ನಿನ್ನೆ ಬಿತ್ತಿದ ಬೀಜದಲ್ಲಿ
ಮೊನ್ನೆ ಆಚೆ ಮೊನ್ನೆಯ ತೆನೆ ಕಾಂಡದಲ್ಲಿ
ಜೀವ ಹುಡುಕಿದವರು

ಇವರ ಚರಿತ್ರೆ
ಕೊಲೆ ಯುದ್ಧವಲ್ಲ
ಮೊಲೆ ಮೂಗು ಕೊಯ್ಯುವುದಲ್ಲ
ಹೆಂಗಸರ ಸೀರೆ ಕದ್ದದ್ದಲ್ಲ
ಆಯುಧ ಇಳಿಸಿ
ನರಕಾಸುರನ ಹೆಣವಾಗಿಸಿ
ಹಬ್ಬ ಆಚರಿಸಿದ ಸಂಸ್ಕೃತಿಯಲ್ಲ,
ಪ್ರಕೃತಿಯ ಕಗ್ಗಂಟು ಬಿಡಿಸಿ
ಬೀಜದೊಳಗೆ ಬೆಳೆ ಕಾಳು ಕಂಡಿದ್ದ.

ರಕ್ತ ಹಿಂಡಿ
ತಾಟಕಿ ಶೂರ್ಪನಖಿ ವಾಲಿ ಬಲಿ
ಮಂಡೋದರಿ ರಾವಣರ ತಲೆಗಳ ಲೆಕ್ಕಾಚಾರ
ಕಂಪ್ಯೂಟರ್‌ನಲ್ಲಿ ಇಂದಿಗೂ ನಡೆದಿದೆ

ನಾಟಿಯ ಕೆಸರು ಹೊಲಸು
ಬೆಳೆಯುವ ಸಸಿ ಕೆಟ್ಟದ್ದು
ಕೊಯ್ಯುವ ಕುಡಗೋಲು ಕೆಟ್ಟದ್ದು
ಹೊರುವ ಹೊರೆ ಹೊಲಸದು
ತಿನ್ನುವ ಅನ್ನ ಮಾತ್ರ ಒಳ್ಳೆಯದು
ಚರಿತ್ರೆ ನಿರ್ಮಿಸಿದವರ
ಗೋರಿಗಳ ಮೇಲೆ
ಪುರಾಣ ಬರೆಯುವ ದಂಧೆ
ಇನ್ನೂ ನಿಂತಿಲ್ಲ!

**ಡಾ|| ಕೆ. ಎನ್. ದೊಡ್ಡಮನಿ**
ನಂ. ೨೦೨, ಯಶವಂತ ಅಪಾರ್ಟ್‌ಮೆಂಟ್, ಸರ್ವೋದಯ
ಮಾರ್ಗ, ಹಿಂದವಾಡಿ, ಬೆಳಗಾವಿ - ೫೯೦ ೦೧೧

ರಾತ್ರಿ ಹಗಲು ಮರೆಯಲಾರದೆ
ಮಮತೆ ಎನಗೆ ಹಚ್ಚಿ ಹೋದೆಲ್ಲೊ
ಇರಲಾರೆ ಪುರುಷ ನಿನ್ನನಗಲಿ
ಎನ್ನಗತಿ ಯಾರಿಗಿ ಹೇಳಲಿ
ಸಣ್ಣಕಿ ನಾ ಪ್ರಾಯದ ಬಾಲಿ
ಒಬ್ಬಾಕಿ ನಾ ಮನ್ಯಾಗ ಹ್ಯಾಂಗಿರಲಿ
ನಿನ್ನ ನೋಡಿ ಮರಿತಿದ್ದೆನಲ್ಲಾ
ದಿಕ್ಕು ಯಾರಿಲ್ಲ ನನಗ ದಿಕ್ಕು ಯಾರಿಲ್ಲ

ನನಗೆ ಹಗಲು-ರಾತ್ರಿ ಕಣ್ಣಲ್ಲಿ ಕಣ್ಣಿಟ್ಟು ಪ್ರೀತಿಯ ಮಮತೆಯಲ್ಲಿ ಒಂದಿಷ್ಟು ಚಿಂತೆಯಿರದ ಹಾಗೆ ನೋಡಿ ಕೊಂಡು ಮಮತೆಯ ಜ್ಯೋತಿ ಹಚ್ಚಿ ಅಗಲಿ ದೂರಾದೆಲ್ಲ. ಈ ಪರಿತಾಪ ನನ್ನಿಂದ ಸಹಿಸಲಾಗದು. ನನ್ನಿಂದ ನಿನ್ನನಗಲಿ ಇರಲಾಗದು. ನಿನ್ನನಗಲಿ ಪರಿತಪಿಸುತ್ತಿರುವ ಆ ಮನದ ವ್ಯಥೆಯ ಗತಿ ಯಾರಿಗೆ ಹೇಳಲಿ ಏರು ಜವ್ವನದ ಸಣ್ಣ ಬಾಲಿ ಒಬ್ಬಾಕಿ ನಿನ್ನ ಬಿಟ್ಟು ಹೇಗಿರಲಿ ಎನ್ನುವುದರ ಜೊತೆಗೆ ಕೊನೆಯ ಸಾಲಿನಲ್ಲಿ ನಿರ್ಗತಿಕಳಾಗಿದ್ದಾಳೆ ಎನಿಸುತ್ತದೆ. ದಿಕ್ಕು ಎನ್ನುವಲ್ಲಿ ಎರಡರ್ಥ ಕಾಣುತ್ತೇವೆ. ಒಂದು, ದಾರಿ ತೋರಿಸುವವರು ಯಾರು ಇಲ್ಲ ಎಂದು. ಎರಡನೆಯದು, ದಿಶ ಇಲ್ಲ, ರಕ್ಷಣೆ ಇಲ್ಲದವರು ನಿರ್ಗತಿಕರು ಎಂದಾಗುತ್ತದೆ. ಇದರರ್ಥ ತನಗೆ ತಂದೆ-ತಾಯಿ-ಅಣ್ಣ-ತಮ್ಮ ಬಂಧು ಬಳಗ ಯಾರೂ ಇಲ್ಲ, ನೀನೊಬ್ಬನೆ ನನಗೆ ಗತಿ ಎನ್ನುವಂಥದ್ದು ನಿನ್ನ ನೋಡಿ ನನ್ನ ಎಲ್ಲಾ ರೀತಿ ಸಂಕಷ್ಟಗಳು ಮರೆತಿದ್ದೇನೆ. ಆದರೆ ನಿನ್ನನಗಲಿ ಹ್ಯಾಂಗಿರಲಿ, ಎನ್ನುವ ಪ್ರಶ್ನೆ ಇದೆ.

ಒಟ್ಟಿನಲ್ಲಿ ನಮ್ಮ ಜಾನಪದ ಕವಿಗಳು ಹಾಡುಗಳು ಹಾಡುವಲ್ಲಿ ಪದಗಳ ರಚನೆಯಲ್ಲಿ ಹಿಂದೆಬಿದ್ದಿಲ್ಲ. ಶಿಷ್ಟ ಕವಿಗಳಂತೆ ತಿಣುಕಿ ಬರೆದವರಲ್ಲ, ಭಾವನೆಯ ಭಾಷೆಗೆ ಮಣಿದು ಲೇಖನಿಯನ್ನು ಹಿಡಿಯದೆ ನಾಲಿಗೆಯ ಮೇಲೆಯೆ ಅನೇಕ ಗೀತೆಗಳನು ಹಾಡಿದವರು. ಆಗಿನ ಅನಕ್ಷರಸ್ಥ ಜಾನಪದೀಯರು ವಿಪ್ರಲಂಭ ಶೃಂಗಾರದ ಪದ್ಯಗಳಿಗೂ ಹನ್ನೆರಡನೆಯ ಶತಮಾನದ ಅಕ್ಕಮಹಾದೇವಿಯು ಚನ್ನಮಲ್ಲಿಕಾರ್ಜುನನನ್ನು ಪಡೆಯಲು ಪರಿತಪಿಸಿ ರಚಿಸಿರು ವಂತಹ ವಚನಕ್ಕೂ ಸರಿಹೊಂದುತ್ತದೆ. ಪ್ರಾಸಬದ್ಧವಾಗಿ, ಲಯ, ಗತಿ, ರಾಗ, ತಾಳ ವಾದ್ಯ ಜೊತೆಗೆ ಸಂಬಂಧ ವಿರುವಂತೆ ರಚಿಸಿ ಜಾನಪದ ಸಾಹಿತ್ಯದ ಮೆರಗು ಹೆಚ್ಚಿಸಿದ್ದಾರೆ.

**ಶ್ರೀಮಂತ ಎಸ್. ಮೇತ್ರಿ**
ಅಧ್ಯಕ್ಷರು, ಸಿರಿಗನ್ನಡ ವೇದಿಕೆ ಗುಲಬರ್ಗಾ ಜಿಲ್ಲೆ
ಹಸರಗುಂಡಗಿ ಅಂಚೆ - ೫೮೫ ೩೦೬

**ಡಾ|| ಎಂ. ಡಿ. ಒಕ್ಕುಂದ**

# ಗತಕಾಲದ ವೈಭವೀಕರಣಕ್ಕೆ ಆಧುನಿಕ ಕನ್ನಡ ಕಾವ್ಯದ ಪ್ರತಿಕ್ರಿಯೆ

*(ಜುಲೈ ಸಂಚಿಕೆಯಿಂದ ಮುಂದುವರಿದ ಭಾಗ)*

ಗತಕಾಲದ ವೈಭವೀಕರಣಕ್ಕೆ ಆಧುನಿಕ ಕನ್ನಡ ಕಾವ್ಯದಲ್ಲಿ ಕಾವ್ಯ ಸಂವೇದನೆಯ ಭಾಗವಾಗಿ ವೈವಿಧ್ಯಮಯವಾದ ಪ್ರತಿಕ್ರಿಯೆಗಳನ್ನು ಗುರುತಿಸಬಹುದಾಗಿದೆ. ಕುವೆಂಪು ಅವರ ಸಂಸ್ಕೃತಮಾತೆ, ಧರ್ಮ ಮೊದಲಾದ ಕವಿತೆಗಳಲ್ಲಿ ವಸಾಹತುಶಾಹಿ ಚರಿತ್ರೆಯು ಭಾರತದ ಗತಕಾಲವನ್ನು ವೈಭವೀಕರಿಸಿದ ಮಾದರಿಯ ಅನುಕರಣೆ ಇದೆ. ಸಂಸ್ಕೃತ ಭಾಷೆ ಹಾಗೂ ಆ ಭಾಷೆಯಲ್ಲಿ ಪ್ರಕಟವಾದ ಸಾಹಿತ್ಯ, ಶಾಸ್ತ್ರ, ದರ್ಶನಗಳನ್ನು ಕುರಿತಾಗಿ ಭಾವುಕವಾಗಿ ವರ್ಣಿಸುತ್ತಾರೆ. ಇದು ಕುವೆಂಪು ವೈಚಾರಿಕತೆಗೆ ಭಿನ್ನ ಮಾದರಿಯಾಗಿದೆ.

*ಆರ್ಯರಾಗಿಹ ನಾವು ನಿನ್ನ ಮೊಲೆವಾಲ ಸವಿ ಇಲ್ಲದೆಯೇ ಬದುಕುವೆವೆ ?*
*ನೀನಿಲ್ಲದೆಲ್ಲಿಯ ಭರತಖಂಡದ ಬದುಕು ಸಂಪತ್ತು ಸಂಸ್ಕೃತಿ ?*

'ಧರ್ಮ'ವನ್ನು ಕುರಿತಾದ ಅವರ ನಿರೂಪಣೆಯಲ್ಲಿ ವೈದಿಕ ಧರ್ಮವನ್ನು ಕುರಿತಾದ ಹೊಗಳಿಕೆಯೇ ತುಂಬಿ ತುಳುಕುತ್ತದೆ.

*ಓ ಮನೋಹರ ಭಯಂಕರ ವಿಧಾಯಕ ಮೂರ್ತಿ*
*ಪುರುಷೋತ್ತಮನ ಸನಾತನ ನಿತ್ಯ ಸಹಯೋಗಿ*
*ಹೇ ವಿಧಾತನ ವಾಣಿಯೇ ಭಕ್ತಿಯಲಿ ಬಾಗಿ*
*ನಿನಗೆರಗುವೆನು*

ಪು. ತಿ. ನರಸಿಂಹಾಚಾರ್, ಗೋವಿಂದ ಪೈ ಮೊದಲಾದವರ ಕವಿತೆಗಳಲ್ಲಿ ಈ ಬಗೆಯ ವೈಭವೀಕರಣ ಸೂಕ್ಷ್ಮವಾಗಿ ವ್ಯಕ್ತವಾಗುತ್ತದೆ. ಗೋವಿಂದ ಪೈ ಅವರ 'ಶ್ರೀ ಮಾತೃಭೂಮೀಶ್ವರಾಷ್ಟಕ'ದಲ್ಲಿ ಸನಾತನ ಭಾರತ ಹಾಗೂ ಹಿಂದೂ ಧರ್ಮಗಳ ವೈಭವೀಕರಣಗಳಿವೆ. ಪು.ತಿ.ನ. ಅವರ 'ಮೋಟು ಮರದ ಮೇಲೊಂದು ಗಿಳಿ'ಯಲ್ಲಿನ ಸನಾತನ ಪರಂಪರೆಯನ್ನು ರಕ್ಷಿಸಿಕೊಳ್ಳಲು ತರುಣ ಜನಾಂಗಕ್ಕೆ ಸಂದೇಶ ನೀಡಲಾಗಿದೆ. ಪು.ತಿ.ನ. ಅವರು 'ಜುಟ್ಟು' ಎಂಬ ಕವಿತೆಯಲ್ಲಿ ಜುಟ್ಟನ್ನು ಸನಾತನ ಸಂಸ್ಕೃತಿಯ ಸಂಕೇತವಾಗಿ ಪರಿಭಾವಿಸಿದ್ದಾರೆ. ಬಿ. ಎ. ಸನದಿ, ನಿಸಾರ್ ಅಹಮದ್ ಕಾವ್ಯದಲ್ಲಿ ಕೂಡ ಅಪರೂಪಕ್ಕೆ ಸನಾತನ ಸಂಸ್ಕೃತಿಯ ವೈಭವೀಕರಣದ ಎಳೆಗಳಿರುವುದನ್ನು ಗುರುತಿಸ ಬಹುದು. ಆದರೆ ಒಟ್ಟಾರೆಯಾಗಿ ಆಧುನಿಕ ಕನ್ನಡ ಕಾವ್ಯದಲ್ಲಿ ಮತೀಯ ರಾಷ್ಟ್ರೀಯವಾದಿ ಹಿನ್ನೆಲೆಯ ಈ ಮಾದರಿಯ ವೈಭವೀಕರಣ ಕಡಿಮೆ ಎಂದೇ ಹೇಳಬೇಕು.

ಗತಕಾಲದ ಚರಿತ್ರೆ, ಪರಂಪರೆಗಳನ್ನು ಮಧ್ಯಯುಗಕ್ಕೆ ಎದುರಾಗಿಸುವ ಕೋಮುವಾದಿ ಹುನ್ನಾರವನ್ನು ಆಧುನಿಕ ಕನ್ನಡದ ಬಹುತೇಕ ಕವಿಗಳು ತಿರಸ್ಕರಿಸಿದ್ದಾರೆ. ಬೇಂದ್ರೆಯವರು ಈ ಚಿಂತನೆಗೆ ಬುನಾದಿ ಹಾಕಿದ್ದಾರೆ. 'ಮಾರ್ಮಿಕ ವಚನಗಳು' ಎಂಬ ಕವಿತೆಯಲ್ಲಿ ಸಂಶೋಧಕ ಪ್ರಬುದ್ಧರನ್ನು ಸಂಬೋಧಿಸಿ,

*ಹಿಂದಿನ ಇತಿಹಾಸ ಪುರಾಣ ಓದಿ ಓದಿ*
*ಮಂಕಾಯಿತು ನಮ್ಮ ಬುದ್ಧಿ ಇರಲಿಲ್ಲ ನಮಗ ಶುದ್ಧಿ*
*ಚರಂಡಿ, ತಿಪ್ಪೆ, ಗುಪ್ಪೆ ತಿರುವಿ ಹಿಂದಿನ ಹಣೆಬರೆಹ ಓದಿದರು ಕೆಲವರು*

– ಎಂದು ಓರಿಯಂಟಲ್ ಚರಿತ್ರೆಯ ವಿಧಾನವನ್ನೇ ತಿರಸ್ಕರಿಸುತ್ತಾರೆ. 'ಊರು ಮತ್ತು ಖಾಲ್ಡಿಯಾ' ಕವಿತೆಯ 'ಇದ್ದ ಜಗಳ ಸಾಲದೆಂದು ಹಳೆದ ಹಡ್ಡಿ ತೆಗೆವರು' ಎಂದು ಪ್ರತಿಕ್ರಿಯಿಸಿದ್ದಾರೆ. 'ಭರತ ಖಂಡ ಬದನಿಕಾಯಿ ಭರತಾ ಮಾಡಬ್ಯಾಡ ತಮ್ಮಾ ಸುರತದ ಕಲಹಾ ಮತ್ತ ಬ್ಯಾಡ ಒಮ್ಮನವಿರಲಿ ನಮ್ಮ ನಿಮ್ಮ' ಎಂದು ಕಲಹಪ್ರಿಯ ಚರಿತ್ರೆಯನ್ನು ವಿರೋಧಿಸಿದ್ದಾರೆ. 'ಇತಿಹಾಸ, ರೀ-ಫ್ಯೂಜ್ಡ ಬಲ್ಬು' ಎನ್ನುವುದು ಅವರ ಖಚಿತ ನಿಲುವು. 'ಮೊದಲಗಿತ್ತಿ'ಯಂಥ ಕವಿತೆಯಲ್ಲಿ ವಿಶ್ವಾತ್ಮಕ ನೆಲೆಯಲ್ಲಿ ಗತಕಾಲದ ಚರಿತ್ರೆಯನ್ನೇ ಅಪ್ರಸ್ತುತಗೊಳಿಸುವ ಪ್ರಯತ್ನವಿದೆ. ಚೆನ್ನವೀರ ಕಣವಿಯವರ ನಾಡಗೀತೆಗಳಲ್ಲಿ ವೈಭವೀಕರಣವಿದೆಯಾದರೂ 'ಹೊಸಬಾಳಿನ ಯೋಜನೆ'ಯಲ್ಲಿ ಅವರು ಚರಿತ್ರೆಯನ್ನು ವಸ್ತುನಿಷ್ಠವಾಗಿ ಗ್ರಹಿಸುತ್ತಾರೆ :

*ಈ ಚರಿತ್ರೆಯ ನೂರು ಹೋರಾಟಗಳ ನಂಟು*
*ಪುಟಪುಟವ ಮೂಸೆಯಲಿ ಪುಟವಿಕ್ಕಲು*
*ಅಲ್ಲಿ ಚಿನ್ನದ ಜತೆಗೆ ಮಣ್ಣು ಕಲ್ಲಿನ ರಾಶಿ*
*ಸತ್ತ ಎಮ್ಮೆಗೆ ಹತ್ತು ಸೇರು ಹಾಲು*

ಜಿ. ಎಸ್. ಶಿವರುದ್ರಪ್ಪನವರು 'ಚರಿತ್ರೆ-ಪುರಾಣ' ಎಂಬ ಕವಿತೆಯಲ್ಲಿ ಪುರಾಣದ ಹೆಸರಿನಲ್ಲಿ ಸ್ಥಗಿತಗೊಂಡ ಸಂಸ್ಕೃತಿಯಲ್ಲಿ ದೇವರು, ದಿಂಡಿರು, ಅವತಾರಗಳು ಮನುಷ್ಯರನ್ನು ಹಿಂಸಿಸುವ ಬಗೆಯನ್ನು ಪ್ರಸ್ತಾಪಿಸಿ ಅದರ ಶೋಷಕ ನೆಲೆಯನ್ನು ಖಚಿತಪಡಿಸುತ್ತಾರೆ :

*ಬಿಡಬೇಡ ಚರಿತ್ರೆಯನ್ನು ಪುರಾಣವಾಗುವದಕ್ಕೆ*
*ನಿನ್ನೆಲ್ಲವನ್ನೂ ಅರೆವ ಗಾಣವಾಗುವದಕ್ಕೆ*

ಇವರಾರೂ 'ಚರಿತ್ರೆ'ಯನ್ನು ತಿರಸ್ಕರಿಸುತ್ತಿಲ್ಲ. ವಸಾಹತುಶಾಹಿಯ ಕಲ್ಪಿತ ಚರಿತ್ರೆಯನ್ನು ವಿಮರ್ಶಿಸಿದ್ದಾರೆ. ಕೆ. ಎಸ್. ನಿಸಾರ್ ಅಹಮದ್ ಅವರು 'ಮಾತೃವಂದನ', 'ಕನ್ನಡ ರಾಜೇಶ್ವರಿ' ಮೊದಲಾದ ಕವಿತೆಗಳಲ್ಲಿ ಗತಕಾಲದ ವೈಭವೀಕರಣಕ್ಕೆ 'ಮುಸ್ಲಿಂ' ಸಂವೇದನೆಯನ್ನು ಸೇರ್ಪಡಿಸಿದ್ದಾರೆ. ಆಧುನಿಕ ಕನ್ನಡ ಕವಿಗಳ ಕಾವ್ಯದಲ್ಲಿ ಸ್ಥಾನ ಪಡೆಯದ ಮುಸ್ಲಿಂ ರಾಜರ ಹಾಗೂ ಸಾಂಸ್ಕೃತಿಕ ಚಹರೆಗಳನ್ನು ಸೇರ್ಪಡೆ ಮಾಡುತ್ತಾರೆ.

'ಗತ ಇತಿಹಾಸದ ಶತ ಆಭಾಸದ ಹತಶೇಷದ ಅಳಲಂತಿರುವೆ' ಎಂಬ ಸಂಕಟವನ್ನು ನಿವೇದಿಸಿಕೊಳ್ಳುತ್ತಾರೆ. 'ಅಂಟು ಮೆತ್ತಿಸಿಯೋ ಅಥವಾ ಚಿನ್ನ ಲೇಪಿಸಿಯೋ ಇವರು





ಹುಳುಕನ್ನು ಮರೆಗೊಳಿಸಿ ಥಳಕಾಗಿ ಮೆರೆಸುವರು' ಎಂದು ಚರಿತ್ರೆಯ ತಿರುಚುವಿಕೆಯನ್ನು ವಿರೋಧಿಸಿದ್ದಾರೆ.

*ಮಯೂರ ಶ್ರೀ ಪುಲಿಕೇಶಿ ಹರ್ಷವರ್ಧನ ಕೃಷ್ಣ*
*ದೇವ ಕೆಳದಿನ ಅರಸು ಧೀರ ಟಿಪ್ಪು (ಹಿರಿಮೆ)*
*ಸೂಫಿ ಸಂತರ ಯೋಗಿ ಮಹಂತರ*
*ಮಹಿಮಾ ಸ್ರೋತದಿ ಮಿಂದು ನಿರಂತರ (ಮಾತೃವಂದನೆ)*

– ಮುಂತಾಗಿ ಭಾರತದ ಗತಕ್ಕೆ ಮುಸ್ಲಿಂ ಅನನ್ಯತೆಗಳನ್ನು ಸೇರಿಸುವ ಯತ್ನ ಮಾಡಿದ್ದಾರೆ. ಎಂ. ಗೋಪಾಲಕೃಷ್ಣ ಅಡಿಗರು 'ಇಂದು ನಮ್ಮೀ ನಾಡು-೩' ಕವಿತೆಯಲ್ಲಿ ಸನಾತನ ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಬಗ್ಗೆ ತೀವ್ರವಾದ ವ್ಯಂಗ್ಯವನ್ನು ಪ್ರಕಟಿಸಿದರೂ ನಂತರದ ಕವಿತೆಗಳಲ್ಲಿ ಅದರ ಪುನರುತ್ಥಾನಕ್ಕೆ ಕಟಿಬದ್ಧತೆಯನ್ನು ಪ್ರಕಟಿಸುತ್ತಾರೆ.

ಚೆನ್ನವೀರ ಕಣವಿಯವರು ಜೀರ್ಣೋದ್ಧಾರ ಕವಿತೆಯಲ್ಲಿ ಗತದ ಹುಳುಕುಗಳನ್ನು ಬಯಲಿಗೆಳೆಯುತ್ತ,

*ಬದಿಯಲ್ಲೆ ಬೆಳೆದು ನಿಂತಿದೆ ಸ್ವಾಮಿ*
*ಸನಾತನ ವೃಕ್ಷ*
*ಸುತ್ತ ಮುತ್ತೂ ಹಸಿರು ಪೈರು ಮೊಳೆದಂತಿಲ್ಲ*
*ಅಷ್ಟು ವರ್ತುಲ ಜಾಗ ಇಂದಿಗೂ ರುಕ್ಷ*

– ಎಂದು ಕೋಮುವಾದದ ಪ್ರಾಚೀನ ರೂಪವನ್ನು ವ್ಯಾಖ್ಯಾನಿಸುತ್ತಾರೆ.

ಚಂದ್ರಶೇಖರ ಪಾಟೀಲರು 'ಜೀವನ ಜಾತ್ರೆ' ಎಂಬ ಕವಿತೆಯಲ್ಲಿ ಗತವು ವರ್ತಮಾನದಲ್ಲಿ ಮುಂದುವರಿದಿರುವ ದುರಂತದ ಚಿತ್ರಣ ನೀಡಿದ್ದಾರೆ :

*ಬಡತನದ ಬಸಿರಲ್ಲಿ ಮೈದಾಳಿ ಬಂದಿಹುದು*
*'ಉತ್ತುಂಗ ಸಂಸ್ಕೃತಿ'ಯ ವಿಕೃತರೂಪ*
*'ಭಾರತಕೆ ವರ'ವಾದ ಅನವರತ ಶಾಪ*

ಚಂದ್ರಶೇಖರ ತಾಳ್ಯ ಅವರ 'ಸಿಂಧೂ ನದಿಯ ದಂಡೆಯ ಮೇಲೆ' ಕವಿತೆಯು ಸನಾತನ ಸಂಸ್ಕೃತಿ ದೇಶೀ ಸಂಸ್ಕೃತಿಗಳ ಮೇಲೆ ನಡೆಸಿದ ಆಕ್ರಮಣವನ್ನು ಚಿತ್ರಿಸುತ್ತದೆ.

ಬಂಡಾಯ ಕಾಲಘಟ್ಟದಲ್ಲಿ ಮಾರ್ಕ್ಸ್‌ವಾದಿ ದೃಷ್ಟಿಕೋನದಿಂದ ಭಾರತದ ಕೋಮುವಾದಿ ಚರಿತ್ರೆಯ ಸೃಷ್ಟಿಯನ್ನು ನಿರಾಕರಿಸುವ ಹಲವಾರು ಕವಿತೆಗಳು ಬಂದಿವೆ. ಹೊರೆಯಾಲ ದೊರೆಸ್ವಾಮಿಯವರು 'ಈ ಚರಿತ್ರೆ ನಮ್ಮದಲ್ಲ' ಎಂದು ಘೋಷಿಸಿದ್ದಾರೆ. ಜಂಬಣ್ಣ ಅಮರಚಿಂತ ಅವರು 'ಕೋಟೆ' ಎಂಬ ಕವಿತೆಯಲ್ಲಿ ಚರಿತ್ರೆಯ ನಿರ್ಮಾಪಕರು ದುಡಿಯುವ ಜನವೆಂಬ ಆಶಯವನ್ನು ವ್ಯಕ್ತಪಡಿಸುತ್ತ ರಾಜನಿಷ್ಠ, ಮತನಿಷ್ಠ ಚರಿತ್ರೆಯನ್ನು ತಿರಸ್ಕರಿಸಿದ್ದಾರೆ. ಆರ್. ವಿ. ಭಂಡಾರಿಯವರ 'ಇತಿಹಾಸ' ಈ ಮಾದರಿಯ ಕವಿತೆಗಳಲ್ಲಿ ಪ್ರಾತಿನಿಧಿಕವಾಗಿದೆ :

*ನೇಗಿಲ ಮೊನೆಯಿಂದ ಇತಿಹಾಸ ಕೊರೆಯಲ್ಪಟ್ಟಿತು*
*ಆದರೆ ಕಿರೀಟದೊಜ್ರದ ಮೊನೆಯಿಂದ ಎಂದು ಕಲಿಸಿದರು ನಮಗೆ*
*ಗೆಯ್ಮೆಯ ಕೈಯಿಂದ ಇತಿಹಾಸ ನಿರ್ಮಾಣವಾಯಿತು*
*ಆದರೆ ಪುರೋಹಿತರ ಮಂತ್ರದಿಂದ ಎಂದು ಕಲಿಸಿದರು ನಮಗೆ.*

ಒಟ್ಟಾರೆಯಾಗಿ, ಆಧುನಿಕ ಕನ್ನಡ ಕಾವ್ಯವು ಆಧುನಿಕ ಭಾರತದಲ್ಲಿ ಹಿಂದೂ-ಮುಸ್ಲಿಂ ವೈರವನ್ನು ಪೋಷಿಸುವ ಕೋಮುವಾದಿ ಚರಿತ್ರೆಯ ಸಂಕಥನಗಳನ್ನು ಹಲವಾರು ನೆಲೆಗಳಿಂದ ತಿರಸ್ಕರಿಸುವ, ಒಡೆದು ಹಾಕುವ ಪ್ರಬುದ್ಧತೆಯನ್ನು ಮೆರೆದಿದೆ.

**೨. ಮಧ್ಯಕಾಲೀನ ಚರಿತ್ರೆಯ ವಿಕೃತೀಕರಣ**

ಆಧುನಿಕ ಭಾರತದಲ್ಲಿ ಕೋಮುವಾದಿ ಸಿದ್ಧಾಂತದ ಪ್ರತಿಪಾದನೆಗೆ ಹಾಗೂ ಭಾವನಾತ್ಮಕ ಪ್ರಚೋದನೆಗೆ ದೊಡ್ಡ ಭೂಮಿಕೆಯನ್ನು ಒದಗಿಸಿದ್ದು ವಸಾಹತುಶಾಹಿ ಚರಿತ್ರೆ ವಿಕೃತೀಕರಿಸಿದ ಮಧ್ಯಯುಗೀನ ಚರಿತ್ರೆ. ಜೇಮ್ಸ್ ಮಿಲ್ ಈ ಕಾಲವನ್ನು 'ಮುಸ್ಲಿಂ ಯುಗ' ಎಂದು ಕರೆದ. ಭಾರತಕ್ಕೆ ವ್ಯಾಪಾರ ಹಾಗೂ ರಾಜ್ಯಸ್ಥಾಪನೆಗಾಗಿ ಬಂದ ಅರಬ್ಬರು, ತುರ್ಕರು ಹಾಗೂ ಆಫ್ಘನ್ನರನ್ನು, ಯವನರು, ತುರುಷ್ಕರು, ಅಫಘನ್‌ರು ಮುಂತಾಗಿ ಅವರ ಪ್ರಾದೇಶಿಕ ಹಾಗೂ ಜನಾಂಗಿಕ ನೆಲೆಯಿಂದ ರಾಜಕೀಯವಾಗಿ ಗುರುತಿಸಲಾಗುತ್ತಿತ್ತು. ಅವರನ್ನು ಕೂಡ 'ಒಂದು ಧರ್ಮ, ಒಂದು ದೇಶ, ಒಂದು ಜನಾಂಗ'ದ ಏಕಾಕಾರಿ ಕಲ್ಪನೆಯಲ್ಲಿ ಹಿಡಿದಿಡಲು ಕೋಮುವಾದಿ ಚಿಂತನೆಗೆ ಮಿಲ್‌ನ ವರ್ಗೀಕರಣ ವರವಾಯಿತು. 'ಹಿಂದೂ' ಎಂಬ ಕಲ್ಪಿತ ಏಕಾಕಾರದ ವಿರುದ್ಧ ಮುಸ್ಲಿಂ ಎಂಬ ಮತ್ತೊಂದು ಕಲ್ಪಿತ ಏಕಾಕಾರವನ್ನು ಆತ ಕಟ್ಟಿಕೊಟ್ಟಿದ್ದ. ಮಧ್ಯಯುಗೀನ 'ಮುಸ್ಲಿಂ' ಚರಿತ್ರಕಾರರ ಮತೀಯ ಚರಿತ್ರೆಗಳು, ವಸಾಹತುಶಾಹಿ ಒಡೆದಾಳುವ ನೀತಿಯ ಚರಿತ್ರೆಗಳು ಹಾಗೂ ಅವುಗಳನ್ನನುಸರಿಸಿ ಕಟ್ಟಿದ ರಾಷ್ಟ್ರೀಯವಾದಿ ಚರಿತ್ರೆಗಳು ಭಾರತದಲ್ಲಿ ಕೋಮುವಾದಿ ಸಂಕಥನವನ್ನು ರೂಪಿಸಲು ನೆರವಾದವು. 'ಹಿಂದೂ', 'ಮುಸ್ಲಿಂ' ಎಂಬ ಪದಗಳು ಮಧ್ಯಯುಗೀನ ಚರಿತ್ರೆಯ ರಾಜಕೀಯ ಸಂಘರ್ಷವನ್ನು ವಿವರಿಸುವಾಗ ಎರಡೂ ಸಮುದಾಯಗಳ ಮೇಲ್ವರ್ಗಗಳಿಗೆ ಮಾತ್ರ ಅನ್ವಯಿಸುವಂತೆ ಬಳಕೆಯಾಗಿದ್ದವು. ಅವುಗಳನ್ನು ಇಡೀ ಸಮುದಾಯಕ್ಕೆ ಅನ್ವಯಿಸಲಾಯಿತು. ಅಲ್ಲಿಯ ಸಂಘರ್ಷಗಳನ್ನು ಮಾತ್ರ ಎತ್ತಿ ಹಿಡಿದು ಅವುಗಳ ರಾಜಕೀಯ ಕಾರಣಗಳನ್ನು ಮರೆಮಾಚಿ ಮತೀಯ ಕಾರಣಗಳನ್ನು ಜೋಡಿಸ ಲಾಯಿತು. ಮುಸ್ಲಿಮರನ್ನು ಒಂದು ಏಕಾಕಾರಿ ಸಮೂಹವಾಗಿ ಕಲ್ಪಿಸಲಾಯಿತು. ಅವರನ್ನು ಅನೇಕ ಅವಗುಣಗಳಿಂದ ರಾಕ್ಷಸೀಕರಿಸಲಾಯಿತು. ಅವರ ಬರುವಿಕೆಯಿಂದ ಹಿಂದೂ ಸಂಸ್ಕೃತಿ ಪತನವಾಯಿತೆಂದು ಚಿತ್ರಿಸಲಾಯಿತು. ಸಂಕರಶೀಲತೆ ಮತ್ತು ಸೌಹಾರ್ದತೆಯ ನೆಲೆಗಳನ್ನು ಕಡೆಗಣಿಸಲಾಯಿತು. ಅನುಭಾವೀ ಹಾಗೂ ಭಕ್ತಿಪಂಥಗಳನ್ನು ಮರೆಮಾಚ ಲಾಯಿತು. ಪರಿಣಾಮವಾಗಿ, ಹಿಂಸೆ, ಪ್ರತಿಹಿಂಸೆಗಳನ್ನೇ ಮೌಲ್ಯವೆಂಬಂತೆ ಪ್ರಚೋದಿಸಲು ನಿರಂತರವಾಗಿ ಕೋಮುವಾದಿ ಸಿದ್ಧಾಂತವನ್ನು ಬಳಸಿಕೊಳ್ಳಲಾಗುತ್ತಿದೆ. ಡಾ॥ ಹರಿಪ್ರಸಾದ ಶಾಸ್ತ್ರಿ ಎಂಬ ಕಲ್ಕತ್ತಾ ವಿಶ್ವವಿದ್ಯಾಲಯದ ಪ್ರಾಧ್ಯಾಪಕರೊಬ್ಬರು ಮಧ್ಯಕಾಲೀನ ಚರಿತ್ರೆಯನ್ನು ತಿರುಚಿದ ಬಗೆಯನ್ನು ನೋಡ ಬಹುದು : ''ಟಿಪ್ಪು ಸುಲ್ತಾನ ಬಲವಂತವಾಗಿ ಮತಾಂತರಿಸಲು ಯತ್ನಿಸಿದಾಗ ಮೂರು ಸಾವಿರ ಬ್ರಾಹ್ಮಣರು ಆತ್ಮಹತ್ಯೆ ಮಾಡಿಕೊಂಡರು.'' ಈ ಅಪ್ಪಟ ಸುಳ್ಳು ಹಲವಾರು ವರ್ಷ ಉತ್ತರ ಪ್ರದೇಶ, ಬಿಹಾರ, ಒರಿಸ್ಸಾ, ಬಂಗಾಳಗಳಲ್ಲಿ ಕಾಲೇಜು ವಿದ್ಯಾರ್ಥಿಗಳಿಗೆ ಪಠ್ಯವಾಗಿ ಬೋಧಿಸಲ್ಪಟ್ಟಿತು. ಇಂದಿಗೂ ದೇಶದ ಪ್ರಾಥಮಿಕ ಶಾಲೆಯಿಂದ ಹಿಡಿದು ವಿಶ್ವವಿದ್ಯಾಲಯ ಪಠ್ಯದವರೆಗೆ ಇಂಥ ಹಲವಾರು ಸುಳ್ಳುಗಳು ತುಂಬಿವೆ. ಬಲಪಂಥೀಯ ಪಕ್ಷಗಳು ಅಧಿಕಾರಕ್ಕೆ ಬರುವ ರಾಜ್ಯಗಳಲ್ಲಿ ಹಾಗೂ ಕೇಂದ್ರದಲ್ಲಿ ಸರಕಾರ ರಚಿಸಿರುವಾಗ ಪಠ್ಯಗಳನ್ನು ಕೋಮುವಾದೀಕರಿಸಲು ಪ್ರಯತ್ನಿಸುತ್ತವೆ. ಇವತ್ತು ಸಾಹಿತ್ಯದ ಬಹು ದೊಡ್ಡ ಜವಾಬ್ದಾರಿಯೆಂದರೆ ಕೋಮುವಾದಿ ಸಂಕಥನಗಳನ್ನು ಭಂಜಿಸುವದು ಮತ್ತು ವಾಸ್ತವಗಳನ್ನು ಪ್ರಚಾರಪಡಿಸುವದು.

**ಅ. 'ಮುಸ್ಲಿಂ' ಎಂಬ ಬಹುಮುಖಿ ಸಮುದಾಯ**

ಕೋಮುವಾದಿ ಸಿದ್ಧಾಂತ ಪ್ರತಿಪಾದಿಸುವಂತೆ 'ಮುಸ್ಲಿಂ' ಎಂಬುದು ಧರ್ಮದ ಕಾರಣಕ್ಕೆ ಒಟ್ಟುಗೂಡಿ ಇನ್ನೊಂದು ಧರ್ಮದ ಮೇಲೆ ಆಕ್ರಮಣ ಮಾಡುವ ಆಕ್ರಮಣಕಾರಿ ಮತಾಂಧ ಜನವರ್ಗವಾಗಿರಲಿಲ್ಲ. ಅಲ್ಲಿ ಸಾಮ್ರಾಟರು, ಸುಲ್ತಾನರು, ಆಳರಸರು, ಇದ್ದರು. ಮಂತ್ರಿ, ಸೇನಾಪತಿ, ಮನ್ಸೂಬ್ದಾರ್ ಮೊದಲಾದ ಕುಲೀನ ವರ್ಗದ ಆಡಳಿತ ಸಮೂಹವಿತ್ತು. ಪ್ರಾಚೀನ ಕಾಲದಿಂದಲೇ ಬಂದ ವ್ಯಾಪಾರಿಗಳಿದ್ದರು. ಮತಾಂಧ ಉಲೇಮಾಗಳಿದ್ದರು. ಶಿಯಾ-ಸುನ್ನಿಗಳಿದ್ದರು. ದೊಡ್ಡ ಪ್ರಮಾಣದಲ್ಲಿ ಮತಾಂತರ ಹೊಂದಿದ ಭಾರತೀಯ ಕೆಳವರ್ಗದ ಬಡ ಜನಸಮೂಹವಿತ್ತು. ಭಾರತೀಯರನ್ನು ಮದುವೆಯಾಗುವದರ ಮೂಲಕ ಹುಟ್ಟಿದ ಸಂಕರ ಕುಲಗಳಿದ್ದವು. ವ್ಯಾಪಾರಿ ಮತ್ತು ಸಾಮ್ರಾಟ ವರ್ಗ ಮೂಲದಲ್ಲಿಯೇ ವಿಭಿನ್ನ ಪ್ರದೇಶ ಸಂಸ್ಕೃತಿಗಳಿಗೆ ಸಂಬಂಧಿಸಿದವ ರಾಗಿದ್ದರು. ಮತಾಂತರಿಗಳೂ ತಮ್ಮ ಮೂಲ ಕುಲಚಿಹ್ನೆಗಳನ್ನುಳಿಸಿಕೊಂಡು ಬಂದಿದ್ದರು. ಅದೊಂದು ಅಸಂಖ್ಯ ವೈವಿಧ್ಯವನ್ನೊಳಗೊಂಡ ಲೋಕವಾಗಿತ್ತು. ಹಾಗೆಯೇ ಪರಸ್ಪರ ವೈರುಧ್ಯಗಳ ಸರಮಾಲೆಯೇ ಇದ್ದವು. ರಾಜ್ಯ ವಿಸ್ತರಣೆಗೆಂದು ಭಾರತಕ್ಕೆ ಬಂದ ಬೇರೆ ಬೇರೆ ಕುಲ ದೇಶಗಳ ಮುಸ್ಲಿಂ ದೊರೆಗಳು ಪರಸ್ಪರ ಕಾದಾಡಿದ್ದೇ ಹೆಚ್ಚು. ವ್ಯಾಪಾರಿ ವರ್ಗದ ನಡುವೆಯೂ ಸ್ಪರ್ಧಾತ್ಮಕತೆ ಇತ್ತು. ಅಧಿಕಾರ ಹಂಚಿಕೆಗಾಗಿ ಕುಲೀನ ವರ್ಗದ ಮುಸಲ್ಮಾನರಲ್ಲಿ ಸಂಘರ್ಷಗಳಿದ್ದವು. ಮತಾಂತರಿಗಳನ್ನು ಕುಲೀನರು ನಾಯಿ,

ಹಂದಿಗಳಿಗಿಂತಲೂ ಕಡೆಯಾಗಿ ಕಾಣುತ್ತಿದ್ದರು. ''ಪ್ರಶಸ್ತಿ ಶಿಲೆಗಳನ್ನು ನಾಯಿಗಳ ಗಂಟಲುಗಳೊಳಗೆ ತುರುಕಬಾರದೆಂದು ಅಥವಾ ಹಂದಿಗಳ ಹಾಗೂ ಕರಡಿಗಳ ಕೊರಳ ಸುತ್ತ ಚಿನ್ನದ ಪಟ್ಟಿಯನ್ನು ಹಾಕಬಾರದೆಂದು, ಅವರಿಗೆ ಕೇವಲ ಪ್ರಾರ್ಥನೆ, ಉಪವಾಸ ಇತ್ಯಾದಿಗಳ ಬಗೆಗೆ ನಿಯಮಗಳನ್ನು ತಿಳಿಸಿಕೊಡುವದಕ್ಕಿಂತ ಹೆಚ್ಚಿಗೇನೂ ಹೇಳಿಕೊಡ ಬಾರದೆಂದು ಪ್ರತಿಯೊಂದು ರೀತಿಯ ಬೋಧಕರಿಗೆ ಕಟ್ಟುನಿಟ್ಟಾಗಿ ಆಜ್ಞಾಪಿಸಬೇಕು'' ಎಂದು ಬರಾನಿಯು ಫರ್ಮಾನ್ ಒಂದರಲ್ಲಿ ಹೇಳುತ್ತಾನೆ. ತಾತ್ವಿಕವಾಗಿ ಕೂಡ ಇಸ್ಲಾಂ ರೂಪಾಂತರಗಳನ್ನು ಪಡೆದಿತ್ತು. ನಿರಂಕುಶ ಪ್ರಭುತ್ವ ಹಾಗೂ ಪುರೋಹಿತ ವ್ಯವಸ್ಥೆಯನ್ನು ಮನ್ನಿಸದ ಮೂಲ ಇಸ್ಲಾಂ ಭಾರತದಲ್ಲಿ ಎರಡನ್ನೂ ಒಳಗೊಂಡೇ ಪ್ರಚಾರ ಪಡೆಯಿತು. ಯಥಾಸ್ಥಿತಿವಾದಿ ಧರ್ಮವಾಗಿ ಮಾರ್ಪಟ್ಟಿತ್ತು.

ಹಾಗೆ ನೋಡಿದರೆ ಪರಸ್ಪರ ಸೌಹಾರ್ದತೆ, ಕೊಡು ತೆಗೆದುಕೊಳ್ಳುವಿಕೆ ಮತ್ತು ಸ್ನೇಹ ಸಂಬಂಧಗಳು ಶ್ರೇಣೀಕರಣದ ಒಳಗಡೆ ಮತಾತೀತವಾಗಿ ನಡೆಯುತ್ತಿದ್ದವು. ಮೇಲ್ಜಾತಿ ಮೇಲ್ವರ್ಗದ ಮುಸ್ಲಿಮರು ತಮಗೆ ಸರಿಸಾಟಿಯಾದ ಹಿಂದೂಗಳೊಂದಿಗೆ ಹೊಂದಿದ ಸಾಮರಸ್ಯವನ್ನು ತಮಗಿಂತ ಕೆಳಗಿನ ಜಾತಿಗಳ ಮುಸ್ಲಿಂರೊಂದಿಗೆ ಹೊಂದಿರಲಿಲ್ಲ. ಮದುವೆಗಳು ಮೇಲ್ವರ್ಗದ ಮುಸ್ಲಿಂ-ಹಿಂದೂಗಳ ನಡುವೆ ನಡೆಯುತ್ತಿದ್ದವೇ ಹೊರತು ಮುಸ್ಲಿಂ ಮೇಲು ಮತ್ತು ಕೆಳವರ್ಗಗಳ ನಡುವೆ ಅಲ್ಲ. ಆದ್ದರಿಂದ ಮಧ್ಯಕಾಲೀನ ಭಾರತದಲ್ಲಿ ಒಂದು ಮತಾತೀತ ಮೇಲ್ವರ್ಗೀಯ ಸಾಮರಸ್ಯವಿತ್ತೇ ಹೊರತು ಒಂದೇ ಧರ್ಮದ ನಡುವೆ ಅವಿನಾಭಾವ ಸಂಬಂಧವಿರಲಿಲ್ಲ.

**ಆ. ಮುಸಲ್ಮಾನರು ದೇಶೀಯರು**

ಕೋಮುವಾದಿಗಳು ಮುಸ್ಲಿಮರನ್ನು ಯುರೋಪಿಯನ್ನರಿಗೆ ಸಮೀಕರಿಸಿ ವಿದೇಶೀಯರು ಎಂದು ವಾದಿಸುತ್ತಾರೆ. ಅದರ ಮುಂದಿನ ಮಾತೆಂದರೆ ಅವರು ದೇಶಬಿಟ್ಟು ಹೋಗಬೇಕೆನ್ನುವದು. ಹಿಂದೂ -ಮುಸ್ಲಿಂ ಸಂಬಂಧದಲ್ಲಿ ವರ್ತಮಾನದಲ್ಲಿ ಬಿರುಕನ್ನು ಹೆಚ್ಚಿಸಲು ಅವರು ವಿದೇಶಿಯರೆಂಬ ಕಲ್ಪನೆಯನ್ನು ಹೆಚ್ಚು ಪ್ರಚಾರಪಡಿಸಲಾಗುತ್ತಿದೆ. ಅವರು ದೇಶೀಯರು ಎಂಬ ಸರಳ ಸತ್ಯವನ್ನು ಕಂಡುಕೊಳ್ಳುವದು ಧಾರ್ಮಿಕ ಸಾಮರಸ್ಯದ ದೃಷ್ಟಿಯಿಂದ ಮುಖ್ಯವಾದದ್ದು.

ಮುಸ್ಲಿಂ ಸಾಮ್ರಾಜ್ಯಗಳು ಭಾರತದಲ್ಲಿ ಉದಯವಾಗುವದಕ್ಕಿಂತ ಸುಮಾರು ನಾಲ್ಕು ಶತಮಾನಗಳಷ್ಟು ಮೊದಲೇ ಅರಬ್ ವ್ಯಾಪಾರಿಗಳು ಭಾರತದಲ್ಲಿ ಇಸ್ಲಾಮನ್ನು ಪ್ರಚಾರಪಡಿಸಿದ್ದರು. ಆ ಹಂತದಲ್ಲಿ ಕೆಲವು ರಾಜರೂ ಮತ್ತು ಅಸಂಖ್ಯಾತ ದಲಿತರು ಇಸ್ಲಾಮಿಗೆ ಮತಾಂತರ ಹೊಂದಿದರು. ಆಗ ಇಸ್ಲಾಂ ಕೂಡ ಭಾರತೀಯ ಧರ್ಮಗಳಲ್ಲಿ ಒಂದಾಯಿತು. ಘೋರಿ ಮಹಮದ್ ಸತ್ತು ಕುತುಬುದ್ದೀನ್ ಐಬಕ್ ದೆಹಲಿಯ ಸುಲ್ತಾನನಾಗುವ ಮೂಲಕ ಭಾರತದಲ್ಲಿ ಮುಸ್ಲಿಮರು ರಾಜಕೀಯವಾಗಿ ಕೂಡ ತಮ್ಮ ವಿದೇಶೀಯತೆಯನ್ನು ಕಳೆದುಕೊಂಡರು. ಅಲ್ಲಿಂದ ಆರಂಭವಾದ ಮುಸ್ಲಿಂ ಅರಸು ಮನೆತನಗಳು ಭಾರತವನ್ನು ತಮ್ಮ ಮಾತೃಭೂಮಿಯೆಂದು ಭಾವಿಸಿ ಆಡಳಿತ ನಡೆಸಿದವು.

ನಂತರದ ಅವಧಿಯಲ್ಲಿ ಅವರಾರೂ ಘಜನಿ ಮಹಮದ್, ಘೋರಿ ಮಹಮದ್‌ರಂತೆ ಸಂಪತ್ತನ್ನೆಲ್ಲ ಲೂಟಿ ಮಾಡಿ ಬೇರೆ ದೇಶಕ್ಕೆ ಹೊತ್ತೊಯ್ಯಲಿಲ್ಲ. ಅವರು ಯಾರನ್ನೇ ಗೆದ್ದರೂ, ಎಷ್ಟೇ ಲೂಟಿ ಮಾಡಿದರೂ ಅದು ಭಾರತದ ಸಂಪತ್ತಾಗಿಯೇ ಉಳಿಯಿತು. ಇವರಾರೂ ಇನ್ನೊಂದು ದೇಶದಲ್ಲಿ ಕುಳಿತು ಇಲ್ಲಿಯ ಆಡಳಿತವನ್ನು ನಿಯಂತ್ರಿಸಲಿಲ್ಲ. ಯುರೋಪಿಯನ್ನರಂತೆ ರಾಜಕೀಯ ವಸಾಹತು ಸೃಷ್ಟಿಸಿ ದೇಶದ ಬಂಡವಾಳವನ್ನು ಲೂಟಿ ಹೊಡೆಯಲಿಲ್ಲ. ಭಾರತವನ್ನು ಗುಲಾಮಗಿರಿಗೆ ತಳ್ಳಲಿಲ್ಲ. ಸ್ವಾತಂತ್ರ್ಯ ಹೋರಾಟಗಾರರ ಎದೆಗೆ ಗುಂಡು ಹೊಡೆಯಲಿಲ್ಲ. ಪ್ರಾಚೀನ ಕಾಲದಿಂದ ಭಾರತದ ಸಂಸ್ಥಾನಗಳನ್ನು ಬೇರೆ ರಾಜರು ಆಳಿದಂತೆ ಇವರೂ ರಾಜ್ಯಭಾರ ನಡೆಸಿದರು. ಅರಸು ಪ್ರಭುತ್ವದ ಎಲ್ಲ ಮಿತಿಗಳೂ ಅವರ ಆಡಳಿತಕ್ಕಿದ್ದವು. ಆದರೆ ಅವರು ವಿದೇಶೀಯರಾಗಲು ಸಾಧ್ಯವಿಲ್ಲ. ಮುಸ್ಲಿಂ ಅರಸು ಮನೆತನಗಳ ಆಡಳಿತದ ಅವಧಿಯ ಆರಂಭದಲ್ಲಿ ಬಂದ ಕುಲೀನ ಸಮುದಾಯ ಕೂಡ ಇಲ್ಲಿಯೇ ನೆಲೆಸಿತು. ಆರ್ಯರು, ಕುಶಾನರು, ಗುರ್ಜರು, ಹೂಣರು, ಮೌರ್ಯರು ಗುಪ್ತರು ಮೊದಲಾದವರಂತೆ ದೇಶವನ್ನಾಕ್ರಮಿಸಿ ಇಲ್ಲಿಯೇ ರಾಜ್ಯಭಾರ ಮಾಡಿ ಇಲ್ಲಿಯವರೇ ಆದರು. ಮೊದಲಿನವರನ್ನು ಭಾರತೀಯರೆಂದು ಕರೆವ ಚರಿತ್ರೆ ಮುಸ್ಲಿಮರನ್ನು ಮಾತ್ರ ವಿದೇಶೀಯರೆನ್ನುವುದು ಅಚಾರಿತ್ರಿಕವಾಗಿದೆ. ತುರ್ಕರ ಕುಲಸಂಬಂಧಿಗಳಾಗಿ ಅವರಿಗಿಂತ ಮೊದಲು ಬಂದ ರಜಪೂತರನ್ನು ವಿದೇಶೀಯರೆನ್ನಬೇಕಾಗುತ್ತದೆ. ಸುಮಾರು ಒಂದು ಸಾವಿರ ವರುಷಗಳಿಂದ ಅವರು ಭಾರತದ ನಾಗರಿಕತೆ ಹಾಗೂ ಸಂಸ್ಕೃತಿಗಳ ನಿರ್ಮಾಣದಲ್ಲಿ ಪಾಲುದಾರರಾಗಿದ್ದಾರೆ. ಮಧ್ಯಯುಗದಲ್ಲಿ ತಮ್ಮ ರಾಜ್ಯದ ರಕ್ಷಣೆಯ ಉದ್ದೇಶದ ಜೊತೆಗೆ ಬ್ರಿಟಿಷರನ್ನೆದುರಿಸಲು ದೇಶೀ ರಾಜರನ್ನು ಒಂದುಗೂಡಿಸಲು ಯತ್ನಿಸಿದ್ದು ಹೈದರ್ ಮತ್ತು ಟಿಪ್ಪುಸುಲ್ತಾನ. ಬ್ರಿಟಿಷರೊಂದಿಗೆ ಹೊಂದಾಣಿಕೆ ಮಾಡಿಕೊಂಡು ದೇಶೀ ಅರಸರ ವಿರುದ್ಧ ಯುದ್ಧ ಮಾಡದ ರಾಜರೆಂದರೆ ಟಿಪ್ಪು ಮತ್ತು ಹೈದರ್ ಮಾತ್ರ. ವಿದೇಶಿಯರನ್ನು ದೇಶಬಿಟ್ಟು ಹೊಡೆದೋಡಿಸಲು ಮಕ್ಕಳನ್ನು ಒತ್ತೆ ಇಟ್ಟು ಪ್ರಾಣ ಇರುವವರೆಗೂ ಹೋರಾಡಿದ ಏಕೈಕ ರಾಜ ಟಿಪ್ಪು. ೧೮೫೭ರ ದಂಗೆಯಿಂದ ಹಿಡಿದು ಎಲ್ಲ ಭಿನ್ನಾಭಿಪ್ರಾಯ, ಮತೀಯತೆಗಳ ನಡುವೆಯೂ ಒಂದು ದೊಡ್ಡ ಸಮುದಾಯವಾಗಿ ಮುಸ್ಲಿಮರು ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಟ ನಡೆಸಿದ್ದಾರೆ. ಇಂಥ ಸಮುದಾಯವನ್ನು ಮುಸ್ಲಿಮರೆಂಬ ಏಕೈಕ ಕಾರಣಕ್ಕೆ ವಿದೇಶಿಯರೆನ್ನುವದು ಕೋಮುವಾದಿಗಳ ಕೈಯಲ್ಲಿ ಒಂದು ಅಸ್ತ್ರವಾಗಿದೆ.

**ಇ. ಮುಸ್ಲಿಮರ ರಾಕ್ಷಸೀಕರಣ**

ಪ್ರಾಚೀನ ಕಾಲದಲ್ಲಿ ನಾಸ್ತಿಕ ಮತ್ತು ಭೌತವಾದಿ ಪರಂಪರೆಗಳನ್ನು ರಾಕ್ಷಸೀಕರಿಸ ಲಾಗುತ್ತಿತ್ತು. ಮಧ್ಯಯುಗದಲ್ಲಿ ಅದನ್ನು ಮುಸ್ಲಿಮರಿಗೆ ವಿಸ್ತರಿಸಲಾಯಿತು. ಮೊದಲು ಮಧ್ಯಯುಗೀನ ಮುಸ್ಲಿಂ ರಾಜರನ್ನು ರಾಕ್ಷಸೀಕರಿಸಲಾಯಿತು, ಅದನ್ನು ಆ ಕಾಲದ ಮುಸ್ಲಿಂ ಸಮುದಾಯಗಳಿಗೆ ಅನ್ವಯಿಸಲಾಯಿತು. ನಂತರ ಸಮಕಾಲೀನ ಮುಸ್ಲಿಮರಿಗೆ ಆ ರಾಕ್ಷಸತ್ವವನ್ನು ವರ್ಗಾಯಿಸಲಾಯಿತು. ಸಮಕಾಲೀನ ಮುಸ್ಲಿಮರನ್ನು ರಾಕ್ಷಸೀಕರಿಸಲು ಮಧ್ಯಯುಗೀನ ಕಲ್ಪಿತ ಚರಿತ್ರೆಗೆ ಮೊರೆಹೋಗಲಾಯಿತು. ಮುಸ್ಲಿಮರನ್ನು ರಾಕ್ಷಸೀಕರಿಸಿ ಅವರ ವಿರುದ್ಧ ಹಿಂದೂಗಳನ್ನು ಕ್ರೌರ್ಯಕ್ಕೆ ಸಿದ್ಧಪಡಿಸುವ ಕೋಮುವಾದಿ ಸಿದ್ಧಾಂತದ ಈ ವಿಧಾನ ವಾಸ್ತವದಲ್ಲಿ ಆತ್ಮಹತ್ಯಾತ್ಮಕವಾದದ್ದು. ಯಾಕೆಂದರೆ ಅದು ಸಂಹಾರಕ್ಕೆ ಸಿದ್ಧವಾಗುವ ಹಿಂದೂಗಳನ್ನೂ ರಾಕ್ಷಸೀಕರಿಸುತ್ತದೆ. ಈ ಹಂತದಲ್ಲಿ ಅದು ಅತ್ಯಂತ ಜಾಣ್ಮೆಯಿಂದ ಹಿಂದೂ ಕೆಳವರ್ಗಗಳನ್ನು ಬಳಸಿಕೊಳ್ಳುತ್ತದೆ. ಮುಸ್ಲಿಮರ ರಾಕ್ಷಸೀಕರಣದ ಎರಡು ನೆಲೆಗಳನ್ನು ಮಾತ್ರ ಇಲ್ಲಿ ಚರ್ಚಿಸಲಾಗಿದೆ.

**ಹಿಂದೂ ದೇವಸ್ಥಾನಗಳ ನಾಶ**

ಮುಸ್ಲಿಂ ಅರಸರು ಆಕ್ರಮಣಕಾರರು, ಅವರು ಹಿಂದೂ ವಿರೋಧಿಗಳು, ಮತಾಂಧರು. ಹೀಗಾಗಿ ಹಿಂದೂ ದೇವಸ್ಥಾನಗಳನ್ನು ಉದ್ದೇಶಪೂರ್ವಕವಾಗಿಯೇ ನಾಶಮಾಡುತ್ತಾರೆ ಮತ್ತು ಅಪವಿತ್ರೀಕರಿಸುತ್ತಾರೆಂಬುದು ಕೋಮುವಾದದ ಮುಖ್ಯ ಪ್ರತಿಪಾದನೆ. ಸಮಕಾಲೀನ ಹಿಂದೂಗಳನ್ನು ಧರ್ಮಾಂಧರನ್ನಾಗಿಸಲು 'ದೇವಸ್ಥಾನ ನಾಶ'ದಂಥ ಭಾವನಾತ್ಮಕ ಸಂಗತಿಗಳನ್ನು ಬಳಸಿಕೊಳ್ಳುತ್ತಿದೆ. ಘಜನಿ ಮಹಮದ್ ತನ್ನ ದಂಡಯಾತ್ರೆಗಳಲ್ಲಿ ಹಿಂದೂ ದೇವಾಲಯಗಳನ್ನು ಹಾಗೂ ಔರಂಗಜೇಬನು ವಿಶ್ವನಾಥ ದೇವಾಲಯವನ್ನು ನಾಶಪಡಿಸಿದ್ದನ್ನು ಉದಾಹರಣೆಯಾಗಿ ನೀಡಲಾಗುತ್ತದೆ. ಆದರೆ ಇದು ಏಕಪಕ್ಷೀಯವಾಗಿ ಆಯ್ದು ಕಟ್ಟಿದ ಚರಿತ್ರೆ. ಧರ್ಮ ಭೇದವಿಲ್ಲದೆ ಅರಸರು ದಾಳಿ ಮಾಡಿದ ಪ್ರದೇಶದ ದೇವಾಲಯಗಳನ್ನು ನಾಶ ಮಾಡುತ್ತಿದ್ದರು. ಮರಾಠರು ಶೃಂಗೇರಿಯ ಮಠವನ್ನು ಧ್ವಂಸಮಾಡಿದ್ದರು. ಅದಕ್ಕೆ ಟಿಪ್ಪು ಸುಲ್ತಾನ ದಾನದತ್ತಿ ನೀಡಿದ್ದ. ಔರಂಗಜೇಬ ಗೋಲ್ಕಂಡದ ಜುಮ್ಮಾ ಮಸೀದಿಯನ್ನು ನಾಶಮಾಡಿದ್ದ. ಪರ್ಮರಾಜ ಸುಭಟವರ್ಮ ಗುಜರಾತ್‌ದ ದಭೋಯ್ ಹಾಗೂ ಕ್ಯಾಂಬೆ ದೇವಸ್ಥಾನಗಳನ್ನು ನಾಶಮಾಡಿದ್ದ. ''ಮೊಗಲ್ ಸೈನ್ಯ ಬಾಗ್ದಾದ್ ಮೇಲೆ ನಡೆಸಿದ ಒಂದು ವಾರದ ದಾಳಿಯಲ್ಲಿ ಹತ್ತು ಲಕ್ಷ ಮುಸ್ಲಿಮರು ಸತ್ತರು. ಆ ಅವಧಿಯಲ್ಲಿ ಮುಸ್ಲಿಂ ನಾಗರಿಕತೆಯು ಪ್ರಪಂಚದಲ್ಲಿಯೇ ದೇದೀಪ್ಯಮಾನವಾಗಿತ್ತು.



ಈ ಮಾರಣಾಂತಿಕ ಆಘಾತದಿಂದ ಮತ್ತೆಂದೂ ಸುಧಾರಿಸಲಿಲ್ಲ.'' ಘಜನಿ ಮಹ್ಮದ ಸೋಮನಾಥ ದೇವಾಲಯವನ್ನು ನಾಶಮಾಡುವ ಮೊದಲು ಮುಲ್ತಾನಿನ ಮಸೀದಿಯನ್ನು ಧ್ವಂಸಗೊಳಿಸಿದ್ದ. ಘಜನಿಯ ಸೋಮನಾಥ ದೇವಾಲಯದ ಮೇಲಿನ ಆಕ್ರಮಣಕ್ಕೆ ಥಾನೇಶ್ವರ ಆನಲ್‌ಪಾಲ್ ಎಂಬ ಹಿಂದೂ ದೊರೆ ಸಹಾಯ ಮಾಡಿದ್ದ. ಘಜನಿಯ ಸೈನ್ಯದಲ್ಲಿ ಸೋಮನಾಥ ದೇವಾಲಯದ ಆಕ್ರಮಣ ಸಂದರ್ಭದಲ್ಲಿ ಹಿಂದೂ ದೊರೆ ಸಹಾಯ ಮಾಡಿದ್ದ. ಘಜನಿಯ ಸೈನ್ಯದಲ್ಲಿ ಸೋಮನಾಥ ದೇವಾಲಯದ ಆಕ್ರಮಣ ಸಂದರ್ಭದಲ್ಲಿ ಹಿಂದೂ ದಂಡನಾಯಕರಿದ್ದರು. ಕಾಶ್ಮೀರದ ದೊರೆ ಕಲ್ಹಣ ಹಣದ ಕೊರತೆಯಾದಾಗ ತನ್ನದೇ ರಾಜ್ಯದ ನಾಲ್ಕು ದೇವಾಲಯಗಳನ್ನು ಲೂಟಿ ಮಾಡಿದ್ದ. ಅದಕ್ಕಾಗಿ 'ವಿಗ್ರಹ ಮೂಲೋತ್ಪಾಟಕ' ಎಂಬ ಮಂತ್ರಿಯನ್ನೇ ನಿಯಮಿಸಿದ್ದ. ಹೀಗೆ ಮಧ್ಯಕಾಲೀನ ರಾಜರ ವಿಗ್ರಹಭಂಜನೆಯ ಅನೇಕ ಕಥನಗಳು ಬಿಚ್ಚಿಕೊಳ್ಳುತ್ತವೆ.

ಮೇಲಿನ ನಿದರ್ಶನಗಳು ವಿಗ್ರಹನಾಶ ಹಾಗೂ ದೇವಾಲಯದ ಲೂಟಿಗೂ ಧಾರ್ಮಿಕ ದ್ವೇಷಕ್ಕೂ ಹೆಚ್ಚಿನ ಸಂಬಂಧ ಇಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತವೆ. ಮಧ್ಯಕಾಲೀನ ಪ್ರಭುಗಳು ಹಿಂದೂ - ಮುಸ್ಲಿಂ ಭೇದವಿಲ್ಲದೆ ದೇವಾಲಯಗಳನ್ನು ನಾಶಪಡಿಸಿದ್ದಕ್ಕೆ ಹಲವಾರು ಕಾರಣಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ದೇವಾಲಯಗಳು ಸಂಪತ್ತಿನ ತಾಣವಾಗಿದ್ದವು. ಹೀಗಾಗಿ ದಾಳಿಕೋರ ಹಾಗೂ ಈ ಲೂಟಿಕೋರ ಪ್ರಭುಗಳ ಆಕ್ರಮಣಕ್ಕೆ ತುತ್ತಾಗುತ್ತಿದ್ದವು. ದೇವಾಲಯಗಳು ಶತ್ರು ರಾಜನಿಗೆ ಧಾರ್ಮಿಕ ಮನ್ನಣೆ ನೀಡುವ ರಾಜತ್ವದ ಸಂಕೇತಗಳಾಗಿದ್ದವು. ಹೀಗಾಗಿ ದೇವಾಲಯದ ನಾಶ ದಿಗ್ವಿಜಯದ ಪ್ರತೀಕವಾಗಿತ್ತು. ಅನುಮತಿ ಇಲ್ಲದೇ ಕಟ್ಟಿದ ದೇವಾಲಯಗಳನ್ನು, ಅವಿಧೇಯ ರಾಜನನ್ನು ಶಿಕ್ಷಿಸಲು ಅವನ ಪ್ರದೇಶದ ದೇವಾಲಯಗಳನ್ನು, ಪರಸ್ಪರ ವ್ಯಾಜ್ಯಕ್ಕೆ ಕಾರಣವಾದ ದೇವಾಲಯಗಳನ್ನು, ಸಾಮಾನ್ಯವಾಗಿ ನಾಶಪಡಿಸಲಾಗುತ್ತಿತ್ತು. ದೇವಾಲಯ ನಾಶದಂಥ ರಾಜಕೀಯ ಕ್ರಿಯೆ ಧಾರ್ಮಿಕ ಅಸಹನೀಯತೆಯನ್ನು ಹುಟ್ಟುಹಾಕಬಹುದೆಂಬ ಎಚ್ಚರಿಕೆಯಿಂದಲೇ ಬಾಬರನು ತನ್ನ ಉಯಿಲಿನಲ್ಲಿ ತನ್ನ ಆಳ್ವಿಕೆಗೆ ಸೇರಿದ ಪ್ರಾಂತ್ಯದಲ್ಲಿ ಯಾವುದೇ ಪೂಜಾಸ್ಥಳಗಳನ್ನು ನಾಶಮಾಡಬೇಡ ಎಂದು ಮಗನಿಗೆ ಹೇಳಿದ್ದ. ಮಧ್ಯಕಾಲೀನ ಪ್ರಭುತ್ವದ ಸಾಮಾನ್ಯ ಲಕ್ಷಣವಾಗಿದ್ದ ದೇವಾಲಯನಾಶದಂಥ ಪರಿಕಲ್ಪನೆಗಳನ್ನು ಮತೀಕರಿಸುವಲ್ಲಿ ಕೋಮುವಾದಿ ಚರಿತ್ರೆಯ ತಂತ್ರವನ್ನು ಗಮನಿಸಬಹುದು. ಅದು ಮುಸ್ಲಿಂ ಅರಸರು ನಾಶಪಡಿಸಿದ ಹಿಂದೂ ದೇವಾಲಯಗಳ ಘಟನೆಗಳನ್ನು ಮಾತ್ರ ಆಯ್ದುಕೊಳ್ಳುತ್ತದೆ. ಹಾಗೂ ಅದಕ್ಕೆ ಇರುವ ಮೇಲ್ಕಾಣಿಸಿದ ಚಾರಿತ್ರಿಕ ಕಾರಣಗಳನ್ನು ಮರೆಮಾಚುತ್ತದೆ. ಅದಕ್ಕೆ ಇಸ್ಲಾಂ ಧರ್ಮದ ಮೂಲ ತಾತ್ವಿಕತೆಯಾದ 'ವಿಗ್ರಹಭಂಜನೆ'ಯನ್ನು ಲಗತ್ತಿಸುತ್ತದೆ. ಕಂದಾಯವನ್ನು ಸುಲ್ತಾನನಿಗೆ ಸಲ್ಲಿಸದೇ ಸಂಪತ್ತನ್ನು ನೆಲದಲ್ಲಿ ಹೂಳಿ ಅದರ ಮೇಲೆ ಕಟ್ಟಿಸಿದ ಗೋಲ್ಕೊಂಡದ ಜುಮ್ಮಾ ಮಸೀದಿಯನ್ನು ಔರಂಗಜೇಬನು ನಾಶಪಡಿಸಿದ್ದನ್ನು ಮರೆಯುತ್ತದೆ. ಘಜನಿ ಮಹಮದ್ ನಾಶಮಾಡಿದ ಮುಲ್ತಾನಿನ ಮಸೀದಿ ಪ್ರಕರಣವನ್ನು ಬಿಟ್ಟುಕೊಡುತ್ತದೆ. ಔರಂಗಜೇಬನು, ಹಿಂದೂ ರಾಣಿಯೊಬ್ಬಳ ಮೇಲೆ ಅತ್ಯಾಚಾರ ನಡೆದು ದೇವಾಲಯ ಅಪವಿತ್ರೀಕರಣಗೊಂಡಿತೆಂಬ ಕಾರಣಕ್ಕೆ ವಿಶ್ವನಾಥ ದೇವಾಲಯವನ್ನು ನಾಶಮಾಡಿದ ಕಾರಣವನ್ನೂ, ಮೂರ್ತಿಯನ್ನು ಮತ್ತೊಂದೆಡೆ ಸಾಗಿಸಿದ ವಾಸ್ತವವನ್ನೂ ವಿಸ್ಮೃತಿಗೆ ತಳ್ಳುತ್ತದೆ. ಔರಂಗಜೇಬನು ದೇವಾಲಯಗಳಿಗೆ ನೀಡಿದ ದಾನ ದತ್ತಿಗಳನ್ನು ಪರಿಗಣಿಸುವುದೇ ಇಲ್ಲ. ಹೀಗಾಗಿ ಮಧ್ಯಕಾಲೀನ ಚರಿತ್ರೆಯನ್ನು ಬೇರೆಯದೇ ನೆಲೆಯಿಂದ ಅವಲೋಕಿಸಬೇಕಿದೆ. ''ಮುಸ್ಲಿಂ ದೊರೆಗಳು ಎಷ್ಟು ದೇವಾಲಯಗಳನ್ನು ಕಟ್ಟಿಸಿದ್ದಾರೆ ಮತ್ತು ದಾನ ದತ್ತಿಗಳನ್ನು ದೇವಸ್ಥಾನಗಳಿಗೆ ನೀಡಿದ್ದಾರೆ ಹಾಗೂ ಹಿಂದೂ ದೊರೆಗಳು ಎಷ್ಟು ಮಸೀದಿಗಳನ್ನು ಕಟ್ಟಿಸಿದ್ದಾರೆ ಮತ್ತು ದಾನ ದತ್ತಿಗಳನ್ನು ನೀಡಿದ್ದಾರೆ ಎಂಬ ಪಾಸಿಟಿವ್ ಆದ ಮನೋಧರ್ಮದಿಂದಲೂ ಇತಿಹಾಸವನ್ನು ಅವಲೋಕಿಸಬೇಕಿದೆ.'' ಉಜ್ಜಯಿನಿಯ ಮಹಾಕಾಲೇಶ್ವರ, ಚಿತ್ರಕೂಟದ ಬಾಲಾಜಿ ಮಂದಿರ, ಗೌಹಾತಿಯ ಉಮಾನಂದ ಮಂದಿರ, ಶತರಂಜಿಯ ಜೈನ ಬಸದಿ ಹಾಗೂ ಉತ್ತರ ಭಾರತದ ಅನೇಕ ಗುರುದ್ವಾರಗಳಿಗೆ ಔರಂಗಜೇಬ್ ನೀಡಿದ ದಾನದತ್ತಿಗಳನ್ನು ಗಮನಿಸಿದರೆ ಹಾಗೂ ಆ ಕಾಲದ ಪ್ರಸಿದ್ಧ ಬೌದ್ಧ ಹಾಗೂ ಜೈನ ಕೇಂದ್ರಗಳಿಗೆ ಭೇಟಿ ಕೊಟ್ಟಿರುವದನ್ನು ನೆನಪಿಸಿಕೊಂಡರೆ, ಭಾರತದ ಚರಿತ್ರೆಯಲ್ಲಿ ಅವನಿಗೆ ಕಟ್ಟಿದ 'ಮತಾಂಧ' ಎಂಬ ಬಿರುದನ್ನು ಮರುಪರಿಶೀಲಿಸಬೇಕಾಗುತ್ತದೆ.



ಡಾ|| ಬಿ. ಎನ್. ಪಾಂಡೆಯವರು ೧೯೭೭ ಜನವರಿ ೨೯ರಂದು ಸಂಸತ್ತಿನಲ್ಲಿ ಔರಂಗಜೇಬನ ಆದೇಶ ದಾನದತ್ತಿಗಳನ್ನು ಕುರಿತು ಹಾಗೂ ಬ್ರಿಟಿಷರ ವಿಚ್ಛಿದ್ರಕಾರಿ ಚರಿತ್ರೆಯನ್ನು ಕುರಿತು ಮಾತನಾಡಿದಾಗ ಸಂಸತ್ತಿಗೆ ಸಂಸತ್ತೇ ದಿಗ್ಭ್ರಮೆಗೊಳಗಾಯಿತಂತೆ. ಈ ಘಟನೆ ನಡೆದು ಮೂರು ದಶಕಗಳು ಕಳೆದರೂ ಇಂದಿಗೂ ಭಾರತದ ಚರಿತ್ರೆಯ ಪಠ್ಯಗಳಲ್ಲಿ ಮತಾಂಧ ಔರಂಗಜೇಬ ವಿಜೃಂಭಿಸುತ್ತಿದ್ದಾನೆ. ಮಧ್ಯಯುಗೀನ ಚರಿತ್ರೆಯ ನಿರ್ಮತೀಕರಣಕ್ಕೆ ಡಾ|| ಪಾಂಡೆಯಂಥವರು ಅನುಸರಿಸಿದ ಮಾರ್ಗ ರೋಮಾಂಚನಕಾರಿಯಾದುದು. ಆ ಜವಾಬ್ದಾರಿಯನ್ನು ಇಂದು ಸಾಹಿತ್ಯ ಹಾಗೂ ಸಾಂಸ್ಕೃತಿಕಲೋಕ ಮುಂದುವರಿಸಬೇಕಾಗಿದೆ.

**ಒತ್ತಾಯದ ಮತಾಂತರ**

''ಭಾರತದ ಬಡಜನತೆಯಲ್ಲಿ ಮುಸ್ಲಿಮರೇ ಹೆಚ್ಚಾಗಿರುವದೇಕೆ ? ಅವರನ್ನೆಲ್ಲ ಕತ್ತಿಯ ಸಹಾಯದಿಂದ ಮತಾಂತರಗೊಳಿಸಿಲಾಯಿತೆಂದು ಹೇಳುವುದು ಮೂರ್ಖತನ. ಜಮೀನ್ದಾರರಿಂದ ಮತ್ತು ಪುರೋಹಿತರಿಂದ ಮುಕ್ತಿ ಪಡೆಯಲು ಅವರು ಮತಾಂತರ ಹೊಂದಿರಬೇಕು.'' ಎಂದು ಸ್ವಾಮಿ ವಿವೇಕಾನಂದ ಪ್ರತಿಪಾದಿಸಿದ್ದರು. ವಿವೇಕಾನಂದರ ಭಾವ ಚಿತ್ರವನ್ನು ಹೊತ್ತು ಮೆರೆಸುವ ಹಾಗೂ ಅವರನ್ನು 'ಹಿಂದುತ್ವದ ಪ್ರತಿಪಾದಕ'ರೆಂಬಂತೆ ಬಳಸಿಕೊಳ್ಳುವ ಕೋಮುವಾದ ವಿವೇಕಾನಂದರ ಇಂಥ ವಿಚಾರಗಳನ್ನು ಬದಿಗೆ ಸರಿಸುತ್ತದೆ. ಖಡ್ಗದ ಬಲದಿಂದ ಆರ್ಥಿಕ ಆಮಿಷಗಳಿಂದ ಹಾಗೂ ತೆರಿಗೆಯ ಭಾರದಿಂದ ಹಿಂದೂ ಜನತೆಯನ್ನು ಮತಾಂತರಿಸಲಾಯಿತೆಂದೇ ಪ್ರತಿಪಾದಿಸುತ್ತದೆ. ಇದು ಧಾರ್ಮಿಕ ಸಮುದಾಯದ ರಾಕ್ಷಸೀಕರಣದ ಇನ್ನೊಂದು ಮುಖ್ಯ ನೆಲೆ. ಬಾಬರನು ತನ್ನ ಉಯಿಲಿನಲ್ಲಿ ''ಖಡ್ಗ ಮತ್ತು ದಬ್ಬಾಳಿಕೆಗಿಂತ ಉಪಕಾರ ಮತ್ತು ಪ್ರೀತಿಯಿಂದ ಇಸ್ಲಾಂ ಪ್ರಸಾರವಾಗುತ್ತದೆ'' ಎಂದು ಹುಮಾಯೂನನಿಗೆ ಮಾರ್ಗದರ್ಶನ ನೀಡಿದ್ದ. ಖಡ್ಗ ಮತ್ತು ದಬ್ಬಾಳಿಕೆಗಳಿಂದ ಅಪರೂಪಕ್ಕೆ ಮತಾಂತರಿಸುವ ಪ್ರಯತ್ನಗಳ ಬಗ್ಗೆ ಕೂಡ ಈ ಉಯಿಲು ಸುಳಿವು ನೀಡುತ್ತದೆಯಾದರೂ ಉಪಕಾರ ಮತ್ತು ಪ್ರೀತಿಯ ಮತಾಂತರ ಬಹುಪಾಲು ಮುಸಲ್ಮಾನ ಪ್ರಭುಗಳ ನಿಲುವಾಗಿತ್ತೆಂಬುದನ್ನು ಸೂಚಿಸುತ್ತದೆ. ಸಾವಿರಾರು ವರುಷಗಳಿಂದ ಊರ ಹೊರಗಿನ ಕೇರಿಗಳಲ್ಲಿ ನರಕಸದೃಶ್ಯವಾದ ಬದುಕನ್ನು ಸವೆಸುತ್ತಿದ್ದ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ಧಾರ್ಮಿಕ ಸ್ವಾತಂತ್ರ್ಯಗಳಿಂದ ಹತ್ತಿಕ್ಕಲ್ಪಟ್ಟಿದ್ದ ಜನಸಮುದಾಯಕ್ಕೆ ಇಸ್ಲಾಂ ಎಲ್ಲ ಬಗೆಯ ಸ್ಪೃಶ್ಯತೆಯ ಸುಖವನ್ನು ನೀಡಿತು. ನಗರದ ಹೊರವಲಯಗಳಲ್ಲಿ ವಾಸಿಸಿಕೊಂಡು ನಿಕೃಷ್ಟ ಜೀವನ ನಡೆಸುತ್ತಿದ್ದ ಇವರಿಗೆ ತುರುಕರ ಆಗಮನದಿಂದ ನಗರದ ಒಳಗೆ ಜೀವಿಸುವ ಅವಕಾಶ ಲಭ್ಯವಾಗಿತ್ತು.

''ಬಂಗಾಳ ಮತ್ತು ಕಾಶ್ಮೀರದ ಶೋಷಿತ ರೈತರ ಒಂದು ದೊಡ್ಡ ಭಾಗ ಕೂಡ ಇದೇ ದಾರಿ ಹಿಡಿಯಿತು. ಮುಸ್ಲಿಂ ಅರಸೊತ್ತಿಗೆಯ ಆರಂಭದ ಕಾಲದಲ್ಲಿ ಅಧಿಕಾರಾಕಾಂಕ್ಷೆಯಿಂದ ಹಿಂದೂ ಕುಲೀನ ವರ್ಗ ಮತಾಂತರಗೊಂಡಿತು. ಆದರೆ ಜಾತಿ, ಹಿಂಸೆ ಮತ್ತು ಜಮೀನ್ದಾರಿ ದಬ್ಬಾಳಿಕೆಗೆ ತುತ್ತಾಗಿ ಬಹುಪಾಲು ಮತಾಂತರ ನಡೆದಿರುವದು ನಿರ್ವಿವಾದ. ಟಿಪ್ಪು ಒತ್ತಾಯದ ಮತಾಂತರ ಮಾಡಿಸಿದ ಎಂದು ಆರೋಪವನ್ನು ಮಾಡಲಾಗುತ್ತದೆ. ಕೊಡಗಿನ ಕೆಳಜಾತಿಯ ಒಂದು ಸಮೂಹ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಿಸಲು ಯತ್ನಿಸಿದಾಗ ಟಿಪ್ಪು ಅವರನ್ನು ಮತಾಂತರವಾಗುವುದೇ ಆದರೆ ಬಾದಷಹನ ಧರ್ಮಕ್ಕೇಕೆ ಮತಾಂತರವಾಗಬಾರದು ?'' – ಎಂದು ಮನವೊಲಿಸಿದ್ದು, ಇದರಲ್ಲಿ ದಬ್ಬಾಳಿಕೆ ಹಾಗೂ ಮತಾಂಧತೆಗಿಂತ ಸ್ವಮತ ಪ್ರಚಾರದ ನಿಷ್ಠೆ ಇದೆ. 'ಜಸಿಯಾ' ಎಂಬ ತೆರಿಗೆಯನ್ನು ವಿಧಿಸಿ ಕಿರುಕುಳ ಕೊಡುವದರ ಮೂಲಕ ಮತಾಂತರಿಸಲಾಯಿತೆಂಬ ಆರೋಪದಲ್ಲಿ ಹುರುಳಿಲ್ಲ ಎಂಬುದನ್ನು ವಿದ್ವಾಂಸರು ಸ್ಪಷ್ಟಪಡಿಸಿದ್ದಾರೆ.

''ಬಂಡಾಯ ಎಬ್ಬಿಸಿದವರನ್ನು, ರಾಜ್ಯಕ್ಕೆ ನಿಷ್ಠೆ ತೋರದವರನ್ನು, ಇನ್ಯಾವುದೇ ಅಪರಾಧ ಎಸಗಿದವರನ್ನು ಮತಾಂತರಗೊಳಿಸಲಾಗುತ್ತಿತ್ತು. ಮತಾಂತರಕ್ಕೆ ಈ ನೆಲೆಯಿಂದ ಒಂದು ಶಿಕ್ಷೆಯ ಆಯಾಮವಿದೆ. ಆದರೆ ಆಳದಲ್ಲಿ ಮತ ಮತ್ತು ರಾಜಕಾರಣದ ನಡುವಿನ ಸಂಬಂಧವನ್ನು ಸ್ಪಷ್ಟಪಡಿಸುತ್ತದೆ. ಸ್ವಮತದವರು ಸ್ವ-ರಾಜ್ಯಕ್ಕೆ, ಸ್ವ-ರಾಜ್ಯ ಪ್ರಭುತ್ವಕ್ಕೆ

ಹೆಚ್ಚು ನಿಷ್ಠರು ಎಂಬ ನಂಬಿಕೆ ಈ ಬಗೆಯ ಮತಾಂತರಗಳಲ್ಲಿ ಕೆಲಸ ಮಾಡಿದೆ. ಗಲ್ಲಿಗೇರಿಸುವದರ ಬದಲಾಗಿ ಸ್ವಧರ್ಮದಲ್ಲಿ ಬದುಕಲು ಅವಕಾಶ ನೀಡುವ ಈ ವಿಧಾನದಲ್ಲಿ ಮಾನವೀಯತೆಯೂ ಇದೆ, ವ್ಯಕ್ತಿಸ್ವಾತಂತ್ರ್ಯ ಹರಣದ ದೌರ್ಜನ್ಯವೂ ಇದೆ.

ಮತಾಂತರದ ಹಕ್ಕನ್ನೇ ಮೊಟಕುಗೊಳಿಸಲು ಯತ್ನಿಸುತ್ತಿರುವ ಕೋಮುವಾದವು ಕೆಲವು ರಾಜ್ಯಗಳಲ್ಲಿ ಮತಾಂತರ ವಿರೋಧಿ ಕಾನೂನನ್ನು ಜಾರಿಗೆ ತರಲು ಯತ್ನಿಸಿದೆ. ಭಾರತದ ಮತಧರ್ಮಗಳ ಚಾರಿತ್ರಿಕ ಕಲ್ಪನೆ ಇರುವವರ್‍ಯಾರೂ ಮತಾಂತರವನ್ನು ವಿರೋಧಿಸಲು ಸಾಧ್ಯವಾಗುವದಿಲ್ಲ. ಚರಿತ್ರೆಯನ್ನು ತಿರುಚುವವರಿಗೆ ಮಾತ್ರ ಇದು ಸುಲಭಸಾಧ್ಯ. ವರ್ತಮಾನದ ಕೋಮುವಾದಿ ಹಿತಾಸಕ್ತಿಗಳ ಒತ್ತಡದಲ್ಲಿ ಮಧ್ಯಯುಗೀನ ಮತಾಂತರವನ್ನು ವಿಕೃತವಾಗಿ ಕಟ್ಟಿಕೊಡಲಾಗಿದೆ.

**ಈ. ಪ್ರಭುತ್ವ ಮತ್ತು ಧಾರ್ಮಿಕ ಸಾಮರಸ್ಯ**

ಮಧ್ಯಯುಗೀನ ಹಿಂದೂ-ಮುಸ್ಲಿಂ ಸಂಬಂಧ ಆಳುವವರ್ಗದ ನೆಲೆಯಲ್ಲಿ ಮತಾತೀತವಾದ ಪ್ರಭುನಿಷ್ಠೆ ಮತ್ತು ಪ್ರಭುತ್ವನಿಷ್ಠೆಯನ್ನು ರೂಪಿಸಿಕೊಂಡಿರುವುದು ಆಕರ್ಷಕವಾಗಿ ಕಾಣಿಸುತ್ತದೆ. ಹಿಂದೂ-ಮುಸ್ಲಿಂ ರಾಜರುಗಳನ್ನು ಅವರವರ ಧರ್ಮ ಮತ್ತು ಸಮುದಾಯಗಳ ವಾರಸುದಾರರಂತೆಯೇ ಧರ್ಮದ ವರ್ಗೀಕರಣದ ಹಿನ್ನೆಲೆಯಲ್ಲಿ ಅವರಿಬ್ಬರ ನಡುವೆ ಯುದ್ಧಗಳು ಶಾಶ್ವತವಾಗಿ ನಡೆಯುತ್ತಿದ್ದವು ಎಂಬಂತೆ ಚಿತ್ರಿಸಲಾಗುತ್ತದೆ. ಇಲ್ಲಿ ಒಂದು ಬಗೆಯ ಧರ್ಮಯುದ್ಧದ ಪ್ರತಿಪಾದನೆ ಕಂಡುಬರುತ್ತದೆ. ಆದರೆ ಮಧ್ಯಕಾಲೀನ ಪ್ರಭುತ್ವದ ಸಾಮಾನ್ಯ ವಿವರಗಳೂ ಕೂಡ ಕೋಮುವಾದದ ಕುತರ್ಕಗಳನ್ನು ಬುಡಮೇಲು ಮಾಡುತ್ತವೆ.

ರಾಷ್ಟ್ರೀಯವಾದಿ ಹೋರಾಟಕ್ಕೆ ಟಿಳಕರು 'ಶಿವಾಜಿ ಜಯಂತಿ'ಯನ್ನು ಆಚರಿಸಲು ಆರಂಭಿಸಿದಾರಭ್ಯ ಶಿವಾಜಿಯನ್ನು ಹಿಂದುತ್ವದ ಸಂಕೇತವಾಗಿ ರೂಪಿಸಲಾಯಿತು. ಆತ ಹಿಂದೂ ರಾಷ್ಟ್ರದ ರಾಷ್ಟ್ರೀಯ ನಾಯಕನಾದ. ಮಹಾ ಮುಸ್ಲಿಮ ದ್ವೇಷಿಯಂತೆ ಚಿತ್ರಿಸಲ್ಪಟ್ಟ. ಆದರೆ ಶಿವಾಜಿಯ ವಂಶವು ಆತನ ಅಜ್ಜನ ಕಾಲದಿಂದಲೇ ಇಸ್ಲಾಮ ಸಂತರೊಂದಿಗೆ ಗೌರವದ ಸಂಬಂಧ ಇಟ್ಟುಕೊಂಡಿತ್ತು. ಶಾಹಜಿ, ಷರಫಜಿ ಎಂಬ ಮುಸ್ಲಿಂ ಹೆಸರುಗಳನ್ನು ಆತ ಮಕ್ಕಳಿಗೆ ಇಟ್ಟಿದ್ದ. ಶಿವಾಜಿ ಮುಸ್ಲಿಂ ಧರ್ಮ ಮತ್ತು ಕುರಾನ್‌ಗಳ ಬಗ್ಗೆ ಅಪಾರ ಗೌರವ ಹೊಂದಿದ್ದ ಎಂದು ಬಷಿರುದ್ದೀನ್ ಅಹಮದ್, ಎಂ. ಎಫ್. ಅಬ್ದುಲ್ ಅಲಿ ಮೊದಲಾದ ಮುಸ್ಲಿಂ ಚರಿತ್ರಕಾರರು ಬರೆಯುತ್ತಾರೆ. ಶಫಿಖಾನ್ ಎಂಬ ಮುಸ್ಲಿಂ ಲೇಖಕ ಶಿವಾಜಿಯ ಜೀವನ ಚರಿತ್ರೆ ಬರೆದಿದ್ದಾನೆ. ಶಿವಾಜಿಯ ಅಂಗರಕ್ಷಕ ಮಹಾನಿ ಮಹತರ್, ವಿದೇಶಾಂಗ ಕಾರ್ಯದರ್ಶಿ ಮುಲ್ಲಾ ಹೈದರ್, ಸೇನಾಪತಿಗಳಾದ ದೌಲತ್‌ಖಾನ್ ಹಾಗೂ ಸಿದ್ದಿ ಮಿಶ್ರಿ ಮುಸ್ಲಿಮರೇ ಆಗಿದ್ದರು. ಶಿವಾಜಿ ತಾನು ನಿತ್ಯ ಆರಾಧಿಸುವ ಜಗದೇಶ್ವರಿ ದೇವಾಲಯದೆದುರೇ ಮುಸಲ್ಮಾನ ಸಮಾಜಕ್ಕೆ ಮಸೀದಿ ಕಟ್ಟಿಸಿಕೊಟ್ಟಿದ್ದನಂತೆ. ಈ ಎಲ್ಲ ಸತ್ಯಗಳನ್ನು ಬದಿಗಿರಿಸಿ ಶಿವಾಜಿ ಹಾಗೂ ಅಫ್ಜಲ್‌ಖಾನರ ನಡುವಣ ರಾಜಕೀಯ ವೈಷಮ್ಯವೊಂದನ್ನೇ ವೈಭವೀಕರಿಸಲಾಗುತ್ತದೆ.

ಇದರ ಇನ್ನೊಂದು ಮುಖವನ್ನು ಟಿಪ್ಪುವಿನಲ್ಲಿ ನೋಡಬಹುದು. ಆತನ ದಂಡನಾಯಕ ಕೃಷ್ಣರಾವ್ ಹಾಗೂ ಮಂತ್ರಿ ಪೂರ್ಣಯ್ಯ ಬ್ರಾಹ್ಮಣರು. ೧೫೬ ಹಿಂದೂ ಮಂದಿರಗಳಿಗೆ ಆತ ದಾನ ದತ್ತಿ ನೀಡುತ್ತಿದ್ದ. ಶೃಂಗೇರಿಯ ಮಠದ ಮಠಾಧೀಶರೊಂದಿಗೆ ಸೌಹಾರ್ದಯುತ ಪತ್ರ ಸಂಬಂಧವನ್ನು ಹೊಂದಿದ್ದ. ಶಿವಾಜಿಯ ಆಕ್ರಮಣಕ್ಕೆ ತುತ್ತಾಗಿ ಧ್ವಂಸವಾಗಿದ್ದ ಶೃಂಗೇರಿ ಮಠಕ್ಕೆ ಕಾಯಕಲ್ಪ ನೀಡಿದ್ದ. ಯಾರನ್ನು ಕುರಿತು ಕೋಮುವಾದ 'ಹಿಂದೂವೀರ' ಮತ್ತು 'ಮುಸ್ಲಿಂ ಮತಾಂಧ' ಎಂದು ವರ್ಣಿಸುತ್ತದೆಯೋ ಅವರಿಬ್ಬರೂ ಪ್ರಭುತ್ವದ ಮಿತಿಯಲ್ಲಿ ಧಾರ್ಮಿಕ ಸಹಿಷ್ಣುತೆಯನ್ನು ಹೊಂದಿದವರಾಗಿದ್ದರು.

ಪೃಥ್ವಿರಾಜ ಚೌಹಾಣ್, ವಿಜಯನಗರ ಹಾಗೂ ಶಿವಾಜಿಯ ಸೈನ್ಯಗಳಲ್ಲಿ ಮುಸ್ಲಿಂ ಸೈನಿಕರು, ಸೇನಾಪತಿಗಳು ಹಾಗೂ ಸೈನಿಕ ತುಕಡಿಗಳಿದ್ದವು. ಮೊಗಲ್ ಸೈನ್ಯದಲ್ಲಿ ರಜಪೂತ ಸೇನಾಪತಿ ಇದ್ದ. ಬಹ್ಮನಿ, ಘಜನಿ ಸೇನೆಗಳಲ್ಲಿ ಹಿಂದೂ ಸಿಪಾಯಿಗಳಿದ್ದರು. ಪ್ರಾಚೀನ ಕರ್ನಾಟಕದ 'ಜೋಳವಾಳಿ' ಪದ್ಧತಿಯ ಮತಾತೀತ ರೂಪವನ್ನು ಮಧ್ಯಯುಗೀನ ಪ್ರಭುತ್ವದಲ್ಲಿ ಕಾಣಬಹುದಾಗಿದೆ.

ಹಿಂದೂ ರಾಜರು ಮುಸ್ಲಿಮ ರಾಜರ ಪರವಾಗಿ, ಮುಸ್ಲಿಮ ರಾಜರು ಹಿಂದೂ ರಾಜರ ಪರವಾಗಿ ಹೋರಾಡಿದ್ದಾರೆ. ಅಕ್ಬರ್ ಮತ್ತು ಮಾನ್‌ಸಿಂಗ್ ಮಿತ್ರರಾಗಿದ್ದರು. ರಾಣಾ ಪ್ರತಾಪ ಮತ್ತು ಹಕೀಂಶೂರ್‌ರೊಂದಿಗೆ ಕಾದಾಡಿದ್ದರು. ಔರಂಗಜೇಬ್ ಮತ್ತು ಮಿರ್ಜಾ ರಾಜಾ ಜೈನಸಿಂಗ್‌ರ ಮಿತ್ರಕೂಟವನ್ನು ಎದುರಿಸಲು ಶಿವಾಜಿ ಮುಸ್ಲಿಂ ಸೇನಾಪತಿಗಳನ್ನು ಆಶ್ರಯಿಸಿದ್ದ.

ದೆಹಲಿಯ ಸುಲ್ತಾನರು ಬಂಗಾಳ, ಗುಜರಾತ, ಬಿಜಾಪುರ, ಗುಲಬರ್ಗಾಗಳನ್ನು ಆಳಿದ ಸುಲ್ತಾನರ ವಿರುದ್ಧ ಕಾದಾಡಿದ್ದಾರೆ. ವಿಜಯನಗರದ ಅರಸರು ನೇಪಾಳ, ಒರಿಸ್ಸಾಗಳ ಹಿಂದೂ ರಾಜರ ವಿರುದ್ಧ ಹೋರಾಡಿದ್ದಾರೆ. ವಿಜಯನಗರದ ರಾಮರಾಯ ಹಾಗೂ ಅಲಿ ಆದಿಲ್‌ಶಾಹಿಗಳು ಸೇರಿ ಅಹ್ಮದ್‌ನಗರದ ಸುಲ್ತಾನರ ಮೇಲೆ ದಾಳಿ ಮಾಡಿದ್ದಾರೆ. ಶಿವಾಜಿಯ ದಕ್ಷಿಣದ ದಂಡಯಾತ್ರೆಯು ಕೆಳದಿಯನ್ನೂ ಒಳಗೊಂಡಂತೆ ಬಹುತೇಕ ಹಿಂದೂಗಳ ಮೇಲೆಯೇ ಇತ್ತು.

ಪ್ರಾಚೀನ ಕಾಲದ ಅಥವಾ ಮುಸ್ಲಿಂ ಪ್ರಭುತ್ವಪೂರ್ವ ಭಾರತದಲ್ಲಿ ಮತನಿಷ್ಠೆಯ ಕಾರಣಕ್ಕೆ ಪ್ರಭುಗಳು ಅನ್ಯಧರ್ಮದ ಸಮುದಾಯಗಳನ್ನು ಸಂಹಾರ ಮಾಡಿದ್ದಾರೆ. ಜನಸಮುದಾಯಗಳು ಧಾರ್ಮಿಕ ಸಂಘರ್ಷ ಹಾಗೂ ಹಿಂಸೆಗೆ ಇಳಿದ ಉದಾಹರಣೆಗಳಿವೆ. ಪ್ರಭುವರ್ಗ ಮತನಿಷ್ಠೆಯ ಕಾರಣಕ್ಕಾಗಿಯೇ ಅನ್ಯಧರ್ಮದ ಧಾರ್ಮಿಕ ಕೇಂದ್ರಗಳನ್ನು ನಾಶಗೊಳಿಸಿತ್ತು. ಬೌದ್ಧ, ಜೈನ ಧಾರ್ಮಿಕ ಕೇಂದ್ರಗಳಿಗಾದ ಗತಿಗೆ ಮತೀಯ ನಿಷ್ಠೆಯೇ ಕಾರಣವಾಗಿತ್ತು. ಆದರೆ ಮುಸ್ಲಿಂ ಅರಸುಗಳ ಪ್ರಭುತ್ವದಲ್ಲಿ ಧರ್ಮನಿಷ್ಠೆಗಿಂತ ಪ್ರಭುತ್ವನಿಷ್ಠೆಯೇ ಪ್ರಮುಖ ಪಾತ್ರವಹಿಸಿದೆ. ಪ್ರಭುತ್ವನಿಷ್ಠೆಯಲ್ಲಾದ ದ್ರೋಹಕ್ಕೆ ಧರ್ಮಾತೀತವಾದ ಶಿಕ್ಷೆ ಜಾರಿಯಲ್ಲಿತ್ತು. ಪ್ರಾಚೀನ ಕಾಲದಲ್ಲಿ ಧರ್ಮದ ಹಿಡಿತದಲ್ಲಿ ಪ್ರಭುತ್ವವಿದ್ದಂತೆ ಹಾಗೂ ಮಧ್ಯಕಾಲಕ್ಕೆ ಪ್ರಭುತ್ವದ ಹಿಡಿತದಲ್ಲಿ ಧರ್ಮ ಬಂದಂತೆ ತೋರುತ್ತದೆ. ಇದಕ್ಕೆ ಕಾರಣ ಭಾರತದ ಪುರೋಹಿತಶಾಹಿಯು ಆರ್ಥಿಕ ಶ್ರೇಣೀಕರಣದ ಮೇಲೆ ನಿಂತಿದ್ದು, ಮುಸಲ್ಮಾನ ಪುರೋಹಿತಶಾಹಿ ಕೇವಲ ಮತೀಯ ಆಧಾರದ ಮೇಲೆ ನಿಂತಿದೆ. ಉಲೇಮಾಗಳು ಮತಾಂಧರಾಗಿರಬಹುದು. ಆದರೆ ರಾಜ್ಯಾಡಳಿತದಲ್ಲಿ ಅವರ ಹಸ್ತಕ್ಷೇಪ ಕಡಿಮೆಯೆಂದೇ ಹೇಳಬೇಕು. ಅಥವಾ ಭಾರತದ ಮುಸ್ಲಿಂ ಪ್ರಭುತ್ವ ಆ ಹಸ್ತಕ್ಷೇಪವನ್ನು ಮತದ ಮಟ್ಟಿಗೆ ಮಾತ್ರ ಸ್ವೀಕರಿಸುತ್ತಿತ್ತೇ ಹೊರತು ಸಮಾಜದ ವರ್ಗೀಕರಣ ಹಾಗೂ ಆಡಳಿತದ ವಲಯಗಳಿಗಲ್ಲ.

ಕೋಮುವಾದವನ್ನು ವಿರೋಧಿಸುವ ಭರದಲ್ಲಿ ಈ ಸಾಮರಸ್ಯವನ್ನು ಹೆಚ್ಚು ವೈಭವೀಕರಿಸಲಾಗುತ್ತದೆ. ಆದರೆ ಇದರ ವರ್ಗಮಿತಿಯನ್ನು ಎಚ್ಚರಿಕೆಯಿಂದ ಗಮನಿಸಬೇಕಾಗುತ್ತದೆ. ಊಳಿಗಮಾನ್ಯ ವ್ಯವಸ್ಥೆಯ ಆರ್ಥಿಕ ಶ್ರೇಣೀಕರಣ ಹಾಗೂ ಅದು ಹುಟ್ಟುಹಾಕಿದ ಸಾಮಾಜಿಕ ತಾರತಮ್ಯಗಳನ್ನು ಇದು ಇನ್ನಷ್ಟು ಪ್ರಬಲಗೊಳಿಸಿತು. ಹಿಂದೂ ಮೇಲ್ವರ್ಗ ಹಾಗೂ ಮುಸ್ಲಿಮ ಕುಲೀನವರ್ಗಗಳು ಆಡಳಿತ ನಿರ್ವಹಣೆಗೆ ಮಾಡಿಕೊಂಡ ಒಪ್ಪಂದದಂತೆ ಇದು ಗೋಚರಿಸುತ್ತದೆ. ದುಡಿಯುವ ವರ್ಗದ ಶ್ರಮದ ಮಿಗುತಾಯವನ್ನು ಹಂಚಿಕೊಳ್ಳಲು ಧರ್ಮಾತೀತವಾಗಿ ಆಳುವ ವರ್ಗವು ಸಂಯೋಜನೆಗೊಂಡಿತು.

ಟಿಪ್ಪುವಿನ ಹಿಂದೂ ಸಿಪಾಯಿ ಹಾಗೂ ಶಿವಾಜಿಯ ಮುಸ್ಲಿಂ ಸಿಪಾಯಿ ಪ್ರಭುತ್ವದ ಆಕ್ರಮಣಶೀಲತೆಗೆ ತಮ್ಮ ಜೀವಗಳನ್ನು ಬಲಿಕೊಡುವದನ್ನು ಧಾರ್ಮಿಕ ಸಾಮರಸ್ಯದ ಹೆಸರಿನಲ್ಲಿ ವೈಭವೀಕರಿಸುವುದು ಅಮಾನವೀಯವಾದದ್ದು. ಪ್ರಾಚೀನಕಾಲದಲ್ಲಿ ಪ್ರಭುನಿಷ್ಠವಾಗಿದ್ದ ಧಾರ್ಮಿಕತೆಯು ಮಧ್ಯಕಾಲದಲ್ಲಿ ಪ್ರಭುತ್ವ ನಿಷ್ಠೆಯಾಗಿ ಪರಿವರ್ತನೆಯಾಯಿತು. ಹಾಗೆಯೇ ಪ್ರಾಚೀನ ಕಾಲದಲ್ಲಿ ಸ್ವ-ಧರ್ಮನಿಷ್ಠೆಯನ್ನು ಪ್ರದರ್ಶಿಸುತ್ತಿದ್ದ ಪ್ರಭುತ್ವ ಅದನ್ನು ಹಿಂದಕ್ಕೆ ಸರಿಸಿ ಬಹುಧರ್ಮೀಯತೆಯನ್ನು ರೂಪಿಸಿಕೊಂಡಿತು. ಇದು ಮುಸ್ಲಿಂ ಧರ್ಮದ ಹಾಗೂ ಮುಸ್ಲಿಂ ಪ್ರಭುತ್ವಗಳ ಆಗಮನದಿಂದ ಭಾರತದ ಸಮಾಜದಲ್ಲಿ ಕಂಡು ಬಂದ ಮುಖ್ಯ ಬದಲಾವಣೆಯಾಗಿದೆ.

ಇಸ್ಲಾಮಿನ ಪ್ರಗತಿಪರ ರೂಪವು ಭಾರತೀಯ ಸಮಾಜವನ್ನು ಆಕರ್ಷಿಸಿತ್ತು. ಆದರೆ ಮುಸ್ಲಿಂ ಪ್ರಭುಗಳು ಭಾರತದ ಶ್ರೇಣೀಕೃತ ವ್ಯವಸ್ಥೆಯೊಂದಿಗೆ ಸಂಪೂರ್ಣ ಹೊಂದಾಣಿಕೆ ಮಾಡಿಕೊಂಡಿದ್ದರಿಂದ ಸಾಮಾಜಿಕ ಬದಲಾವಣೆಗೆ ಅವಕಾಶ ಕಡಿಮೆಯಾಯಿತು. ಮತಾಂತರಿತ ಕೆಳಜಾತಿಯ ವರ್ಗ ಇಸ್ಲಾಮಿನಲ್ಲಿ ಸ್ಪೃಶ್ಯತೆಯ ಸಂಭ್ರಮವನ್ನನುಭವಿಸಿದರೂ ಸಾಮಾಜಿಕವಾಗಿ ಕೆಳಹಂತದಲ್ಲಿಯೇ ಉಳಿಯಿತು. ಶ್ರಮಿಕವರ್ಗದ ಉತ್ಪಾದನೆಯ ಮಿಗುತಾಯ ಹಂಚಿಕೆಯ ಸ್ವರೂಪದಲ್ಲಾಗಲೀ ಉತ್ಪಾದನಾ ಸಲಕರಣೆಗಳ ಬದಲಾವಣೆಯ ವಿಷಯದಲ್ಲಾಗಲೀ ಮಧ್ಯಕಾಲೀನ ಭಾರತದಲ್ಲಿ ಯಾವುದೇ ಬದಲಾವಣೆಗಳು ನಡೆಯಲಿಲ್ಲ. ಹೀಗಾಗಿ ಮಾರ್ಕ್ಸ್ ಭಾರತೀಯ ಸಮಾಜ ೧೯ನೆಯ ಶತಮಾನದವರೆಗೂ ಸ್ಥಗಿತ ಸಮಾಜವಾಗಿತ್ತು ಎಂದು ಅಭಿಪ್ರಾಯಪಡುತ್ತಾನೆ.

ಆದರೆ ವರ್ತಮಾನದಲ್ಲಿ ಧಾರ್ಮಿಕ ಹಿಂಸೆಯನ್ನು ಹುಟ್ಟುಹಾಕಲು ಮಧ್ಯಯುಗೀನ ಪ್ರಭುತ್ವಗಳನ್ನು ಹಿಂದೂ-ಮುಸ್ಲಿಂ ಎಂಬ ವರ್ಗೀಕರಣ ಮಾಡಿ ಅವುಗಳಿಗೆ ಮತಾಂಧತೆಯ ಕವಚ ತೊಡಿಸಿ ಪ್ರಚೋದನೆಗೆ ಬಳಸಿಕೊಳ್ಳುತ್ತಿರುವ ಕೋಮುವಾದಿ ಸಿದ್ಧಾಂತದ ಆಲೋಚನೆಯನ್ನು ಬುಡಮೇಲು ಮಾಡಲು ಪ್ರಭುತ್ವದ ಈ ಮತಾತೀತ ಸಾಮರಸ್ಯ ಪರಿಪೂರ್ಣವಲ್ಲದಿದ್ದರೂ ತಾತ್ಕಾಲಿಕ ಮಹತ್ವವನ್ನು ಹೊಂದಿದೆ.

*(ಮುಂದುವರಿಯುತ್ತದೆ)*

**ಡಾ|| ಎಂ. ಡಿ. ಒಕ್ಕುಂದ**
'ನೆಮ್ಮದಿ', ಸಂಖ್ಯೆ. ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ - ೫೮೦ ೦೦೩.






## ಸಿರಿಯಾದ ಮೇಲೆ ದಾಳಿ ನಡೆಸಲು ಸನ್ನಾಹ

ಸಿರಿಯಾ - ಇರಾನ್‌ಗಳ ಮೇಲೆ ದಾಳಿ ನಡೆಸಲು ಅಮೆರಿಕ ತುದಿಗಾಲ ಮೇಲೆ ನಿಂತಿದೆ. ಈ ಎರಡೂ ದೇಶಗಳನ್ನು ಮುಗಿಸಿದರೆ ಪಶ್ಚಿಮ ಏಷಿಯಾ ದೇಶಗಳ ತೈಲ ನಿಕ್ಷೇಪಗಳ ಮೇಲೆ ಏಕಸ್ವಾಮ್ಯ ಸ್ಥಾಪಿಸಿಕೊಂಡಂತಾಗುತ್ತದೆ. ಚೀಣಾ, ರಷ್ಯಾಗಳ ವಿರೋಧದಿಂದಾಗಿ ಪಾಶ್ಚಾತ್ಯ ರಾಷ್ಟ್ರಗಳ ಹಂಚಿಕೆ ಇನ್ನೂ ಸಫಲವಾಗಿಲ್ಲ, ಸಿರಿಯಾದಲ್ಲಿ ಪರಿಸ್ಥಿತಿ ಗಂಭೀರವಾಗಿದ್ದು ಅಂತರ್ಯುದ್ಧ ಸಂಭವಿಸುತ್ತಿದೆ ಎಂದು ಹೇಳಬಹುದು. ಸುದೀರ್ಘ ಕಾಲದಿಂದ ಸರ್ವಾಧಿಕಾರಿ ಆಡಳಿತ ನಡೆಸುತ್ತಿರುವ ಅಧ್ಯಕ್ಷ ಬಷಾರ್ ಅಲ್ ಅಸ್ಸಾದ್ ವಿರುದ್ಧ ಪ್ರಾರಂಭವಾದ ಜನಾಂದೋಳನ ಹಲವು ತಿರುವುಗಳನ್ನು ಪಡೆದುಕೊಂಡಿದೆ. ಸರಿಯಾದ ನಾಯಕತ್ವವಿಲ್ಲದೆ ಆಂದೋಲನ ದಿಕ್ಕುದೆಶೆ ಇಲ್ಲದೆ ವಿವಿಧ ಆಸಕ್ತಿಗಳಲ್ಲಿ ಹಂಚಿಹೋಗಿ ಒಂದು ಬಗೆಯ ಗೊಂದಲದ ಸ್ಥಿತಿ ಉಂಟಾಗಿದೆ. ಈ ಗುಂಪುಗಳಲ್ಲಿ ಉಗ್ರಗಾಮಿಗಳು, ಬಲಪಂಥೀಯರು, ಬುಡಕಟ್ಟುಗಳವರು, ಮೊದಲಾದವರಿದ್ದಾರೆ. ಇದರ ಪ್ರಯೋಜನವನ್ನು ಅಮೆರಿಕ ಮತ್ತು ಪಾಶ್ಚಾತ್ಯ ದೇಶಗಳು ಉಪಯೋಗಿಸಿಕೊಳ್ಳುತ್ತಿವೆ. ಸರಕಾರದ ದಬ್ಬಾಳಿಕೆ ಒಂದು ಕಡೆಯಾದರೆ, ವಿವಿಧ ಹಿತಾಸಕ್ತಿಗಳ ನಡುವೆ, ಬುಡಕಟ್ಟುಗಳ ನಡುವೆ ಕಚ್ಚಾಟದಿಂದಾಗಿ ತೀವ್ರವಾದ ಸಂಕಷ್ಟಕ್ಕೀಡಾಗಿರುವವರು ಜನಸಾಮಾನ್ಯರು.

ಎರಡು ತಿಂಗಳ ಹಿಂದೆ ಹೌಲಾ ಎಂಬಲ್ಲಿ ಜರುಗಿದ ಹತ್ಯಾಕಾಂಡ ಅತ್ಯಂತ ಘೋರವಾದ್ದು. ಸರಕಾರದ ಪರ ಸೇನೆ ನಡೆಸಿದ ಹತ್ಯಾಕಾಂಡ ಇದು ಎಂಬುದು ಪಾಶ್ಚಾತ್ಯ ರಾಷ್ಟ್ರಗಳ ಅಭಿಮತ. ವಿಶ್ವಸಂಸ್ಥೆಯ ಭದ್ರತಾ ಸಮಿತಿಯಲ್ಲಿ ರಷ್ಯಾ, ಚೀಣಾಗಳ ವಿರೋಧವಿಲ್ಲದೇ ಹೋಗಿದ್ದಲ್ಲಿ ಇಷ್ಟು ಹೊತ್ತಿಗೆ ಸಿರಿಯಾದ ಕತೆ ಮುಗಿದಿರುತ್ತಿತ್ತು ಲಿಬಿಯಾದಲ್ಲಿ ಆದಂತೆ. ಹಸ್ತಕ್ಷೇಪದಿಂದಾಗಿ ನ್ಯಾಟೋ ರಾಷ್ಟ್ರಗಳ ಬಾಂಬು ದಾಳಿಗೆ ಸಹಸ್ರಾರು ಮಂದಿ ಬಲಿಯಾಗುತ್ತಿದ್ದರು. ಹೌಲಾದಲ್ಲಿ ನಡೆದ ಹತ್ಯಾಕಾಂಡದಲ್ಲಿ ಯಾರ್‍ಯಾರ ಕೈವಾಡವಿತ್ತು ಎಂಬುದು ಸ್ಪಷ್ಟವಾಗಿಲ್ಲ, ಸರ್ವಾಧಿಕಾರಿ ಅಸ್ಸಾದ್‌ನ ಭಂಟರೆ, ಅಲ್‌ಖೈದಾ ಪ್ರೇರಿತ ಉಗ್ರಗಾಮಿಗಳೇ, ಬುಡಕಟ್ಟುಗಳ ಮಧ್ಯೆ ನಡೆದ ಸಮರವೆ ? ಈ ಗೊಂದಲ ಇದ್ದೇ ಇದೆ. ಇತ್ತೀಚೆಗೆ, ಅಂದರೆ ಜುಲೈ ತಿಂಗಳ ನಡುವಿನಲ್ಲಿ ಸಿರಿಯಾದ ಗ್ರಾಮವೊಂದರ ಮೇಲೆ ನಡೆದ ದಾಳಿಯಲ್ಲಿ ಸುಮಾರು ೧೫೦ಕ್ಕೂ ಹೆಚ್ಚು ಮಂದಿ ಹತರಾದರೆಂದು ವರದಿಯಾಗಿದೆ. ವಿಶ್ವಸಂಸ್ಥೆಯ ವೀಕ್ಷಕರ ಪ್ರಕಾರ ಇದು ಸಿರಿಯಾದ ಸೇನೆ ನಡೆಸಿದ ಹತ್ಯಾಕಾಂಡ. ಸಿರಿಯಾದ ಮೇಲೆ ಇನ್ನಷ್ಟು ದಿಗ್ಬಂಧನಕ್ಕೆ, ಹಸ್ತಕ್ಷೇಪಕ್ಕೆ ಪಾಶ್ಚಾತ್ಯ ದೇಶಗಳು ಒತ್ತಾಯ ತರುತ್ತಿವೆ. ಒಮ್ಮತ ಮೂಡದ ಕಾರಣ ಪರಿಸ್ಥಿತಿಯಲ್ಲಿ ವ್ಯತ್ಯಾಸವಾಗಿಲ್ಲ. ಕಳೆದ ಮಾರ್ಚ್ (೨೦೧೧) ತಿಂಗಳಿಂದ ಈವರೆಗೆ ಹೆಚ್ಚು ಕಡಿಮೆ ೧೭,೦೦೦ ಮಂದಿ ಸಿರಿಯಾದಲ್ಲಿ ಹತರಾಗಿರುವರೆಂದು ಅಂದಾಜು ಮಾಡಲಾಗಿದೆ. ಪರಿಸ್ಥಿತಿ ಗಂಭೀರವಾಗಿರುವ ಕಾರಣ ಪಾಶ್ಚಾತ್ಯ ದೇಶಗಳು ಯಾವುದೇ ಸಮಯದಲ್ಲಾದರೂ ಹಸ್ತಕ್ಷೇಪ ನಡೆಸುವ ಸಂಭವವಿದೆ.

ಸಿರಿಯಾದಲ್ಲಿ ನೆಲೆಯೂರಲು ನ್ಯಾಟೋ ಪಡೆಗಳಿಗೆ ಅವಕಾಶವಾದಲ್ಲಿ ಇರಾನಿನ ಆಕ್ರಮಣ ಸುಲಭವಾಗುತ್ತದೆ. ಇದಲ್ಲದೆ ಪ್ಯಾಲಸ್ತೈನ್‌ನಲ್ಲಿ ಹಿಜ್ಬುಲ್ಲಾ ಬೆಂಬಲಿಗರನ್ನು ಸದೆಬಡಿದು ಈ ಪ್ರದೇಶದಲ್ಲಿ ತಮ್ಮ ಹಿಡಿತವನ್ನು ಬಿಗಿಗೊಳಿಸಲು ಅನುಕೂಲವಾಗುತ್ತದೆ. ಇದು ಲೆಕ್ಕಾಚಾರ. ಇರಾನಿನ ಮೇಲೆ ಯೂರೋಪಿನ ರಾಷ್ಟ್ರಗಳು ಹೊಸದಾಗಿ ತೈಲದ ಆಮದಿನ ಮೇಲೆ ವಿಧಿಸಿರುವ ಆರ್ಥಿಕ ದಿಗ್ಬಂಧನ ಜಾರಿಗೆ ಬಂದಿದೆ. ಇದಕ್ಕೆ ಪ್ರತಿರೋಧವಾಗಿ ಇರಾನ್ ಹೊರ್ಮುಜ್ ತೀರದ ಜಲಮಾರ್ಗವನ್ನು ಮುಚ್ಚುವುದಾಗಿ ಹಿಂದೆಯೇ ಬೆದರಿಕೆ ಹಾಕಿತ್ತು. ಈ ಮುಖ್ಯವಾದ ಜಲಮಾರ್ಗ ಯೂರೋಪಿನ ದೇಶಗಳಿಗೆ, ಅಮೆರಿಕಾಗೆ ಮುಖ್ಯವಾದ್ದು. ಇರಾನ್ ಅಂಥ ಕ್ರಮ ಕೈಗೊಂಡಲ್ಲಿ ಯುದ್ಧದ ಸಂಭವ ಖಚಿತ. ಇರಾನಿನ ಮೇಲೆ ಅಮೆರಿಕದ ಕೆಂಗಣ್ಣು ಬುಷ್ ಆಡಳಿತ ಕಾಲದಿಂದಲೂ ಇದೆ. ಇರಾನ್ ಅಂತರರಾಷ್ಟ್ರೀಯ ನಿಯಮಗಳನ್ನು ಉಲ್ಲಂಘಿಸಿ, ಒಪ್ಪಂದಗಳನ್ನು ಮುರಿದು ನ್ಯೂಕ್ಲಿಯರ್ ಅಸ್ತ್ರಗಳ ತಯಾರಿಕೆಯಲ್ಲಿ ರಹಸ್ಯವಾಗಿ ತೊಡಗಿದೆ ಎಂಬುದೇ ಆರೋಪ. ಈ ಬಗ್ಗೆ ಎರಡೂ ದೇಶಗಳ ಮಧ್ಯೆ ಜುಗ್ಗಾಟ ಕೆಲವು ವರ್ಷಗಳಿಂದ ನಡೆದೇ ಇದೆ. ಇರಾನಿನ ಮೇಲೆ ಒಂದಾದ ಮೇಲೆ ಒಂದು ಆರ್ಥಿಕ ದಿಗ್ಬಂಧನ ಹೇರಿದೆ. ಈಗ, ಅಂದರೆ ಜುಲೈ ತಿಂಗಳಲ್ಲಿ, ಅಮೆರಿಕ ಇರಾನಿನ ಮೇಲೆ ಇನ್ನಷ್ಟು ಆರ್ಥಿಕ ದಿಗ್ಬಂಧನ ಹೇರಿದೆ. ಇದರಿಂದಾಗಿ ಅಲ್ಲಿನ ಜನಜೀವನ ದುಸ್ತರವಾಗಿದೆ. ಅಗತ್ಯವಾದ ಔಷಧ ಸಾಮಗ್ರಿಗಳೂ ದೊರೆಯದೆ ಜನ ಪರಿತಪಿಸುತ್ತಿದ್ದಾರೆ. ಇರಾನಿನೊಂದಿಗೆ ಮಾಡಿಕೊಂಡಿರುವ ತೈಲ ಒಪ್ಪಂದವನ್ನು ರದ್ದುಗೊಳಿಸಬೇಕೆಂದು ಅಮೆರಿಕ ಭಾರತದ ಮೇಲೆ ನಿರಂತರವಾಗಿ ಒತ್ತಡ ತರುತ್ತಿದೆ. ಭಾರತ ಈ ವಿಷಯದಲ್ಲಿ ಮಾತ್ರ ಒತ್ತಡಕ್ಕೆ ಈವರೆಗೆ ಮಣಿದಿಲ್ಲ, ಆದರೆ ಅಂತರರಾಷ್ಟ್ರೀಯ ಸಂಘಟನೆಗಳಲ್ಲಿ, ಮುಖ್ಯವಾಗಿ ಅಂತರರಾಷ್ಟ್ರೀಯ ಪರಮಾಣು ಶಕ್ತಿ ಸಂಸ್ಥೆಯಲ್ಲಿ ಒತ್ತಡಕ್ಕೆ ತಲೆಬಾಗಿ ಅಮೆರಿಕದ ನಿರ್ಣಯಗಳಿಗೆ ಬೆಂಬಲ ನೀಡಿದೆ. ಈಗಲೂ ಭಾರತ ಸರಕಾರ ಇರಾನಿನ ವಿಷಯದಲ್ಲಿ ಖಚಿತವಾದ ನಿಲುವು ತಳೆಯದೆ ಡೋಲಾಯಮಾನ ಸ್ಥಿತಿಯಲ್ಲಿದೆ. ಅಮೆರಿಕ ಮಾತ್ರ ಇರಾನಿನ ಮೇಲೆ ಒತ್ತಡ ಬಿಗಿಗೊಳಿಸುತ್ತಲೇ ಇದೆ ನಿರಂತರವಾಗಿ.

* * *

## ಅಮೆರಿಕದ ಪರೋಕ್ಷ ದಾಳಿ-ಸ್ವಯಂಚಾಲಿತ ಅಸ್ತ್ರಗಳಿಂದ



ಭಯೋತ್ಪಾದನೆಯ ವಿರುದ್ಧ ಅಮೆರಿಕ ಸಾರಿರುವ ಯುದ್ಧದಲ್ಲಿ ಸಾವಿಗೀಡಾಗುತ್ತಿರುವವರು, ಪರಿತಪಿಸುತ್ತಿರುವವರು ಜನಸಾಮಾನ್ಯರು. ಈ ಪರೋಕ್ಷ ಸಮರದಲ್ಲಿ ಅಮೆರಿಕ ಬಳಸುತ್ತಿರುವ ಮಾರಕಾಸ್ತ್ರಗಳೂ ಪರೋಕ್ಷವೇ. ಸ್ವಯಂಚಾಲಿತ ಅಸ್ತ್ರಗಳನ್ನು ಬಳಸುತ್ತಿದೆ. ಪಾಕಿಸ್ತಾನ, ಆಫ್ಘಾನಿಸ್ತಾನ, ಸೊಮಾಲಿಯ, ಯೆಮೆನ್‌ಗಳ ಮೇಲೆ ಭಯೋತ್ಪಾದಕರನ್ನು ನಿಗ್ರಹಿಸಲು ಬಳಸುತ್ತಿರುವ ಸ್ವತಶ್ಚಲಿ ಡ್ರೋನ್ ಕ್ಷಿಪಣಿಗಳು

*(೫೮ನೇ ಪುಟಕ್ಕೆ ಮುಂದುವರೆದಿದೆ)*

# ಕರ್ನಾಟಕದಲ್ಲಿ ಸಾಂಸ್ಕೃತಿಕ ಬದಲಾವಣೆ ಮತ್ತು ಭಾಷಾ ಸಮಸ್ಯೆ

**ಡಾ।। ಬಿ. ಕೃಷ್ಣಮೂರ್ತಿ**

ಭಾಷಾ ಸಮಸ್ಯೆ ಬಹುಸೂಕ್ಷ್ಮವಾಗಿಯೇ ಬದುಕಿನ ಎಲ್ಲಾ ಸ್ತರಗಳಿಗೆ ಸಂಬಂಧಪಟ್ಟಿದೆ. ಈ ಕಾರಣಕ್ಕಾಗಿ ಕನ್ನಡ ಭಾಷೆ ಮತ್ತು ಮಾಧ್ಯಮದ ಸಮಸ್ಯೆಯಲ್ಲಿ ಕರ್ನಾಟಕದಲ್ಲಿರುವವನ ಬದುಕಿನ ಸಮಸ್ಯೆಯೇ ಅಡಗಿದೆ; ಅವನ ಮುಂದಿನ ಜೀವನವೇ ಅಡಗಿದೆ; ಮುಂದಿನ ಜೀವನದ ರೂಪರೇಖೆಗಳೇ ಅಡಗಿವೆ. ಕನ್ನಡಿಗನ ಸಂಸ್ಕೃತಿಯೇ ಭಾಷಾ ಸಮಸ್ಯೆಯ ಹಿನ್ನೆಲೆಯಲ್ಲಿ ರೂಪಿತಗೊಳ್ಳಲಿದೆ.

ಇಂದು ಜಗತ್ತಿನಲ್ಲೆಲ್ಲಾ ಜನರ ಬದುಕಿನ ಅನುಭವಗಳ ನೆಲೆ ಒಂದಿಲ್ಲೊಂದು ವಿಧದಲ್ಲಿ, ಪ್ರಜ್ಞಾಪೂರ್ವಕವಾಗಿಯೋ, ಅಪ್ರಜ್ಞಾಪೂರ್ವಕವಾಗಿಯೋ, ಜಾಗತಿಕ ಚರಿತ್ರೆ ರೂಪಿಸಿರುವ ಅತ್ಯಂತ ಕ್ಲಿಷ್ಟ, ಶಕ್ತಿಯುತ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಚೌಕಟ್ಟಾದ ಜಾಗತೀಕರಣದಿಂದ ಪ್ರಭಾವಿತವಾಗಿ ತನ್ನತನವನ್ನು ರೂಪಿಸಿಕೊಳ್ಳುತ್ತಿದೆ. ಆದುದರಿಂದ ಭಾಷೆ ಮತ್ತು ಮಾಧ್ಯಮದ ಸಮಸ್ಯೆಯನ್ನೂ ಸಹ, ಬದುಕಿನ ಎಲ್ಲ ಸಮಸ್ಯೆಗಳ ಹಾಗೆ, ಜಾಗತೀಕರಣದ ಚೌಕಟ್ಟಿನಲ್ಲಿ ವಿಶ್ಲೇಷಿಸಿ ರೂಪಿಸಬೇಕು.

ಭಾಷೆ ಮತ್ತು ಮಾಧ್ಯಮದ ಸಮಸ್ಯೆಗಳಿಗೆ ಇಂದು ಸ್ಪಷ್ಟ ರೂಪ ಕೊಡಲು ವೈಜ್ಞಾನಿಕ, ಸಾಮಾಜಿಕ-ಸೈದ್ಧಾಂತಿಕ ಚೌಕಟ್ಟು ಅವಶ್ಯ. ಚಾಲನೆಯಲ್ಲಿರುವ ಸಮಾಜದ ರಚನೆ, ಸಾಂಸ್ಕೃತಿಕ ವಾತಾವರಣ ಹಾಗೂ ಇಂದು ಜನರು ಎದುರಿಸುತ್ತಿರುವ ಸಮಸ್ಯೆಗಳ ಹಿನ್ನೆಲೆಯಲ್ಲಿ ಭಾಷೆ ಮತ್ತು ಮಾಧ್ಯಮದ ಪ್ರಶ್ನೆ ಸ್ಪಷ್ಟ ರೂಪ ತಾಳುತ್ತದೆ. ಇಂದಿನ ಸಾಮಾಜಿಕ, ಸಾಂಸ್ಕೃತಿಕ ಸಮಸ್ಯೆಗಳಿಗೆ ವೈಜ್ಞಾನಿಕ ರೂಪ ಕೊಡದಿದ್ದಲ್ಲಿ, ಭಾಷೆಯ ಸಮಸ್ಯೆ, ಸಾಮಾಜಿಕ-ಚಾರಿತ್ರಿಕ ಪ್ರಸ್ತುತತೆಯ ಹಿನ್ನೆಲೆಯಲ್ಲಿ ರೂಪುಗೊಳ್ಳುವುದಿಲ್ಲ.

ಸಮಾಜದ ಬೆಳವಣಿಗೆ ವಿಷಮಸ್ಥಿತಿಯನ್ನು ಮುಟ್ಟಿದಾಗಲೆಲ್ಲ ಆ ವಿಷಮಸ್ಥಿತಿಗೆ ಕಾರಣಗಳಾದ ವಿಷಯಗಳನ್ನು ಸ್ಪಷ್ಟವಾಗಿ ಅವಲೋಕಿಸುವ ಸಾಧ್ಯತೆ ಹೆಚ್ಚುತ್ತದೆ. ಇಂದು ಜಾಗತಿಕ ಚರಿತ್ರೆಯಲ್ಲಿ ಒಂದು ವಿಷಮಘಟ್ಟವನ್ನು ತಲುಪಿದ್ದೇವೆ. ಜಾಗತೀಕರಣ - ಉಳ್ಳವರು, ಅಂದರೆ ಇದುವರೆಗೂ ವರ್ಗ ಶೋಷಣೆಯನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ಬಂದವರು, ಮುಂದಿನ ಚರಿತ್ರೆಯನ್ನೂ ಸಹ ಅದೇ ನೆಲೆಯಲ್ಲಿ ಮುಂದುವರಿಸಬೇಕೆನ್ನುವವರ ಪರವಾಗಿ ರೂಪಿಸಿರುವ ಆರ್ಥಿಕ, ರಾಜಕೀಯ ಚೌಕಟ್ಟು. ಈ ಚೌಕಟ್ಟಿನಿಂದ ಹೊರಬರದಿದ್ದಲ್ಲಿ ಮಾನವೀಯ ಮೌಲ್ಯಗಳೆಲ್ಲ ಆರ್ಥಿಕ ಹಿಂಸಾಚಾರಕ್ಕೆ, ಅಂದರೆ ವರ್ಗಶೋಷಣೆಗೆ ಎಡೆಮಾಡಿಕೊಡುವ 'ಉದಾರ' ಮೌಲ್ಯಗಳಾಗುತ್ತವೆ.

ಈ ಸಂದರ್ಭದಲ್ಲಿ ನಮ್ಮನ್ನೆದುರಿಸುತ್ತಿರುವ ಎಲ್ಲ ಚಾರಿತ್ರಿಕ, ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸುವ ಮಾರ್ಗಗಳಿಗೆ ವೈಜ್ಞಾನಿಕ ಹಾಗೂ ಚಾರಿತ್ರಿಕವಾಗಿ ಸಮಂಜಸವಾದ ರೂಪ ಕೊಡದಿದ್ದರೆ, ವರ್ಗ-ಜಾತಿ ದಬ್ಬಾಳಿಕೆ ಹಾಗೂ ಶೋಷಣೆಯ ಮೇಲೆ ನಿಂತ ಶ್ರೇಣೀಕೃತ ಸಮಾಜವನ್ನು ಮುಂದುವರಿಸಿದಂತಾಗುತ್ತದೆ. ಆದುದರಿಂದ ಭಾಷಾ ಸಮಸ್ಯೆಗೆ ಪ್ರಜ್ಞಾಪೂರ್ವಕವಾಗಿ ಈ ಚಾರಿತ್ರಿಕ ಸವಾಲುಗಳ ಹಿನ್ನೆಲೆಯಲ್ಲಿ ರೂಪವನ್ನೀಯಬೇಕು.

ಇಂದು ಭಾಷೆಯ ಸಮಸ್ಯೆಯನ್ನು ಸಾಮಾಜಿಕ, ವೈಜ್ಞಾನಿಕ ನೆಲೆಯಲ್ಲಿ ರೂಪಿಸಲು ಬೇಕಾಗುವ ನೆಲೆ ಸ್ಥೂಲವಾಗಿ ವಿಚಾರಣೆಗೆ ಒಡ್ಡಿದರೆ, ಇಂದಿನ ಚಾರಿತ್ರಿಕ ಘಟ್ಟದಲ್ಲಿ ನಮ್ಮ ಮುಂದಿರುವ ಆಯ್ಕೆ: ನಮ್ಮ ಸಮಾಜವನ್ನು ಆಮೂಲಾಗ್ರವಾಗಿಯೇ ಬದಲಾಯಿಸುವುದು (ಶೋಷಣಾರಹಿತ ಸಮಾಜದ ದಿಕ್ಕಿನಲ್ಲಿ ನಡೆಯುವುದು) ಅಥವಾ ಅಮಾನವೀಯ ತುಳಿತಕ್ಕೆ ಒಳಗಾಗಿ ಜೀವಿಸುವುದು; ಏಕೆಂದರೆ ಇಂದು ವರ್ಗ-ಜಾತಿ ಆಧಾರಿತ ಶ್ರೇಣೀಕೃತ ಸಮಾಜದಲ್ಲಿ ಸಾಮಾನ್ಯನ ಬದುಕು ಅಮಾನವೀಯ ತುಳಿತಕ್ಕೆ ಒಳಗಾಗಿದೆ.

ಈ ದಮನಕಾರಿ ಸಂಸ್ಕೃತಿ ಇಂದಿನ ಭಾಷಾ ಧೋರಣೆಯೊಡನೆ ಬಹಳ ಪರಿಣಾಮಕಾರಿಯಾದ ಹೊಂದಾಣಿಕೆ ಮಾಡಿಕೊಂಡಿದೆ. ಈ ದಮನಕಾರಿ ವ್ಯವಸ್ಥೆಯನ್ನು ದಮನಿಸಿ ಹೊಸ ಶೋಷಣಾರಹಿತ ಸಮಾಜವನ್ನು ನಿರ್ಮಿಸಬೇಕೆನ್ನುವ ಸಾಂಸ್ಕೃತಿಕ ಚಳುವಳಿ ಭಾಷಾ ಸಮಸ್ಯೆಯ ಅವಿಭಾಜ್ಯ ಅಂಗವಾಗಬೇಕು.

ಇಂತಹ ಸಾಂಸ್ಕೃತಿಕ ಚಳುವಳಿಯ ಸಂದರ್ಭದಲ್ಲಿ ಭಾಷೆ ಜ್ಞಾನಸಾಧನವಾಗಿ ಪಡೆಯುವ ಹೊಸ ಆಯಾಮಗಳಲ್ಲಿ ಬಹಳ ಮುಖ್ಯವಾದದ್ದು: ವಾಸ್ತವೀಕರಣ ಅಂದರೆ, ಬದುಕಿನ ಎಲ್ಲ ಆಗುಹೋಗುಗಳನ್ನು (ಸಾಮಾಜಿಕ, ಆರ್ಥಿಕ, ರಾಜಕೀಯ) ವಿಶ್ಲೇಷಣೆಗೆ ಒಡ್ಡಿ ಅವುಗಳ ನೆಲೆಯನ್ನು ನಮ್ಮ ಸಾಮಾಜಿಕ, ಆರ್ಥಿಕ ರಚನೆಯಲ್ಲಿ ಗುರುತಿಸುವುದು. ಹೀಗೆ ತನ್ನ ಬದುಕಿನ ಸತ್ಯ ವಾಸ್ತವೀಕರಿಸಲ್ಪಟ್ಟು ಜ್ಞಾನವಾಗಿ ವ್ಯಕ್ತಿಯ ಪ್ರಜ್ಞೆಗೆ ನಿಲುಕಿದಾಗ ಅವನು ತಾನಿರುವ ಪರಿಸರವನ್ನು ಪ್ರಜ್ಞಾಪೂರ್ವಕವಾಗಿ ಬದಲಾಯಿಸಲು, ಪುನರ್‌ಸೃಷ್ಟಿಸಲು ಪ್ರಯತ್ನಮಾಡುವ ಸಾಧ್ಯತೆ ಹೆಚ್ಚುತ್ತದೆ. ಆದರೆ ಇಂತಹ ವಾಸ್ತವೀಕರಣ ಸಹಸ್ರಾರು ವರ್ಷಗಳಿಂದ ಸತತವಾಗಿ ನಮ್ಮ ಮೇಲೇರಿರುವ ವರ್ಗ-ಶೋಷಣೆಯ ವಿರುದ್ಧ ಹಾಗೂ ಧರ್ಮ, ಆಚಾರಗಳ ಪುಷ್ಟಿಯನ್ನು ಪಡೆದಿರುವ ಪೌರಾಣೀಕರಿಸುವಿಕೆಯ ವಿರುದ್ಧ ಹೋರಾಡಬೇಕಾಗುತ್ತದೆ.

ಇಂದು ಭಾಷೆಯ ಸಮಸ್ಯೆಯನ್ನು ಸಾಮಾಜಿಕ, ವೈಜ್ಞಾನಿಕ ನೆಲೆಯಲ್ಲಿ ರೂಪಿಸಲು ಬೇಕಾಗುವ ನೆಲೆಯಲ್ಲಿ ಸ್ಥೂಲವಾಗಿ ವಿಚಾರಣೆಗೆ ಒಡ್ಡಿದರೆ, ಇಂದಿನ ಚಾರಿತ್ರಿಕ ಘಟ್ಟದಲ್ಲಿ ನಮ್ಮ ಮುಂದಿರುವ ಆಯ್ಕೆ : ನಮ್ಮ ಸಮಾಜವನ್ನು ಆಮೂಲಾಗ್ರವಾಗಿಯೇ ಬದಲಾಯಿಸುವುದು (ಶೋಷಣಾರಹಿತ ಸಮಾಜದ ದಿಕ್ಕಿನಲ್ಲಿ ನಡೆಯುವುದು) ಅಥವಾ ಅಮಾನವೀಯ ತುಳಿತಕ್ಕೆ ಒಳಗಾಗಿ ಜೀವಿಸುವುದು; ಏಕೆಂದರೆ ಇಂದು ವರ್ಗ–ಜಾತಿ ಆಧಾರಿತ ಶ್ರೇಣೀಕೃತ ಸಮಾಜದಲ್ಲಿ ಸಾಮಾನ್ಯನ ಬದುಕು ಅಮಾನವೀಯ ತುಳಿತಕ್ಕೆ ಒಳಗಾಗಿದೆ.



ಪೌರಾಣೀಕರಿಸುವಿಕೆಯ ಉದ್ದೇಶ ಏನೆಂದರೆ ಸಾಮಾಜಿಕ ವಾಸ್ತವದ ನೆಲೆಯನ್ನು ಮಾನವೇತರ ಶಕ್ತಿಗಳಲ್ಲಿ ಗುರುತಿಸಿ, ವಾಸ್ತವವನ್ನು ಮಾನವನ ಸೃಷ್ಟಿಕ್ರಿಯೆಗೆ ನಿಲುಕದಂತೆ ಮಾಡುವುದು. ಆದರೆ ಸಾಂಸ್ಕೃತಿಕ ಚಳುವಳಿಯ ಮುಖ್ಯ ಉದ್ದೇಶವೇ ಈ ಪೌರಾಣೀಕರಿಸುವುದನ್ನು ತಡೆಗಟ್ಟುವುದು ಹಾಗೂ ಈ ಪೌರಾಣೀಕರಿಸುವಿಕೆಯ ಹಿನ್ನೆಲೆಯಲ್ಲಿರುವ ವರ್ಗ-ಜಾತಿ ಶೋಷಣಾ ರಾಜಕೀಯವನ್ನು ಹೊರಗೆಡಹುತ್ತಾ ಪೌರಾಣೀಕರಿಸಲ್ಪಟ್ಟು ಹೆಪ್ಪುಗಟ್ಟಿರುವ ವ್ಯಕ್ತಿಯ ಪ್ರಜ್ಞೆಯನ್ನು ವಾಸ್ತವೀಕರಿಸುವುದು.

ಹೀಗೆ ವಾಸ್ತವೀಕರಿಸಲ್ಪಟ್ಟ ಜ್ಞಾನ, ಆಡುಭಾಷೆಯಲ್ಲಿರದಿದ್ದಲ್ಲಿ (ಕರ್ನಾಟಕದ ಸಂದರ್ಭದಲ್ಲಿ, ಕನ್ನಡದಲ್ಲಿ), ಹೊಸ ಸಮಾಜವನ್ನು ರೂಪಿಸಲು ಬೇಕಾಗುವ ಸಾಧಾರಣ ಕ್ರಿಯೆಗಳು ಸಹ ಸರಿಯಾದ ರೂಪ ತಾಳಲು ಸಾಧ್ಯವಿಲ್ಲ, ಕ್ರಾಂತಿಕಾರಿ ಕ್ರಿಯೆಯಂತೂ ದೂರ ಉಳಿಯಿತು.

ಚಾರಿತ್ರಿಕವಾಗಿ, ವೈಜ್ಞಾನಿಕವಾಗಿ ವಾಸ್ತವೀಕರಿಸಲ್ಪಟ್ಟ ಜ್ಞಾನ ಆಡು ಭಾಷೆಯಲ್ಲಿ ಪ್ರಜೆಗಳನ್ನು ಮುಟ್ಟುತ್ತಿದ್ದ ಹಾಗೆಯೇ ಸಂವಹನೆಯಲ್ಲಿ ಒಂದು ಕ್ರಾಂತಿಯೇ ಸಂಭವಿಸುತ್ತದೆ. ಹಾಗೆಯೇ ಚಾರಿತ್ರಿಕವಾಗಿ ಸಮಂಜಸವಾದ ಕ್ರಿಯೆಗೆ ಬೇಕಾಗುವ ಸಂಘಟನೆ ಹುಟ್ಟುಹಾಕಲ್ಪಡುವ ಸಂಭವ ಹೆಚ್ಚುತ್ತದೆ; ಅಂತಹ ಕ್ರಿಯೆಯಲ್ಲಿ ಭಾಗವಹಿಸಲು ಬೇಕಾಗುವ ನೈತಿಕ, ಮೌಲಿಕ ತಯಾರಿ ವ್ಯಕ್ತಿಗೆ ಸಿಗುವ ಸಂಭವ ಹೆಚ್ಚುತ್ತದೆ.

ವಾಸ್ತವೀಕರಣಕ್ಕಾಗಿ ಕನ್ನಡವನ್ನು ಪ್ರಜ್ಞಾಪೂರ್ವಕವಾಗಿ ಬಳಸಿಕೊಂಡಿರುವುದು ವಿರಳ. ಕರ್ನಾಟಕದಲ್ಲಿರುವ ಸಾಮಾನ್ಯ ಪ್ರಜೆಗೆ ಕನ್ನಡದಲ್ಲಿ ಪ್ರಬುದ್ಧತೆ ಇಲ್ಲದೇ ಇರುವುದು ಒಂದು ಕಾರಣವಾದರೆ, ಕರ್ನಾಟಕದಲ್ಲಿ ಭಾಷಾ ಸಮಸ್ಯೆಯನ್ನು ಪ್ರಗತಿಪರ ರಾಜಕೀಯ-ಸಾಮಾಜಿಕ ಸೈದ್ಧಾಂತಿಕ ಚೌಕಟ್ಟಿನಲ್ಲಿ ರೂಪಿಸದೇ ಇರುವುದು ಇನ್ನೊಂದು ಮುಖ್ಯ ಕಾರಣ. ಸಾಮಾನ್ಯ ಕನ್ನಡಿಗನಿಗೆ ಕನ್ನಡದಲ್ಲಿ ಪ್ರಬುದ್ಧತೆ ಇಲ್ಲದೇ ಇರುವುದಕ್ಕೂ ಕಾರಣ ಭಾಷಾ ಸಮಸ್ಯೆಯನ್ನು ಪ್ರಗತಿಪರ ಸೈದ್ಧಾಂತಿಕ ನೆಲೆಯಲ್ಲಿ ರೂಪಿಸದೇ ಇರುವುದು.

ಆದುದರಿಂದ ವಾಸ್ತವೀಕರಣಕ್ಕೆ ಕರ್ನಾಟಕದಲ್ಲಿ ಕನ್ನಡದಲ್ಲಿ ಪ್ರಬುದ್ಧತೆ ಹಾಗೂ ಭಾಷಾ ಸಮಸ್ಯೆಗೆ ಪ್ರಗತಿಪರ ಸೈದ್ಧಾಂತಿಕ ಚೌಕಟ್ಟು ಅತಿಮುಖ್ಯ. ಈ ಹಿನ್ನೆಲೆಯಲ್ಲಿ ಕನ್ನಡಿಗ ತನ್ನ ಬದುಕಿನಲ್ಲಿ ಅನುಭವಿಸುವ ಬದುಕಿನ ಆಯಾಮಗಳನ್ನು ಸಾಮಾಜಿಕ-ವೈಜ್ಞಾನಿಕ ಚೌಕಟ್ಟಿನಲ್ಲಿ ವಾಸ್ತವೀಕರಿಸಿಕೊಂಡು ತನ್ನ ಸಾಮಾಜಿಕ ಪ್ರಜ್ಞೆ - ಕ್ರಿಯೆಯ ಅಂಶವನ್ನಾಗಿಸಿಕೊಳ್ಳುವುದು ಸಾಂಸ್ಕೃತಿಕ ಆಂದೋಳನದ ಸೃಷ್ಟಿಗೆ ಅನಿವಾರ್ಯ. ಸಮಾಜದ ಬದಲಾವಣೆಗೆ ಕನ್ನಡಕ್ಕೆ ವಾಸ್ತವೀಕರಿಸಲ್ಪಟ್ಟ ಸತ್ಯದ ಆಧಾರ ಅತಿಮುಖ್ಯ ಪ್ರೇರಣೆ.

ಇಂದು ಜಾಗತೀಕರಣದ ಹಿನ್ನೆಲೆಯಲ್ಲಿ ಪ್ರಪಂಚದ ಯಾವ ಮೂಲೆಯಲ್ಲೇ ಆಗಲಿ ವಾಸ್ತವೀಕರಿಸಲ್ಪಡಬೇಕಾದ ಸತ್ಯ ಬಹಳ ಕ್ಲಿಷ್ಟ; ಏಕೆಂದರೆ ಬದುಕಿನ ಸತ್ಯ ಹಲವಾರು. ವಿಶ್ವದಾದ್ಯಂತ ಹರಡಿಕೊಂಡಿರುವ ಆರ್ಥಿಕ-ರಾಜಕೀಯ ಶಕ್ತಿಗಳಿಂದ ಪ್ರಭಾವಿತವಾಗುತ್ತಿದೆ. ಕರ್ನಾಟಕದ ವಾಸ್ತವ ಜಗತ್ತಿನಾದ್ಯಂತ ಆಗುತ್ತಿರುವ ಬದಲಾವಣೆಗಳ, ಸಮಸ್ಯೆಗಳ ಹಿನ್ನೆಲೆಯಲ್ಲೇ ರೂಪುಗೊಳ್ಳುತ್ತಿದೆ.

ಕನ್ನಡಿಗ ತನ್ನ ಬದುಕಿನಲ್ಲಿ ಅನುಭವಿಸುವ ಆಯಾಮಗಳನ್ನೆಲ್ಲಾ ವಾಸ್ತವೀಕರಿಸಿಕೊಂಡು ತನ್ನ ಸಾಮಾಜಿಕ ಪ್ರಜ್ಞೆಯ - ಕ್ರಿಯೆಯ ಅಂಶವನ್ನಾಗಿಸಿಕೊಳ್ಳಲು ಒಂದು ಕಡೆ ಕನ್ನಡದ ಪ್ರಬುದ್ಧತೆ ಅನಿವಾರ್ಯ. ಹಾಗೆಯೇ ವಾಸ್ತವೀಕರಿಸಲ್ಪಡಬೇಕಾದ ಕರ್ನಾಟಕದ ವಾಸ್ತವ ತನ್ನ ನೆಲೆಗಳನ್ನು ವಿಶ್ವದಾದ್ಯಂತ ಪಡೆದಿರುವುದರಿಂದ ಕನ್ನಡಕ್ಕೆ ನಿಲುಕದ ವಾಸ್ತವವನ್ನು ಅಲ್ಲಗಳೆಯಲಾಗದು. ಕರ್ನಾಟಕದಲ್ಲಿ ಇಂದು ಕನ್ನಡ ಮಾಧ್ಯಮಕ್ಕೆ ಜಗತ್ತಿನ ಮತ್ತು ತನ್ನ ಎಷ್ಟು ವಾಸ್ತವ ತಿಳಿವಳಿಕೆ ಸಿಕ್ಕಿದ್ದರೂ ಇನ್ನೂ ಬೇಕಾಗಿರುವುದು, ಬೇಕಾದಷ್ಟು ನಮ್ಮ ಪ್ರಜ್ಞೆಯ ಹೊರಗಿದೆ. ನಮ್ಮ ಕನ್ನಡಕ್ಕೆ ಸಿಗದೆ ಇರುವ ವಾಸ್ತವದ ಆಯಾಮಗಳು ಇಂಗ್ಲಿಷ್ ಮಾಧ್ಯಮಕ್ಕೆ ಸಿಗುವ ಸಾಧ್ಯತೆ ಹೆಚ್ಚು.

ಆದುದರಿಂದ ಕರ್ನಾಟಕದ ವಾಸ್ತವ ಕೇವಲ ಕನ್ನಡ-ಮಾಧ್ಯಮದಲ್ಲಿ ರೂಪಿಸಿದರೆ ಪೂರ್ಣಗೊಳ್ಳುವುದಿಲ್ಲ. ಇಂಗ್ಲಿಷ್ ಮಾಧ್ಯಮವನ್ನೂ ಸಹ ಉಪಯೋಗಿಸಿ ನಮ್ಮ ಬದುಕಿನ ಸತ್ಯವನ್ನು ವಾಸ್ತವೀಕರಿಸಬೇಕು.

**ಡಾ|| ಬಿ. ಕೃಷ್ಣಮೂರ್ತಿ**
ಸಪ್ತಾಪುರ, ೧೦ನೇ ಅಡ್ಡರಸ್ತೆ, ಧಾರವಾಡ - ೫೮೦ ೦೦೧

## ಸಾಕು

ನಾನಾ ಜಂಜಡಗಳಿಂದ
ಮತ್ತೆ ಮತ್ತೆ
ರಾಡಿಯಾಗುತ್ತಲೇ
ಇರುವ
ನನ್ನೆದೆಗೊಳವ
ತಿಳಿಯಾಗಿಸಲು
ನಿನ್ನ
ನೆನಪಷ್ಟೆ ಸಾಕು !

**ಡಾ|| ಕೆ. ಬಿ. ರಂಗಸ್ವಾಮಿ**
ತುಮಕೂರು – ೨

*(೫೬ನೇ ಪುಟದಿಂದ)*

ಬಲಿತೆಗೆದುಕೊಂಡಿರುವುದು ಹೆಚ್ಚಾಗಿ ಅಮಾಯಕ ಜನಸಾಮಾನ್ಯರನ್ನು ಹೆಂಗಸರು ಮಕ್ಕಳನ್ನು. ಅಲ್‌ಖೈದಾ ಉಗ್ರಗಾಮಿಗಳನ್ನು ಹತ್ತಿಕ್ಕುವುದು ಗುರಿಯಾಗಿದ್ದರೂ, ಈ ದೂರ ನಿಯಂತ್ರಣ ದಾಳಿಯಲ್ಲಿ ಸಾವನ್ನಪ್ಪುತ್ತಿರುವವರು ಸಾಧಾರಣ ಜನ. ಗುರಿ ತಪ್ಪಿದಾಗ ಹಾಗೆ ಗುರಿ ತಪ್ಪುವುದೂ ಸಾಮಾನ್ಯ. ೨೦೦೧ರಿಂದ ೨೦೧೨ರವರೆಗೆ ಯೆಮೆನ್‌ನ ಮೇಲೆ ನಡೆಸಿದ ಡ್ರೋನ್ ದಾಳಿಗಳಲ್ಲಿ ಸತ್ತವರ ಸಂಖ್ಯೆ ೮೨೬. ಇವರಲ್ಲಿ ೧೩೮ ಮಂದಿ ಜನಸಾಮಾನ್ಯರು ಮತ್ತು ೨೪ ಮಕ್ಕಳೂ ಸೇರಿದ್ದಾರೆ. ಇದು ವರದಿಯಾಗಿರುವುದು ಪತ್ರಿಕಾ ತನಿಖಾ ಸಂಸ್ಥೆ ನಡೆಸಿರುವ ಸಮೀಕ್ಷೆಯಿಂದ.

ಪತ್ರಕರ್ತರ ಈ ಸಂಘಟನೆಯು ಪಾಕಿಸ್ತಾನ ಮತ್ತು ಸೊಮಾಲಿಯಾಗಳ ಮೇಲೆ ನಡೆದ ಡ್ರೋನ್ ದಾಳಿಯಲ್ಲಿ, ಸತ್ತವರ ಸಂಖ್ಯೆಯನ್ನೂ ಸಂಗ್ರಹಿಸಿದೆ. ಪಾಕಿಸ್ತಾನದಲ್ಲಿ ಈ ಹಾವಳಿಯಿಂದ ೨೪೬೨ರಿಂದ ೩೧೪೫ ಜನ ಹತರಾಗಿದ್ದಾರೆ. ಶಾಲೆಗಳು ಮತ್ತು ಆಸ್ಪತ್ರೆಗಳ ಮೇಲೂ ದಾಳಿ ನಡೆದಿದೆ. ಪಾಕಿಸ್ತಾನದಲ್ಲಿ ಅಡಗಿಕೊಂಡಿದ್ದ ಒಸಾಮಾ ಬಿನ್ ಲಾಡೆನ್‌ಅನ್ನು ಕೊಂದಾದ ಮೇಲೆ ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮಾ ಡ್ರೋನ್ ದಾಳಿ ನಡೆದುದನ್ನು ಬಹಿರಂಗವಾಗಿ ಒಪ್ಪಿಕೊಂಡರು. ಪಾಕಿಸ್ತಾನ ಸರಕಾರ ಸಾರ್ವಜನಿಕ ಒತ್ತಡಕ್ಕೆ ಮಣಿದು ಅಮೆರಿಕ ಮತ್ತು ನ್ಯಾಟೋ ಕೇಂದ್ರಕ್ಕೆ ಪ್ರತಿಭಟನೆ ಸೂಚಿಸಿತ್ತು. ಆಫ್ಘಾನಿಸ್ತಾನದಲ್ಲಿರುವ 'ನ್ಯಾಟೋ' ಪಡೆಗಳಿಗೆ ಅಗತ್ಯವಾದ ಸಾಮಗ್ರಿಗಳನ್ನು ಸಾಗಿಸಲು ಇದ್ದ ರಸ್ತೆಯನ್ನು ಬಂದ್ ಮಾಡಿತು. ಆದರೆ ಇದು ಹೆಚ್ಚುಕಾಲ ಮುಂದುವರಿಯಲಿಲ್ಲ, ಎಲ್ಲ ಪ್ರತಿಭಟನೆಗಳೂ ಅಮೆರಿಕದ ಮುಂದೆ, ಅದರ ಒತ್ತಡದ ತಂತ್ರದ ಮುಂದೆ ಮುದುರಿಕೊಂಡಿತು. ಮತ್ತೆ ಪಾಕಿಸ್ತಾನ ರಸ್ತೆ ತೆರೆಯಬೇಕಾಯಿತು. ಈಗಲೂ ತಾಲಿಬಾನ್ ಮತ್ತು ಅಲ್‌ಖೈದಾ ಅಡಗುತಾಣಗಳ ಮೇಲೆ ಡ್ರೋನ್ ದಾಳಿ ಮುಂದುವರಿಯುತ್ತಿದೆ. ಸೊಮಾಲಿಯಾದಲ್ಲಿ ನಡೆಸಿರುವ ದಾಳಿಗಳಲ್ಲಿ ಮಕ್ಕಳೂ ಸೇರಿ ನೂರಾರು ಮಂದಿ ಸಾವನ್ನಪ್ಪಿದ್ದಾರೆ.




ಅಮೆರಿಕ ನಡೆಸುತ್ತಿರುವ ಈ ಬಗೆಯ ದೂರ ನಿಯಂತ್ರಿತ ದಾಳಿಗಳು ದುರಾಕ್ರಮಣದ ದಾಳಿಗಳಲ್ಲದೆ ಬೇರೇನೂ ಇಲ್ಲ. ಆದರೆ ಅಮೆರಿಕ ಪಾಕಿಸ್ತಾನ, ಯೆಮೆನ್, ಸೊಮಾಲಿಯಾ, ಇರಾನ್‌ಗಳ ಮೇಲೆ ತಾನು ಯುದ್ಧ ನಡೆಸುತ್ತಿಲ್ಲ ಎಂದು ಹೇಳಿಕೊಳ್ಳುತ್ತದೆ. ಎಲ್ಲ ಅಂತರರಾಷ್ಟ್ರೀಯ ನಿಯಮಗಳನ್ನು ಉಲ್ಲಂಘನೆ ಮಾಡಿ, ಆಧುನಿಕ ತಂತ್ರಜ್ಞಾನ ಬಳಸಿಕೊಂಡು ಅಮೆರಿಕ ಹೀನಕೃತ್ಯವನ್ನು ನಡೆಸುತ್ತಿದೆ. ಬಲಾಢ್ಯ ರಾಷ್ಟ್ರವಾಗಿರುವುದರಿಂದ ತಾನು ನಡೆದದ್ದೇ ದಾರಿ ಎನ್ನುವಂತೆ ಅದು ನಡೆದುಕೊಳ್ಳುತ್ತಿದೆ. ನೊಬೆಲ್ ಶಾಂತಿ ಪುರಸ್ಕೃತ ಅಧ್ಯಕ್ಷ ಬರಾಕ್ ಒಬಾಮಾ ಯಾವ ಅಳುಕೂ ಇಲ್ಲದೆ ಅಮೆರಿಕದ ದುಶ್ಚರ್ಯೆಗಳನ್ನು ಸಮರ್ಥಿಸಿಕೊಳ್ಳುತ್ತಿದ್ದಾರೆ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

ಆರ್. ಹೃಷೀಕೇಶ್

# ರಾಷ್ಟ್ರೀಯ ಜಲನೀತಿ ಮತ್ತು ನದಿಗಳ ಜೋಡಣೆಯ ಪರಿಣಾಮಗಳು

**ಈ**ಗ ಒಂದು ತಿಂಗಳ ಹಿಂದೆ ರಾ. ನಂ. ಅವರನ್ನು ಮಾತನಾಡಿಸಿ ಕೃಷ್ಣಾ ಜಲವಿವಾದದ ಎರಡನೆಯ ನ್ಯಾಯಾಧಿಕರಣದ ಐ-ತೀರ್ಪಿಗೆ ಕಾವೇರಿ ಐ-ತೀರ್ಪಿನ ಬಗ್ಗೆ ಬಂದ ಪ್ರತಿಕ್ರಿಯೆ ಏಕೆ ಬರಲಿಲ್ಲ ಎಂದು ಪ್ರಶ್ನಿಸಿದೆ. ಈ ಹಿಂದೆ ಅವರು ಬಚಾವತ್ ಆಯೋಗದ ವರದಿಯ ಪ್ರತಿ ಕೇಳಿದ್ದರು. ಪೂರ್ಣ ಪ್ರತಿ ದೊರಕದಿದ್ದುದರಿಂದ ಕೇವಲ ಆದೇಶದ ಪ್ರತಿ ಕೊಟ್ಟು ಸದ್ಯದಲ್ಲಿಯೇ ಎರಡನೆಯ ನ್ಯಾಯಾಧಿಕರಣದ ಆದೇಶ ಹೊರಬರುವುದರಿಂದ ಪೂರ್ಣ ವಿವರ ಸಿಗುವುದೆಂದು ಹೇಳಿದ್ದೆ. ಐ-ತೀರ್ಪು ಬಂದ ಒಂದು ವರ್ಷದ ಮೇಲೂ ಅವರು ನನ್ನ ಬಳಿ ಮಾತನಾಡಿರಲಿಲ್ಲ. ಆಗ ಅವರು ಇವೆಲ್ಲವನ್ನೂ ಸೇರಿಸಿ ಒಂದು ವಿಚಾರಸಂಕಿರಣ ಮಾಡೋಣವೆಂದು ಹೇಳಿದರು. ಅನಂತರ ಈ ಸಂಕಿರಣ ಏರ್ಪಾಟಾಯಿತು.

ಕೃಷ್ಣಾ ಜಲವಿವಾದದ ಬಗ್ಗೆ ಬಚಾವತ್ ವರದಿಯ ಪ್ರಕಾರ ಕರ್ನಾಟಕ ಕೃಷ್ಣಾಕೊಳ್ಳದಲ್ಲಿ ೭೩೪ ಟಿ.ಎಂ.ಸಿ. ನೀರು ಬಳಸಿಕೊಳ್ಳಬಹುದಾಗಿತ್ತು. ೨೦೦೦ನೇ ಇಸವಿಯಲ್ಲಿ ಈ ವರದಿ ಪುನರ್‌ವಿಮರ್ಶೆಗೆ ಒಳಪಡುತ್ತಿತ್ತು. ಈ ಮಧ್ಯೆ ಆಂಧ್ರ, ಕರ್ನಾಟಕ, ಮಹಾರಾಷ್ಟ್ರಗಳು ಆಲಮಟ್ಟಿ ಜಲಾಶಯದ ನೀರಿನ ಮಟ್ಟದ ಬಗ್ಗೆ ಸುಪ್ರೀಂ ಕೋರ್ಟಿನ ಮೆಟ್ಟಲೇರಿದುವು. ೨೦೦೦ದ ಸುಪ್ರೀಂಕೋರ್ಟಿನ ತೀರ್ಮಾನದಂತೆ ಆಲಮಟ್ಟಿ, ನಾರಾಯಣಪುರ ಜಲಾಶಯಗಳಿಂದ ೧೭೩ ಟಿ.ಎಂ.ಸಿ. ನೀರು ಬಳಸಿಕೊಳ್ಳಲು ಅನುಮತಿ ಸಿಕ್ಕಿತು. ಇನ್ನೂ ಅನೇಕ ನೀರಾವರಿ ಯೋಜನೆಗಳ ಬಗ್ಗೆ ವಿವಾದಗಳಿದ್ದುದರಿಂದ ಮೂರೂ ರಾಜ್ಯಗಳು ಮತ್ತೊಂದು ನ್ಯಾಯಾಧಿಕರಣ ಸ್ಥಾಪನೆಗೆ ಕೇಳಿಕೊಂಡವು. ಬ್ರಿಜೇಶ್ ಕುಮಾರ್ ನೇತೃತ್ವದ ಈ ನ್ಯಾಯಾಧಿಕರಣ ೩೦-೧೨-೨೦೧೦ ನೀಡಿದ ನಿರ್ಣಯದಂತೆ ಕೃಷ್ಣಾ ಕೊಳ್ಳದಲ್ಲಿ ಲಭ್ಯವಿರುವ ನೀರು ಮತ್ತು ಕರ್ನಾಟಕದ ಪಾಲನ್ನು ಕೆಳಕಂಡಂತೆ ತೀರ್ಮಾನಿಸಿದೆ :

| | ಕೃಷ್ಣಾ ಕೊಳ್ಳ | ಕರ್ನಾಟಕ |
|---|---|---|
| | ಟಿ.ಎಂ.ಸಿ. | |
| ಶೇ. ೭೫ರ ಅವಲಂಬನೆಯಂತೆ | ೨೧೭೩ | ೭೩೪ |
| ಶೇ. ೬೫ರ ಅವಲಂಬನೆಯಂತೆ | ೨೨೯೩ | ೭೯೯ |
| ಸರಾಸರಿ ಲಭ್ಯತೆ | ೨೫೭೮ | ೯೦೪ |
| ಪರಿಸರ ರಕ್ಷಣೆಗೆ (ಶೇ. ೬೫ಅನ್ನು ಅವಲಂಬಿಸಿ) | | ೭ |
| | | ೯೧೧ |

ಹೆಚ್ಚುವರಿಯಾಗಿ ಸಿಕ್ಕಿರುವ ೧೭೦ ಟಿ.ಎಂ.ಸಿ.ಯಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆಗೆ ೧೩೦ ಟಿ.ಎಂ.ಸಿ. ಭದ್ರಾ ಮೇಲ್ದಂಡೆ, ಸಿಂಗಟಲ್ಲೂರು ಏತ ನೀರಾವರಿ, ತುಂಗಾ ಮೇಲ್ದಂಡೆ ಯೋಜನೆ ಸೇರಿ ೪೦ ಟಿ.ಎಂ.ಸಿ. ನೀರು ಲಭ್ಯವಾಗಿದೆ.

ಕಾರಣಾಂತರಗಳಿಂದ ಈ ಯೋಜನೆಗಳು ಇನ್ನೂ ಕುಂಟುತ್ತಾ ಸಾಗುತ್ತಿದ್ದು, ನಿರೀಕ್ಷಿತ ಪ್ರಗತಿ ಕಂಡುಬರುತ್ತಿಲ್ಲ.

ಕೃಷ್ಣಾ ಕೊಳ್ಳ ಕರ್ನಾಟಕದ ಶೇ. ೬೦ ಭಾಗವನ್ನು ಹೊಂದಿದ್ದು, ಕರ್ನಾಟಕಕ್ಕೆ ಲಭ್ಯವಾಗುವ ನೀರು ಇಡೀ ಕಾವೇರಿ ಕೊಳ್ಳದಲ್ಲಿ ಸಿಗುವ ನೀರಿಗಿಂತ ಹೆಚ್ಚಿನದು.

ಬರಪೀಡಿತ ರಾಜ್ಯಗಳ ಒಳಿತಿಗಾಗಿ ಹೆಚ್ಚಿನ ನೀರು ಹರಿಯುವ ನದಿಗಳ ನೀರನ್ನು ಹರಿಸುವ ಯೋಜನೆಗಳು ಬಹಳ ಹಿಂದಿನಿಂದಲೂ ಕಾರ್ಯರೂಪದಲ್ಲಿವೆ. ನಮ್ಮಲ್ಲಿಯೇ ಬರಪೀಡಿತ ಶಿಂಷಾ ನದಿ ಬಯಲಿಗೆ ಕಾವೇರಿ ಬಯಲಿನಿಂದ ಹುಲಿಕಲ್ ಬಳಿ ಸುರಂಗ ತೋಡಿ ಸುಮಾರು ೯೦ ವರ್ಷಗಳ ಹಿಂದೆಯೇ ನೀರು ಹರಿಸಲಾಗಿದೆ. ಬ್ರಿಟಿಷ್ ಇಂಜಿನಿಯರುಗಳು ಹೆಚ್ಚಿನ ಪ್ರದೇಶವನ್ನು ನೀರಾವರಿಗೆ ಒಳಪಡಿಸಿ ಕಂದಾಯ ಹೆಚ್ಚಿಸಿಕೊಳ್ಳಲು ಕೃಷ್ಣಾ ಕಡಪಾ ಕಾಲುವೆ, ಮೆಟ್ಟೂರು ಜಲಾಶಯದಿಂದ ಹೆಚ್ಚಿನ ನೀರಾವರಿ ಮುಂತಾದ ಯೋಜನೆಗಳನ್ನು ಕಾರ್ಯಗತಗೊಳಿಸಿದರು. ಈ ಕಾಲುವೆಗಳು ಕೆಳಗಣ ಪ್ರದೇಶಗಳಲ್ಲಿದ್ದುದರಿಂದ ಮೇಲಣ ರಾಜ್ಯ ಸರ್ಕಾರಗಳ ಮೇಲೆ ಒತ್ತಡ ತಂದು ಯೋಜನೆಗಳನ್ನು ಪೂರ್ಣಗೊಳಿಸಿದರು.





ಕಾವೇರಿ ಹೊಂದಿರುವ ಭಾವನಾತ್ಮಕ ಬಾಂಧವ್ಯ ಕೃಷ್ಣಾಗೆ ಇಲ್ಲವೇನೋ ಎನಿಸುತ್ತಿದೆ. ಹಿಂದೆ ಉಪ ಮುಖ್ಯಮಂತ್ರಿಗಳಾಗಿದ್ದ ಎಂ. ಪಿ. ಪ್ರಕಾಶ್ ಅವರು ಕಾವೇರಿಗಿಂತ ಕೃಷ್ಣಾ ದೊಡ್ಡದಾಗಿದ್ದರೂ, ಅನೇಕ ಪುಣ್ಯಕ್ಷೇತ್ರಗಳಿದ್ದರೂ ಸಪ್ತನದಿಗಳಲ್ಲಿ 'ಕೃಷ್ಣಾ' ಹೆಸರಿಲ್ಲವಲ್ಲಾ ಎಂದು ವಿಷಾದಿಸಿದ್ದರು. ಕಾವೇರಿ ಕೊಳ್ಳದಲ್ಲಿನ ಮುಖ್ಯ ಜಲಾಶಯಗಳ ಸಂಗ್ರಹಣಾ ಸಾಮರ್ಥ್ಯ ೧೧೪.೫ ಟಿ.ಎಂ.ಸಿ. ಕೃಷ್ಣಾ ಕೊಳ್ಳದಲ್ಲಿ ಇದರ ಮೂರು ಪಟ್ಟು.

ಕಾವೇರಿ ನದಿಯಿಂದ ಬೆಂಗಳೂರಿಗೆ ನೀರು ಸರಬರಾಜು ನಮ್ಮ ಲೆಕ್ಕದಲ್ಲಿ ಆಗುತ್ತದೆ. ಹೆಚ್ಚಿಗಿನ ಅಥವಾ ವ್ಯರ್ಥವಾದ ನೀರು ಬೆಳ್ಳಂದೂರು, ವರ್ತೂರು ಕೆರೆಗಳ ಮೂಲಕ ದಕ್ಷಿಣ ಪಿನಾಕಿನಿ ಸೇರಿ ತಮಿಳುನಾಡಿಗೆ ಹೋಗುತ್ತದೆ. ಈಗ ತಮಿಳುನಾಡಿನವರು ಅದಕ್ಕೆ ಒಂದು ಬ್ಯಾರೇಜ್ ಕಟ್ಟಿ ೧೫೦೦೦ ಎಕರೆ ನೀರಾವರಿಗೆ ಉಪಯೋಗಿಸುತ್ತಾರೆ. ಈಗ ಕೆಲವು ದಿನಗಳ ಹಿಂದೆ ತಮಿಳುನಾಡಿನ ಸಂಸದರೊಬ್ಬರು ಈ ನೀರು ಕಡಿಮೆಯಾಗಿ ತಮ್ಮ ನೀರಾವರಿಗೆ ಧಕ್ಕೆಯಾಯಿತೆಂದು ಸಂಸತ್ತಿನಲ್ಲಿ ಬೊಬ್ಬೆ ಹಾಕಿದರು. ನಮ್ಮ ನೀರಿಗೆ ಅವರ ಬೊಬ್ಬೆ !

ಈಗ ಪೆನ್ನಾರ್ ಕಣಿವೆಯ ಕೆರೆಗಳ ಬಗ್ಗೆ ಸುಪ್ರೀಂ ಕೋರ್ಟಿನಲ್ಲಿ ವಿಚಾರಣೆ ನಡೆಯುತ್ತಿದೆ. ನನ್ನ ಮಿತ್ರ ಶ್ರೀ ಶ್ರೀರಾಮಯ್ಯನವರು ಪರಿಣತ ಸಾಕ್ಷಿದಾರರಾಗಿ ಕರ್ನಾಟಕದ ವಾದವನ್ನು ಸಮರ್ಥವಾಗಿ ಮಂಡಿಸಿದ್ದಾರೆ. ಈ ಬಗ್ಗೆ ಅವರು ತಮಗೆ ವಿವರವಾಗಿ ತಿಳಿಸಿಕೊಡುತ್ತಾರೆ. ರಾಷ್ಟ್ರೀಯ ಜಲನೀತಿ ಮತ್ತು ನದಿಗಳ ಜೋಡಣೆ ಬಗ್ಗೆ ಅವರೂ ಅನೇಕ ಸಭೆಗಳಲ್ಲಿ ಭಾಗವಹಿಸಿದ್ದಾರೆ. ಮಹಾದಾಯಿ ಜಲವಿವಾದದ ಬಗ್ಗೆಯೂ ಅವರು ತಿಳಿಸಿಕೊಡುತ್ತಾರೆ.

**ರಾಷ್ಟ್ರೀಯ ಜಲನೀತಿ**

೧೯೮೬ರಲ್ಲಿ ಕಾವೇರಿ ಮಾತುಕತೆಗಳು ಮುರಿದುಬಿದ್ದ ಮೇಲೆ ತಮಿಳುನಾಡು ಸರ್ಕಾರ ಕಾವೇರಿ ನ್ಯಾಯಾಧಿಕರಣ ಸ್ಥಾಪನೆಗೆ ಕೇಂದ್ರ ಸರ್ಕಾರಕ್ಕೆ ಒತ್ತಾಯಿಸಿತು. ಅದೇಕೋ ನಮ್ಮ ಸರ್ಕಾರಕ್ಕೆ, ರಾಜಕಾರಣಿಗಳಿಗೆ ನ್ಯಾಯಾಧಿಕರಣ ಸ್ಥಾಪನೆಯಿಂದ ನ್ಯಾಯ ಸಿಗುವುದೋ ಇಲ್ಲವೋ ಎಂಬ ಸಂದೇಹ, ಅದನ್ನು ಆದಷ್ಟು ಮಟ್ಟಿಗೆ ಮುಂದೂಡುವ ಪ್ರಯತ್ನ ಮಾಡಿದರು. ನ್ಯಾಯಾಧಿಕರಣಕ್ಕೆ ಯಾವುದೇ ಮಾರ್ಗಸೂಚಿಗಳಿಲ್ಲ. ಆದ್ದರಿಂದ ಮಾರ್ಗ ಸೂಚಿಗಳನ್ನೊಳಗೊಂಡ ರಾಷ್ಟ್ರೀಯ ಜಲನೀತಿಯೊಂದನ್ನು ರೂಪಿಸಬೇಕು ಎಂದು ಒತ್ತಾಯ ಮಾಡುತ್ತಾ ಬಂದೆವು. ೧೯೮೭ರಲ್ಲಿ ಬಂದ ರಾಷ್ಟ್ರೀಯ ಜಲನೀತಿಯಲ್ಲಿ ಇದರ ಬಗ್ಗೆ ಯಾವುದೇ ಪ್ರಸ್ತಾಪವಿರಲಿಲ್ಲ. ಆಗ ರಾಮಕೃಷ್ಣ ಹೆಗಡೆಯವರು ರಾಜೀವ್ ಗಾಂಧಿಯವರಿಗೆ ಪತ್ರ ಬರೆದು ಮಾರ್ಗಸೂಚಿಗಳನ್ನು ಸೇರಿಸುವಂತೆ ಒತ್ತಾಯಿಸಿದರು. ಆದರೆ ಅದು ಕಾರ್ಯಗತವಾಗಲೇ ಇಲ್ಲ. ೨೦೦೨ರ ಎರಡನೆಯ ಜಲನೀತಿಯಲ್ಲಿಯೂ ಮಾರ್ಗಸೂಚಿಗಳ ಅಗತ್ಯವಿರುವುದನ್ನು ಪ್ರತಿಪಾದಿಸಿತಷ್ಟೇ ಹೊರತು ರಾಜ್ಯಗಳ ಅಸಹಕಾರದಿಂದ ಮಾರ್ಗಸೂಚಿಗಳು ಮಂಡನೆಯಾಗಲಿಲ್ಲ. ಆದರೆ ನ್ಯಾಯಾಧಿಕರಣದ ತೀರ್ಪಿಗೆ ನಿರ್ದಿಷ್ಟ ಕಾಲಾವಧಿ ಸೂಚಿಸಿ ೧೯೫೬ರ ಅಂತರರಾಜ್ಯ ಜಲವಿವಾದ ಕಾಯಿದೆಗೆ ತಿದ್ದುಪಡಿ ತರಲಾಯಿತು. ಇದರಿಂದ ಗಜಗರ್ಭದಲ್ಲಿದ್ದ ಕಾವೇರಿ ಐ ತೀರ್ಪು ೨೦೦೭ರಲ್ಲಿಯಾದರೂ ಬೆಳಕು ಕಂಡಿತು.

ಈಗ ೨೦೧೨ರಲ್ಲಿಯೂ ಮತ್ತೊಂದು ಕರಡು ರಾಷ್ಟ್ರೀಯ ಜಲನೀತಿ ಸಿದ್ಧವಾಗಿದೆ. ಇದಕ್ಕೆ ರಾಜ್ಯಗಳು ಸಹಮತ ತೋರಿದಲ್ಲಿ ರಾಷ್ಟ್ರೀಯ ಜಲಸಂಪನ್ಮೂಲ ಪರಿಷತ್ತಿನ ಮತ್ತೊಂದು ಸಭೆ ಕರೆಯಲು ನಮ್ಮ ಪ್ರಧಾನಮಂತ್ರಿ ಮತ್ತು ಸದಸ್ಯರುಗಳಿಗೆ ವ್ಯವಧಾನ ಸಿಕ್ಕಿದರೆ ಪರಿಷ್ಕೃತ ಜಲನೀತಿ ಸಿದ್ಧವಾಗಬಹುದು.

**ಕರಡು ಜಲನೀತಿ ೨೦೧೨ರ ಪ್ರಮುಖ ಬದಲಾವಣೆಗಳು**

೧.೨ (v) ಅಂತರ್ಜಲ, ಜಲಚಕ್ರದ ಭಾಗವಾಗಿದ್ದರೂ, ಎಲ್ಲರಿಗೂ ಸೇರಿದ್ದರೂ, ಅದನ್ನು ವೈಯುಕ್ತಿಕ ಆಸ್ತಿ ಎಂದು ಪರಿಗಣಿಸಿದ ಪರಿಣಾಮವಾಗಿ ದುರ್ಬಳಕೆಗೆ ಕಾರಣವಾಗಿದೆ.

(ಇದಕ್ಕೆ ಪ್ರಾಯಶಃ ಅನೇಕ ರಾಜ್ಯಗಳು ವಿರೋಧ ವ್ಯಕ್ತಪಡಿಸಬಹುದು)

೧.೩ (ii) ಸಮಾಜತೆಯ ಸೂತ್ರ, ಸಾಮಾಜಿಕ ನ್ಯಾಯ, ನೀರಿನ ಬಳಕೆ ಮತ್ತು ಹಂಚಿಕೆಯಲ್ಲಿ ಪ್ರಮುಖವಾಗಿರಬೇಕು.

(iii) ಸಂಬಂಧಪಟ್ಟವರೊಂದಿಗೆ ಮಾತನಾಡಿ ಉತ್ತಮ ಆಡಳಿತ ಕೊಡುವುದರಿಂದ ಸಮಾನತೆ, ಸಾಮಾಜಿಕ ನ್ಯಾಯ, ದೀರ್ಘಕಾಲದ ಪರಿಹಾರಗಳಿಗೆ ಸಹಾಯವಾಗುತ್ತದೆ.

(iv) ನೀರಿನ ಅವಶ್ಯಕತೆಗಳನ್ನು ಸಾಮಾಜಿಕ ಸಂಪತ್ತೆಂದು ನಿರ್ವಹಿಸಿ, ರಾಜ್ಯವು ಸಮಾಜದ ಒಳಿತಿಗಾಗಿ ಆಹಾರ ಸ್ವಾವಲಂಬನೆ, ಜೀವನ ನಿರ್ವಹಣೆ, ಸಮಾನತೆ ಮತ್ತು ದೀರ್ಘಕಾಲದ ಅಭಿವೃದ್ಧಿಗೆ ನೀರು ಎಲ್ಲರಿಗೂ ಸಿಗುವಂತೆ ಮಾಡಬೇಕು.

೨.೩ ಅಂತರರಾಜ್ಯ ನದಿಗಳ ಸರ್ವತೋಮುಖ ಅಭಿವೃದ್ಧಿಗೆ ಸೂಕ್ತ ಸಂಪೂರ್ಣ ನ್ಯಾಯಾಂಗ ತಿದ್ದುಪಡಿ ಆಗಬೇಕು.

೩.೧ ಕೇಂದ್ರ ಮತ್ತು ರಾಜ್ಯಗಳು, ಸರ್ಕಾರಿ ಸಂಸ್ಥೆಗಳು ಪ್ರತಿಯೊಬ್ಬರಿಗೂ ಅಗತ್ಯ ಕುಡಿಯುವ ನೀರನ್ನು ಅವರ ಮನೆಯ ಬಳಿಯಲ್ಲಿಯೇ ಒದಗಿಸಿಕೊಡಬೇಕು.

೫.೫ ನದಿ ಜೋಡಣೆಗಳು ಕೇವಲ ಆಹಾರ ಸಂಗ್ರಹಣಾ ಸಾಮರ್ಥ್ಯದ ಹೆಚ್ಚಳವಷ್ಟೇ ಅಲ್ಲದೆ ಮೂಲಭೂತ ಸೌಕರ್ಯಗಳು, ಸಮಾನತೆ ಮತ್ತು ಸಾಮಾಜಿಕ ನ್ಯಾಯವನ್ನು ಒದಗಿಸಿಕೊಡಬೇಕು.

೯.೧ ಜಲಸಂಪನ್ಮೂಲ ಯೋಜನೆಗಳನ್ನು ರೂಪಿಸುವಾಗ ಸಾಮಾಜಿಕ, ಪರಿಸರದ ಮೇಲಾಗುವ ಪರಿಣಾಮಗಳನ್ನು ಯೋಜನೆಗಳಿಂದ ಸಂಕಷ್ಟಕ್ಕೊಳಗಾಗುವ ಮತ್ತು ಅಭಿವೃದ್ಧಿಗೊಳ್ಳುವ ಕುಟುಂಬಗಳೊಂದಿಗೆ ಚರ್ಚಿಸಿ ತಾಂತ್ರಿಕ ಮತ್ತು ಆರ್ಥಿಕ ಸಮಸ್ಯೆಗಳನ್ನು ಪರಿಗಣಿಸಬೇಕು.

೧೦.೧ ಯೋಜನೆಗಳಿಂದ ಸಂಕಷ್ಟಕ್ಕೊಳಗಾಗುವ ಕುಟುಂಬಗಳಿಗೆ ಅಗತ್ಯ ಅನುಕೂಲತೆಗಳನ್ನು ಮಾಡಿಕೊಡಲು ಯೋಜನೆಯ ಪ್ರಾರಂಭದಲ್ಲಿಯೇ ಅನುವುಮಾಡಿಕೊಡಬೇಕು.

೧೨.೧ ಕುಡಿಯುವ ನೀರಿನ ಲಭ್ಯತೆಯಲ್ಲಿ ಈಗಿರುವ ಹಳ್ಳಿಗಳು ಮತ್ತು ನಗರ ಪ್ರದೇಶಗಳ ನಡುವಣ ಅಂತರವನ್ನು ಕಡಿಮೆ ಮಾಡಬೇಕು. ಹಳ್ಳಿಗಳ ಜನರಿಗೂ ಒಳಚರಂಡಿ ಒದಗಿಸಿ ನೀರಿನ ಲಭ್ಯತೆಯನ್ನು ಹೆಚ್ಚು ಮಾಡಬೇಕು.

೧೬.೪ ಜಲನೀತಿಯ ಸಂಶೋಧನೆಗೆಂದು ಒಂದು ಸ್ವಾಯತ್ತ ಸಂಸ್ಥೆಯನ್ನು ಸ್ಥಾಪಿಸಿ ಜಲನೀತಿಯ ಕಾರ್ಯವೈಖರಿಯ ಬಗ್ಗೆ ನಿರಂತರ ಸಂಶೋಧನೆ ನಡೆಯಬೇಕು. ಈ ಸಂಶೋಧನೆಗಳ ಆಧಾರದ ಮೇಲೆ ಜಲಸಂಪನ್ಮೂಲ ಅಭಿವೃದ್ಧಿಯ ಬಗ್ಗೆ ಸೂಕ್ತ ಮಾರ್ಪಾಡು ತರಬೇಕು.

ಈ ಕರಡು ಜಲನೀತಿ ಪ್ರಕಟವಾಗುವ ಹೊತ್ತಿಗೆ ಎಷ್ಟು ಬದಲಾವಣೆಗಳಾಗುತ್ತವೋ ಗೊತ್ತಿಲ್ಲ. ಆದರೂ ೨೦೦೨ರ ಜಲ ನೀತಿಗಿಂತಲೂ ಉತ್ತಮ ಎಂದು ಹೇಳಬಹುದು.

**ನದಿಗಳ ಜೋಡಣೆ**

ಬರಪೀಡಿತ ರಾಜ್ಯಗಳ ಒಳಿತಿಗಾಗಿ ಹೆಚ್ಚಿನ ನೀರು ಹರಿಯುವ ನದಿಗಳ ನೀರನ್ನು ಹರಿಸುವ ಯೋಜನೆಗಳು ಬಹಳ ಹಿಂದಿನಿಂದಲೂ ಕಾರ್ಯರೂಪದಲ್ಲಿವೆ. ನಮ್ಮಲ್ಲಿಯೇ ಬರಪೀಡಿತ ಶಿಂಷಾ ನದಿ ಬಯಲಿಗೆ ಕಾವೇರಿ ಬಯಲಿನಿಂದ ಹುಲಿಕಲ್ ಬಳಿ ಸುರಂಗ ತೋಡಿ ಸುಮಾರು ೯೦ ವರ್ಷಗಳ ಹಿಂದೆಯೇ ನೀರು ಹರಿಸಲಾಗಿದೆ. ಬ್ರಿಟಿಷ್ ಇಂಜಿನಿಯರುಗಳು ಹೆಚ್ಚಿನ ಪ್ರದೇಶವನ್ನು ನೀರಾವರಿಗೆ ಒಳಪಡಿಸಿ ಕಂದಾಯ ಹೆಚ್ಚಿಸಿಕೊಳ್ಳಲು ಕೃಷ್ಣಾ ಕಡಪಾ ಕಾಲುವೆ, ಮೆಟ್ಟೂರು ಜಲಾಶಯದಿಂದ ಹೆಚ್ಚಿನ ನೀರಾವರಿ ಮುಂತಾದ ಯೋಜನೆಗಳನ್ನು ಕಾರ್ಯಗತಗೊಳಿಸಿದರು. ಈ ಕಾಲುವೆಗಳು ಕೆಳಗಣ ಪ್ರದೇಶಗಳಲ್ಲಿದ್ದುದರಿಂದ ಮೇಲಣ ರಾಜ್ಯ ಸರ್ಕಾರಗಳ ಮೇಲೆ ಒತ್ತಡ ತಂದು ಯೋಜನೆಗಳನ್ನು ಪೂರ್ಣಗೊಳಿಸಿದರು.

೧೯೭೨ರಲ್ಲಿ ಆಗಿನ ನೀರಾವರಿ ಮಂತ್ರಿಗಳಾದ ಕೆ. ಎಲ್. ರಾವ್ ಅವರು ಗಂಗಾ-ಕಾವೇರಿ ಜೋಡಣೆಯ ಬಗ್ಗೆ ಒಂದು ಸ್ಥೂಲ ವರದಿ ತಯಾರಿಸಿದರು.

೧೯೮೦ರಲ್ಲಿ ಕೇಂದ್ರ ಸರ್ಕಾರವು ರಾಷ್ಟ್ರೀಯ ಯೋಜನೆಯನ್ನು ತಯಾರಿಸಿ ಹಿಮಾಲಯ ನದಿಗಳ ಜೋಡಣೆ, ಪರ್ಯಾಯ ದ್ವೀಪದ ನದಿಗಳ ಜೋಡಣೆ, ಪಶ್ಚಿಮಾಭಿಮುಖವಾಗಿ ಹರಿಯುವ ನದಿಗಳ ಜೋಡಣೆ ಎಂದು ಪ್ರತ್ಯೇಕವಾಗಿ ವಿಭಾಗಿಸಿತು. ಇದರಲ್ಲಿನ ಪರ್ಯಾಯ ದ್ವೀಪದ ನದಿಗಳ ಜೋಡಣೆಯಿಂದ, ಅಂದರೆ ಮಹಾನದಿಯಿಂದ ವೈಗೈ ನದಿಯವರೆಗೆ ಜೋಡಣೆ ಮಾಡಿ ಕರ್ನಾಟಕಕ್ಕೆ ೨೮೩ ಟಿ.ಎಂ.ಸಿ., ಆಂಧ್ರಕ್ಕೆ ೧೦೪೫ ಟಿ.ಎಂ.ಸಿ., ತಮಿಳುನಾಡಿಗೆ ೫೨೩ ಟಿ.ಎಂ.ಸಿ., ಮಹಾರಾಷ್ಟ್ರಕ್ಕೆ ೨೮೩ ಟಿ.ಎಂ.ಸಿ. ಸಿಗಬಹುದೆಂದು ಅಂದಾಜು ಮಾಡಿತು. ಕರ್ನಾಟಕ ಮತ್ತು ಮಹಾರಾಷ್ಟ್ರಗಳಿಗೆ ನೇರವಾಗಿ ನೀರು ಸಿಗುವುದಿಲ್ಲವಾದ್ದರಿಂದ ಕರ್ನಾಟಕ ಕಾವೇರಿಕೊಳ್ಳದಲ್ಲಿ ೮೭ ಟಿ.ಎಂ.ಸಿ., ಮತ್ತು ಕೃಷ್ಣಾ ಕೊಳ್ಳದಲ್ಲಿ ೧೯೬ ಟಿ.ಎಂ.ಸಿ. ನೀರನ್ನು ತಮಿಳುನಾಡು ಮತ್ತು ಆಂಧ್ರಪ್ರದೇಶಗಳಿಗೆ ಕೊಡುವ ನೀರಿನಲ್ಲಿ ಕಡಿತ ಮಾಡಿಕೊಂಡು ತನ್ನ ಪ್ರದೇಶಗಳಲ್ಲಿ ಬಳಸಿ ಕೊಳ್ಳಬಹುದೆಂದು ಸೂಚಿಸಲಾಗಿತ್ತು.




... ಪಕ್ಷದವ್ರೆ 'ಕೈ' ಕೊಟ್ರು...
ಪಾಪ 'ಕೈಭಂಗ'ವಾಯ್ತು!!

ಜುಲೈ ೧೯೮೨ರಲ್ಲಿ ಕೇಂದ್ರ ಜಲಸಂಪನ್ಮೂಲ ಇಲಾಖೆಯ ಅಡಿಯಲ್ಲಿ ರಾಷ್ಟ್ರೀಯ ಜಲಾಭಿವೃದ್ಧಿ ಸಂಸ್ಥೆ ಎಂಬ ಸೊಸೈಟಿಯನ್ನು ಹುಟ್ಟುಹಾಕಿ ೨೦೫೦ ವರ್ಷದವರೆಗಿನ ಅಭಿವೃದ್ಧಿಯನ್ನು ಗುರಿಯಾಗಿಟ್ಟು ಕೊಂಡು ಯೋಜನಾ ವರದಿಗಳನ್ನು ತಯಾರಿಸಲು ಸೂಚಿಸಿತು. ಈ ಸಂಸ್ಥೆಯ ತಾಂತ್ರಿಕ ಸಲಹಾ ಸಮಿತಿಯು ಅನೇಕ ಸಭೆಗಳನ್ನು ನಡೆಸಿ ಸಂಬಂಧಪಟ್ಟ ರಾಜ್ಯಗಳೊಂದಿಗೆ ಪ್ರಾಥಮಿಕ ವರದಿಗಳನ್ನು ಚರ್ಚಿಸಿತು.

೧೯೯೮ರಲ್ಲಿ ನಡೆದ ತಾಂತ್ರಿಕ ಸಲಹಾಸಮಿತಿಯ ಸಭೆಯಲ್ಲಿ ತಮಿಳುನಾಡಿನ ಕಾವೇರಿ ಕೊಳ್ಳದ ಅವಶ್ಯಕತೆಯನ್ನು ೮೭ ಟಿ.ಎಂ.ಸಿ.ಯಿಂದ ೧೩೬ ಟಿ.ಎಂ.ಸಿ.ಗೆ ಹೆಚ್ಚಿಸಲಾಗಿದೆ. ಆದರೆ ಕರ್ನಾಟಕದ ಪಾಲನ್ನು ತೋರಿಸಲಾಗಿಲ್ಲ. ಕರ್ನಾಟಕಕ್ಕೆ ಸಿಗುವ ಹೆಚ್ಚಿನ ನೀರು ಕಾವೇರಿ ನ್ಯಾಯಾಧಿಕರಣದಿಂದ ಸಿಗುವ ನೀರಿಗಿಂತ ಹೆಚ್ಚಿಗೆ ಇರಬೇಕು ಎಂದು ಕರ್ನಾಟಕವು ಪ್ರತಿಪಾದಿಸಿತು. ರಾಷ್ಟ್ರೀಯ ಜಲಾಭಿವೃದ್ಧಿ ಸಂಸ್ಥೆ ಸ್ಪಷ್ಟೀಕರಣ ನೀಡಿ, ''ಹಿಂದಿನ ಅಂದಾಜು ಸರಿಯಾಗಿರಲಿಲ್ಲ. ತಮಿಳುನಾಡಿನ ಅವಶ್ಯಕತೆಗಳಿಗನುಗುಣವಾಗಿ ನೀರನ್ನು ಹಂಚಲಾಗಿದೆ'', ಎಂದು ತಿಳಿಸಿತು. ೧೯೯೮ರ ಅಂದಾಜಿನಂತೆ ಕರ್ನಾಟಕಕ್ಕೆ ಒಟ್ಟು ೧೬೪ ಟಿ.ಎಂ.ಸಿ. ನೀರು ಬರಬಹುದೆಂದು ಲೆಕ್ಕ ಹಾಕಲಾಗಿತ್ತು.

೧೯೯೯ರ ರಾಷ್ಟ್ರೀಯ ಜಲಾಭಿವೃದ್ಧಿ ಸಂಸ್ಥೆಯ ಸ್ಪಷ್ಟೀಕರಣದಂತೆ ಗೋದಾವರಿ ಕೊಳ್ಳದಲ್ಲಿ ಹೆಚ್ಚುವರಿ ನೀರು ಕೆಳಗಣ ಪ್ರದೇಶದಲ್ಲಿ ಮಾತ್ರ ಸಿಗುತ್ತದೆ, ಏತ ನೀರಾವರಿಯನ್ನು ೧೨೦ ಮೀಟರ್‌ಗೆ ಮಿತಿಗೊಳಿಸಿರುವುದರಿಂದ ಕರ್ನಾಟಕಕ್ಕೆ ನೇರವಾಗಿ ನೀರನ್ನು ಕೊಡಲಾಗುವುದಿಲ್ಲ, ಸಾಧ್ಯವಾದ ಕಡೆ ಕರ್ನಾಟಕವು ಕೆಳ ರಾಜ್ಯಗಳಿಗೆ ಕೊಡುವ ನೀರಿನಲ್ಲಿ ಕಡಿತ ಮಾಡಿಕೊಂಡು ನೀರಿನ ಬಳಕೆ ಮಾಡಿಕೊಳ್ಳಬೇಕೆಂದು ಸೂಚಿಸಿತು.

ಈ ವರದಿಗಳನ್ನೊಳಗೊಂಡ ಸಂಕ್ಷಿಪ್ತ ವರದಿಯನ್ನು ೦೯-೦೫-೨೦೦೨ರ ಪತ್ರದಂತೆ ಹಿಂದಕ್ಕೆ ಪಡೆಯಲಾಯಿತು.

ಅಂದಿನ ರಾಷ್ಟ್ರಪತಿ ಅಬ್ದುಲ್ ಕಲಾಂ ೧೪-೦೮-೨೦೦೨ರ ಭಾಷಣದಲ್ಲಿ ನದಿಗಳ ಜೋಡಣೆ ಬಗ್ಗೆ ಪ್ರಸ್ತಾಪಿಸಿ ಆದಷ್ಟು ಬೇಗ ಈ ಕಾರ್ಯದ ಅಗತ್ಯತೆಯನ್ನು ಒತ್ತಿ ಹೇಳಿದರು.

ರಾಷ್ಟ್ರಪತಿಯವರ ಭಾಷಣವನ್ನು ಆಧರಿಸಿ ಸುಪ್ರೀಂಕೋರ್ಟ್‌ನ ಹಿರಿಯ ವಕೀಲ ಶ್ರೀ ರಂಜಿತ್ ಕುಮಾರ್ ಅವರು ಸುಪ್ರೀಂ ಕೋರ್ಟಿಗೆ ಒಂದು ಅರ್ಜಿ ಸಲ್ಲಿಸಿ ನದಿಗಳ ಜೋಡಣೆ ಬಗ್ಗೆ ಉನ್ನತ ಸಮಿತಿಯನ್ನು ರಚಿಸುವಂತೆ ನಿರ್ದೇಶನ ನೀಡಲು ಕೋರಿದರು.

ಕೇಂದ್ರ ಸರ್ಕಾರವು ೨೫-೧೦-೨೦೦೨ರಂದು ಪ್ರಮಾಣ ಪತ್ರ ಸಲ್ಲಿಸಿ ನದಿಗಳ ಜೋಡಣೆ ಬಗ್ಗೆ ಯೋಜನೆ ತಯಾರಿಸಲಾಗಿದೆಯೆಂದೂ, ಸಂಬಂಧಪಟ್ಟ ರಾಜ್ಯಗಳ ನಡುವೆ ಈ ಬಗ್ಗೆ ಒಮ್ಮತ ಮೂಡಿಸಲು ಒಂದು ಕಾರ್ಯಪಡೆಯನ್ನು ರಚಿಸಲಾಗುತ್ತದೆಯೆಂದೂ ತಿಳಿಸಿತು. ೧೩-೧೨-೨೦೦೨ರಂದು ಮಾಜಿ ಕೇಂದ್ರ ಮಂತ್ರಿ ಸುರೇಶ್ ಪ್ರಭು ಅವರ ಅಧ್ಯಕ್ಷತೆಯಲ್ಲಿ ಕಾರ್ಯಪಡೆಯನ್ನು ಕೇಂದ್ರ ಸರ್ಕಾರ ರಚಿಸಿತು. ಈ ಕಾರ್ಯಪಡೆ ತನ್ನ ವರದಿಯನ್ನು ಡಿಸೆಂಬರ್ ೨೦೦೪ರಲ್ಲಿ ಕೇಂದ್ರಕ್ಕೆ ಸಲ್ಲಿಸಿತು. ಪ್ರಧಾನಮಂತ್ರಿಗಳ ನಿರ್ದೇಶನದಂತೆ ಜಲ ಸಂಪನ್ಮೂಲ ಸಚಿವಾಲಯ ಪರಿಸರವಾದಿಗಳು, ಸಾಮಾಜಿಕ ವಿಜ್ಞಾನಿಗಳು ಮತ್ತು ಇತರ ಪರಿಣತರನ್ನೊಳಗೊಂಡ ಸಮಿತಿಯನ್ನು ಅಂತರ ನದಿ ಜೋಡಣೆಗಳ ಎಲ್ಲಾ ವಿಷಯಗಳನ್ನು ಅಧ್ಯಯನ ಮಾಡಿ ವರದಿ ಸಲ್ಲಿಸಲು ರಚಿಸಿತು.

ಕರ್ನಾಟಕವು ರಾಷ್ಟ್ರೀಯ ಜಲಾಭಿವೃದ್ಧಿ ಸಂಸ್ಥೆಗೆ ೬-೯-೨೦೦೫ರಲ್ಲಿ ಪತ್ರ ಬರೆದು ತಮಿಳುನಾಡಿನ ಕಾವೇರಿ ಕೊಳ್ಳದಲ್ಲಿ ಮೊದಲು ಅಂದಾಜುಮಾಡಲಾಗಿದ್ದ ೮೭ ಟಿ.ಎಂ.ಸಿ. ನೀರನ್ನು ೧೯೧.೫ ಟಿ.ಎಂ.ಸಿ.ಗೆ ಹೆಚ್ಚಿಸಿ ಕರ್ನಾಟಕಕ್ಕೆ ಯಾವ ನೀರನ್ನೂ ಕೊಡಲಾಗಿಲ್ಲ; ಕರ್ನಾಟಕ ತನ್ನ ಪಾಲಿನ ನೀರನ್ನು ಪಡೆಯಲೇಬೇಕು ಎಂದು ಒತ್ತಾಯಿಸಿತು.

೨೦೦೯ರಲ್ಲಿ ರಾಷ್ಟ್ರೀಯ ಜಲಾಭಿವೃದ್ಧಿ ಸಂಸ್ಥೆಯು ತಮಿಳುನಾಡಿನೊಂದಿಗೆ ಏಕಪಕ್ಷೀಯವಾಗಿ ಪೆನ್ನಾರ್- ಪಾಲಾರ್- ಕಾವೇರಿ ನದಿಜೋಡಣೆ ಬಗ್ಗೆ ಪರ್ಯಾಯ ಯೋಜನೆಯನ್ನು ತಯಾರಿಸಿ ೨೨-೦೧-೨೦೧೦ರಂದು ಇದರ ಪ್ರತಿಯನ್ನು ಕರ್ನಾಟಕಕ್ಕೆ ಕೊಟ್ಟಿತು.

೨೩-೦೭-೨೦೧೦ರಂದು ನಡೆದ ಸಾಮರಸ್ಯ ಸಭೆಯಲ್ಲಿ ರಾಷ್ಟ್ರೀಯ ಜಲಾಭಿವೃದ್ಧಿ ಸಂಸ್ಥೆಯು ತೋರಿಸಿದ ಮಹಾನದಿ ಗೋದಾವರಿ-ಕೃಷ್ಣಾ ಪೆನ್ನಾರ್-ಕಾವೇರಿ-ವೈಗೈ ಜೋಡಣೆಯಲ್ಲಿ ಕರ್ನಾಟಕಕ್ಕೆ ಕೇವಲ ೧೩.೬೬ ಟಿ.ಎಂ.ಸಿ. ನೀರು ಕೊಡಲಾಗಿತ್ತು. ಈ ಸಭೆಯಲ್ಲಿ ಅಧ್ಯಕ್ಷರು ಎಲ್ಲಾ ರಾಜ್ಯಗಳೂ ತಮ್ಮ ಸ್ವಾರ್ಥವನ್ನು ಬದಿಗಿಟ್ಟು ರಾಷ್ಟ್ರೀಯ ದೃಷ್ಟಿಯಿಂದ ಎಲ್ಲರಿಗೂ ಒಳಿತಾಗುವ ಮನೋಭಾವ ತಾಳಬೇಕೆಂದು ಉಪದೇಶಿಸಿದರು. ೦೩-೦೮-೨೦೧೦ರಂದು ಕರ್ನಾಟಕದ ನೀರಾವರಿ ಮಂತ್ರಿಗಳು ಕೇಂದ್ರ ನೀರಾವರಿ ಮಂತ್ರಿಗಳಿಗೆ ಪತ್ರ ಬರೆದು ಈ ವಿಷಯದಲ್ಲಿ ನೀರು ಹಂಚಿಕೆ ಮಾಡಲು ಪರಿಣತರ ಸಮಿತಿಯನ್ನು ರಚಿಸಬೇಕೆಂದು ಕೋರಿದರು. ಇವಕ್ಕೆ ಪ್ರತಿಕ್ರಿಯಿಸುತ್ತಾ ರಾಷ್ಟ್ರೀಯ ಜಲಾಭಿವೃದ್ಧಿ ಸಂಸ್ಥೆಯು ಹೀಗೆ ಅಭಿಪ್ರಾಯಪಟ್ಟಿದೆ :

(i) ನದಿ ಜೋಡಣೆ, ನೀರಿನ ಲಭ್ಯತೆ, ತಾಂತ್ರಿಕ ಮತ್ತು ಆರ್ಥಿಕ ಸಾಧ್ಯತೆಗಳನ್ನು ಗಮನದಲ್ಲಿಟ್ಟುಕೊಂಡು ತಯಾರಿಸಲಾಗಿದೆ.
(ii) ನದಿ ಕೊಳ್ಳ ಅಥವಾ ಉಪನದಿ ಕೊಳ್ಳಗಳನ್ನು ಪರಿಗಣಿಸಲಾಗಿದೆಯೇ ಹೊರತು ರಾಜ್ಯಗಳ ಪಾಲನ್ನು ಪರಿಗಣಿಸಲಾಗಿಲ್ಲ.
(iii) ಏತ ನೀರಾವರಿಯ ಮಿತಿಯಿಂದ ಮೇಲಣ ಪ್ರದೇಶಗಳಿಗೆ ನೀರು ಒದಗಿಸಲಾಗಿಲ್ಲ.

ಮೊದಲಿನಿಂದಲೂ ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳು ಆಂಧ್ರಪ್ರದೇಶ ಮತ್ತು ತಮಿಳುನಾಡಿಗೆ ಬಿಡಬಹುದಾದ ನೀರನ್ನು ಕಡಿತಮಾಡಿ ಮೇಲಣ ಪ್ರದೇಶಗಳಿಗೆ ನೀರು ಕೊಡಬಹುದೆಂದು ೨೦೧೦ರವರೆಗೂ ಪ್ರತಿಪಾದಿಸುತ್ತಾ ಬಂದಿದ್ದ ಕೇಂದ್ರ ಸರ್ಕಾರ ಕರ್ನಾಟಕಕ್ಕೆ ದ್ರೋಹ ಬಗೆದು ಆಂಧ್ರಪ್ರದೇಶ ಮತ್ತು ತಮಿಳುನಾಡಿಗೆ ಸಹಾಯ ಮಾಡುತ್ತಿದೆ. ಈ ಬಗ್ಗೆ ನಮ್ಮ ಜನ ಎಚ್ಚೆತ್ತುಕೊಂಡು ಹೋರಾಟ ಮಾಡಬೇಕು. ಇಲ್ಲದಿದ್ದಲ್ಲಿ ನಮ್ಮ ಮುಂದಿನ ಜನಾಂಗ ನಮ್ಮನ್ನು ದೂಷಿಸುವುದರಲ್ಲಿ ಆಶ್ಚರ್ಯವಿಲ್ಲ.

೨೭-೦೨-೨೦೧೨ರಲ್ಲಿ ಸುಪ್ರೀಂ ಕೋರ್ಟ್ ತನ್ನ ನಿರ್ಧಾರವನ್ನು ಪ್ರಕಟಿಸಿ ನದಿಜೋಡಣೆಯ ಬಗ್ಗೆ ವಿಶೇಷ ಸಮಿತಿಯನ್ನು ರಚಿಸುವಂತೆ ಕೇಂದ್ರ ಸರ್ಕಾರಕ್ಕೆ ನಿರ್ದೇಶಿಸಿದೆ. ಈ ಬಗ್ಗೆ ಕೇಂದ್ರ ಸರ್ಕಾರ ಸೂಕ್ತ ಕ್ರಮ ತೆಗೆದುಕೊಳ್ಳದಿದ್ದಲ್ಲಿ ನ್ಯಾಯಾಂಗ ನಿಂದನಾ ಮೊಕದ್ದಮೆ ಹೂಡಲು ಅನುಮತಿ ನೀಡಿದೆ. ಮತ್ತೆ ಸುಪ್ರೀಂ ಕೋರ್ಟ್‌ನಲ್ಲಿ ಈ ಬಗ್ಗೆ ಹೋರಾಡಬೇಕಾಗಬಹುದು.

**ಆರ್. ಹೃಷೀಕೇಶ್**
ನಿವೃತ್ತ ಮುಖ್ಯ ಇಂಜಿನಿಯರ್, ಜಲಸಂಪನ್ಮೂಲ ಇಲಾಖೆ, ಕರ್ನಾಟಕ ಸರ್ಕಾರ



# ಪಾರ್ಕ್ಯುಪೈನ್ ಉಭಯಸಂಕಟ

ಆರ್ಥರ್ ಸೊಫೆನಾರ್ ಹತ್ತೊಂಬತ್ತನೆಯ ಶತಮಾನದ ಜರ್ಮನಿಯ ಪ್ರಮುಖ ದಾರ್ಶನಿಕ. ನಿರಾಶಾವಾದಿ. ಮಾನವ ಸಂಬಂಧಗಳ ಬಗ್ಗೆ ಅವನಿಗೆ ಅತೀವವಾದ ಸಂಶಯ. ಮಾನವ ಸಂಬಂಧಗಳಲ್ಲಿ ಸದಾ ಹುಳುಕು ಹುಡುಕುವ ಮನೋಭಾವ ಅವನದು. ಇದಕ್ಕೆ ಉತ್ತಮ ನಿದರ್ಶನವೆಂದರೆ ಸ್ನೇಹಿತರನ್ನು ಕುರಿತು ಅವನು ಆಡುವ ಮಾತುಗಳು. ಅವನ ಪ್ರಕಾರ, ಸ್ನೇಹಿತರೆಂದರೆ ಆಪತ್ತಿಗೆ ಒದಗಿಬರುವ ನೆಂಟರಲ್ಲ; ಅವರು ಬರಿಯ ಎರವಲುಗಾರರಷ್ಟೆ. ಸೊಫೆನಾರ್‌ನ ಅಭಿಪ್ರಾಯದಲ್ಲಿ 'ಬದುಕು ಒಂದು ಕೇಡು.' ಮದುವೆ ಮಾಡಿಕೊಳ್ಳದಿದ್ದರೆ ನಮಗೆ ಅಸಂತೋಷ; ಹಾಗೆಂದು ಮದುವೆ ಮಾಡಿಕೊಂಡರೂ ಸಂತೋಷವಿಲ್ಲ. ಒಂಟಿಯಾಗಿ ನಾವು ದುಃಖಿಗಳು; ಸಮಾಜದಲ್ಲೂ ದುಃಖಿಗಳೇ. ಈ ಸನ್ನಿವೇಶವನ್ನು ಸೊಫೆನಾರ್ ಪಾರ್ಕ್ಯುಪೈನ್‌ಗಳ ದುಸ್ಥಿತಿಗೆ ಹೋಲಿಸುತ್ತಾನೆ. ಈ ಪಾರ್ಕ್ಯುಪೈನ್‌ಗಳು ಮುಳ್ಳುಹಂದಿಯ ತರಹ ಮೈ ಮತ್ತು ಬಾಲದಲ್ಲಿ ಚೂಪಾದ ಮುಳ್ಳುಗಳನ್ನು ಹೊಂದಿರುವ ಒಂದು ವಿಶಿಷ್ಟ ಬಗೆಯ ಪ್ರಾಣಿಗಳು. ಚಳಿಗಾಲದಲ್ಲಿ ಇವು ತಮ್ಮ ದೇಹದ ಶಾಖವನ್ನು ಪಡೆದುಕೊಳ್ಳಲು ಒಂದಕ್ಕೊಂದು ಹತ್ತಿರವಾಗುತ್ತವೆ. ಆದರೆ ತಮ್ಮ ಚೂಪಾದ ಮುಳ್ಳುಗಳ ಇರಿತದಿಂದ ನೋವನ್ನು ಅನುಭವಿಸುತ್ತವೆ. ದೂರ ಸರಿದರೆ ಚಳಿ; ಹತ್ತಿರ ಬಂದರೆ ನೋವು. ಈ ಬಗೆಯ ದ್ವಂದ್ವ ನಮ್ಮ ಬದುಕಿನಲ್ಲಿ ನಮ್ಮ ಮಾನವ ಸಂಬಂಧಗಳಲ್ಲೂ ಅನುಭವ ವೇದ್ಯವಾಗಿದೆ.




ಮಾನವ ಸಂಬಂಧಗಳ ಸಂಕೀರ್ಣತೆ ಸದಾ ಒಂದು ಬಗೆಯ ವಿಸ್ಮಯವಾಗಿ ಒಬ್ಬ ಸಾಮಾಜಿಕ ಮನೋವಿಜ್ಞಾನಿಯಾಗಿರುವ ನನ್ನನ್ನು ಕಾಡುತ್ತಲೇ ಬಂದಿದೆ. ಪ್ರತಿಯೊಬ್ಬರೂ ಬೇರೊಬ್ಬರೊಂದಿಗೆ ಒಂದಲ್ಲ ಒಂದು ಬಗೆಯ ಸಂಬಂಧವನ್ನು ರೂಢಿಸಿಕೊಂಡು, ಅದನ್ನು ಕಾಯ್ದುಕೊಳ್ಳುವ ಪ್ರಯತ್ನಗಳಲ್ಲಿ ಸದಾ ನಿರತರಾಗಿಯೇ ಇರುತ್ತಾರೆ. ಈ ಬಗೆಯ ಸಂಬಂಧಗಳು ಕೇವಲ ಪ್ರಾಸಂಗಿಕವಾಗಿರಬಹುದು, ಭಾವನಾತ್ಮಕ ಸ್ವರೂಪದ್ದಾಗಿರಬಹುದು ಅಥವಾ ವ್ಯಾವಹಾರಿಕ ವಾಗಿರಲೂಬಹುದು. ಈ ಸಂಬಂಧಗಳ ತಳಹದಿ ಏನೇ ಇರಲಿ, ಅವುಗಳನ್ನು ಬೆಳೆಸಿ ಕಾಯ್ದುಕೊಳ್ಳುವ ಕಾರ್ಯ ಸುಲಭಸಾಧ್ಯವಲ್ಲ. ನಾವು ಸಂಬಂಧಗಳಿಗೆ ಹಾತೊರೆಯುತ್ತೇವೆ, ನಿಜ. ಮದುವೆ ಯಾಗುತ್ತೇವೆ, ಸ್ನೇಹಿತರನ್ನು ಮಾಡಿಕೊಳ್ಳುತ್ತೇವೆ, ಹಲವು ಕೂಟಗಳ ಸದಸ್ಯತ್ವವನ್ನು ಪಡೆದುಕೊಳ್ಳುತ್ತೇವೆ, ಅಕ್ಕಪಕ್ಕದವರೊಂದಿಗೆ ಆತ್ಮೀಯ ವಾಗಿ ಬದುಕಲು ಹಂಬಲಿಸುತ್ತೇವೆ, ಬಗೆಬಗೆಯ ವ್ಯವಹಾರಗಳಲ್ಲಿ ತೊಡಗಿಕೊಂಡು ಆ ವ್ಯವಹಾರಗಳ ಪಾಲುದಾರರೊಂದಿಗೆ ಹೊಂದಿಕೊಳ್ಳಲು ಪ್ರಯತ್ನಿಸುತ್ತೇವೆ. ಹಾಗಾದರೂ ಸಹ, ಈ ಎಲ್ಲ ಸಂಬಂಧಗಳಲ್ಲಿಯೂ ಒಂದಲ್ಲ ಒಂದು ಬಗೆಯ ಅಡ್ಡಿ-ಆತಂಕಗಳನ್ನು ಅನುಭವಿಸುತ್ತೇವೆ; ಸಂಬಂಧಗಳಲ್ಲಿ ತುಯ್ತ ಹಾಗೂ ಒತ್ತಡಗಳು ಸಂಭವಿಸುತ್ತಲೇ ಇರುತ್ತವೆ; ಯಾವುದೋ ಗಳಿಗೆಯಲ್ಲಿ – ಇನ್ನು ಸಾಧ್ಯವಾಗದು ಎಂಬ ಹಂತಕ್ಕೆ ತಲುಪಿದಾಗ – ಆ ಸಂಬಂಧಗಳು ಕಳಚಿಕೊಳ್ಳುತ್ತವೆ.

ನಾವೂ ಒಂದು ಬಗೆಯಲ್ಲಿ ಸೊಫೆನಾರ್‌ನ ಮುಳ್ಳುಹಂದಿಗಳೇ. ನಮ್ಮಲ್ಲಿ ಅನೇಕ ಬಗೆಯ ಮುಳ್ಳುಗಳು ಅಂತರ್ಗತವಾಗಿವೆ. ಹಮ್ಮು, ದುರಹಂಕಾರ, ಸಿಟ್ಟು, ಮುನಿಸು, ಮಾತ್ಸರ್ಯ, ಈರ್ಷೆ, ನಿಂದನೆ, ಖಂಡನೆ, ತೆಗಳಿಕೆ, ತಾತ್ಸಾರ, ಅಲಕ್ಷ್ಯ, ಸ್ವಾರ್ಥ ಮುಂತಾದ ಮಾನವ ಸಹಜ ಗುಣಗಳು ಮತ್ತು ಪ್ರಕ್ರಿಯೆಗಳು ನಮ್ಮ ಸಂಬಂಧಗಳಲ್ಲಿ ಮುಳ್ಳಾಗಿ ಪರಿಣಮಿಸುತ್ತವೆ. ಈ ಎಲ್ಲ ಸಂಬಂಧಗಳನ್ನು ಕಳಚಿಕೊಂಡು ಒಬ್ಬರಿಂದೊಬ್ಬರು ತೀರಾ ದೂರ ಸರಿದಾಗ, ಬದುಕಿನ ಭಾವುಕತೆಯನ್ನು ಕಳೆದುಕೊಂಡು ಅರ್ಥವಿಲ್ಲದ ಬರಡು ಬಾಳು ನಮ್ಮದಾಗುತ್ತದೆ. ಆದರೆ ಪರಸ್ಪರ ಹತ್ತಿರವಾದಾಗ, ನಮ್ಮಲ್ಲಿ ಅಂತರ್ಗತವಾಗಿರುವ ಬಗೆಬಗೆಯ ಮುಳ್ಳುಗಳಿಂದ ನೋವನ್ನು ಅನುಭವಿಸುವುದು ಸಹ ಅನಿವಾರ್ಯ ವಾಗುತ್ತದೆ. ನಮ್ಮ ಸಂಬಂಧಗಳು ಎಷ್ಟು ಅನ್ಯೋನ್ಯವಾಗಿರಬೇಕು ಮತ್ತು ಅವುಗಳ ನಡುವಣ ಅಂತರ ಎಷ್ಟಿರಬೇಕು ? ಈ ಪ್ರಶ್ನೆಗೆ ಸಮರ್ಪಕ ಉತ್ತರ ದೊರೆಯದು. ಭಾವುಕತೆಯಿಂದ ಸಂಪೂರ್ಣ ವಂಚಿತವಾಗದೆ, ಅದೇ ಸಮಯದಲ್ಲಿ ಸಂಬಂಧಗಳಿಂದ ನಮ್ಮ ಬದುಕಿಗೆ ಯಾವುದೇ ಘಾಸಿಯಾಗದ ರೀತಿಯಲ್ಲಿ, ನಮ್ಮ ಸಂಬಂಧಗಳ ನಡುವೆ ಒಂದು 'ಸುವರ್ಣ ಮಾಧ್ಯಮ'ವನ್ನು ಕಂಡುಕೊಳ್ಳುವುದೇ ಮಾನವ ಸಂಬಂಧಗಳ ನಿರ್ವಹಣೆಯಲ್ಲಿನ ಪ್ರಮುಖ ಸವಾಲು.

**ಎಚ್. ಎಸ್. ಈಶ್ವರ**
ಎಚ್.ಐ.ಜಿ. ೧೧, ಕೆ.ಎಚ್.ಬಿ. ಕಾಲೋನಿ
ಮೊದಲನೇ ಹಂತ, ಬಸವೇಶ್ವರನಗರ,
ಬೆಂಗಳೂರು - ೫೬೦ ೦೭೯

## ಓದಿ; ಚಂದಾದಾರರಾಗಿ, ಚಂದಾ ಉಡುಗೊರೆ ನೀಡಿ







**ಜೀವನದ ಎಲ್ಲ ಕ್ಷೇತ್ರಗಳ ಆಗುಹೋಗುಗಳನ್ನು**
**ಗಂಭೀರ ವಿಶ್ಲೇಷಣೆಗೆ ಒಳಪಡಿಸುವ**



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

**ನವಕರ್ನಾಟಕ ಪ್ರಕಾಶನ**







ಗೌರವ ಸಂಪಾದಕರು : ಡಾ|| ಜಿ. ರಾಮಕೃಷ್ಣ
ಸಂಪಾದಕರು : ಡಾ|| ಸಿದ್ದನಗೌಡ ಪಾಟೀಲ

ಆಕಾರ ಡಿಮ್ಮೈ 1/4 ಪುಟಗಳು 64 (ವಿಶೇಷಾಂಕ 256)
ಸಾದಾ ಪ್ರತಿ : ರೂ. 12 (ವಿಶೇಷಾಂಕ ರೂ. 35)
ವಾರ್ಷಿಕ ಚಂದಾ ರೂ. 150
ಮೂರು ವರ್ಷಕ್ಕೆ ರೂ. 350







ಈ ಪ್ರಗತಿಪರ - ವೈಚಾರಿಕ ನಿಲುವಿನ ಪತ್ರಿಕೆಯನ್ನು ನೀವು ಮೆಚ್ಚಿದ್ದೀರೆಂದಾದಲ್ಲಿ ದಯವಿಟ್ಟು ಚಂದಾದಾರರಾಗಿ. ಹಾಗೆಯೇ, ನಿಮ್ಮ ಸ್ನೇಹಿತರಿಗೂ ಈ ಪತ್ರಿಕೆಯನ್ನು ಪರಿಚಯಿಸಿ; ಅವರೂ ಓದಿ ಚಂದಾದಾರರಾದಲ್ಲಿ ಪತ್ರಿಕೆಯ ಪ್ರಸಾರ ಹೆಚ್ಚುತ್ತದೆ. ನಮ್ಮ ಶ್ರಮ ಸಾರ್ಥಕವಾಗುತ್ತದೆ.







ನೀವು ಭಾಗವಹಿಸುವ ಶುಭ ಸಮಾರಂಭಗಳಲ್ಲಿ, ಹುಟ್ಟುಹಬ್ಬಗಳಲ್ಲಿ, ಪ್ರತಿಭಾ ಪುರಸ್ಕಾರ ನೀಡುವ ಸಂದರ್ಭದಲ್ಲಿ ಉಡುಗೊರೆ ನೀಡ ಬೇಕಾದಾಗ 'ಹೊಸತು' ಪತ್ರಿಕೆಯ ಚಂದಾವನ್ನೇ ಉಡುಗೊರೆ ರೂಪದಲ್ಲಿ ನೀಡಬಹುದಲ್ಲವೆ? ಯಾರಿಗೆ ಉಡುಗೊರೆ ನೀಡಬೇಕೆಂದಿರುವಿರೋ ಅವರ ವಿಳಾಸ ಮತ್ತು ಚಂದಾ ಮೊಬಲಗನ್ನು ನಮ್ಮ ವಿಳಾಸಕ್ಕೆ ಕಳಿಸಿದರೆ ನೀವು ತಿಳಿಸಿದ ವಿಳಾಸಕ್ಕೆ ಪತ್ರಿಕೆ ಕಳಿಸುವ ಜವಾಬ್ದಾರಿ ನಮ್ಮದು.

ಚಂದಾ ನೋಂದಾವಣಿ ಚಳುವಳಿಯನ್ನು ಬೆಂಬಲಿಸಿ
ನಿಮ್ಮ ಸ್ನೇಹಿತರನ್ನೂ ಚಂದಾದಾರರನ್ನಾಗಿಸಿ
ಅವರೂ ಚಂದಾ ಉಡುಗೊರೆ ನೀಡುವಂತೆ ಪ್ರೇರೇಪಿಸಿ

**'ಹೊಸತು' ತಿಂಗಳ ಪತ್ರಿಕೆ, 15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001**

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

